# ಭಗ್ನಸ್ವಪ್ನ

(ಕಾದಂಬರಿ)

ಡಾ. ಕೃಷ್ಣಾನಂದ ಕಾಮತ್

ಪ್ರಕಾಶಕರು :
ಪ್ರಿಯದರ್ಶಿನಿ ಪ್ರಕಾಶನ
ನಂ. ೧೩೮, ೭ನೇ 'ಸಿ' ಮುಖ್ಯರಸ್ತೆ
ಹಂಪಿನಗರ, ಬೆಂಗಳೂರು - ೫೬೦ ೧೦೪

# ಭಗ್ನಸ್ವಪ್ನ

(ಕಾದಂಬರಿ)

ಲೇಖಕರು:

**ಡಾ. ಕೃಷ್ಣಾನಂದ ಕಾಮತ್**

ಪ್ರಕಾಶಕರು :

**ಪ್ರಿಯದರ್ಶಿನಿ ಪ್ರಕಾಶನ**

ನಂ ೧೩೮, ೭ನೇ 'ಸಿ' ಮುಖ್ಯ ರಸ್ತೆ
ಹಂಪಿನಗರ, ಬೆಂಗಳೂರು- ೫೬೦ ೧೦೪



ಮೊದಲ ಮುದ್ರಣ : ೧೯೭೦
ಎರಡನೆ ಮುದ್ರಣ : ೨೦೧೨

ಪುಟ : ೧೩೪

ಬೆಲೆ : ರೂ. ೯೦/-

**ಕಾಗದ : 70 GSM NS Maplitho Paper**

ರಕ್ಷಾಪತ್ರ ವಿನ್ಯಾಸ : **ಮೋನಪ್ಪ**

*ಛಾಯಾಕ್ಷರ ಜೋಡಣೆ :*

**ವರ್ಷಿಣಿ ಗ್ರಾಫಿಕ್ಸ್**

*ಬೆಂಗಳೂರು-40, ಫೋ : 9242431040*

ಮುದ್ರಕರು

**ಸ್ನೇಹಾ ಪ್ರಿಂಟರ್ಸ್**

*ನಂ. 114, 4ನೇ ಅಡ್ಡರಸ್ತೆ, ಬಿ.ಸಿ.ಸಿ. ಬಡಾವಣೆ*
*ಅತ್ತಿಗುಪ್ಪೆ, ವಿಜಯನಗರ 2ನೇ ಹಂತ*
*ಬೆಂಗಳೂರು - ೧೦೪. ಫೋ : 23392814*

# ನನ್ನ ಮಾತು

ವಿದೇಶಗಳಲ್ಲಿ ಉಚ್ಚ ಶಿಕ್ಷಣ-ತರಬೇತಿಗಳನ್ನು ಪಡೆದು ಆ ದೇಶಗಳಲ್ಲಯೇ ನೆಲೆಸಲು ಯತ್ನಿಸುವ ಭಾರತೀಯ ಬುದ್ಧಿಜೀವಿಗಳ ಬಗೆಗೆ ಸರಕಾರ, ಸಮಾಜ,, ಶೈಕ್ಷಣಿಕ ಸಂಶೋಧನಾ ಸಂಸ್ಥೆಗಳು ಸಾಕಷ್ಟು ಕೂಗನ್ನು ಎಬ್ಬಿಸಿವೆ. ನವಯುವ ಜನಾಂಗ ಪಾಶ್ಚಾತ್ಯರ ಐಷಾರಾಮಗಳಿಗೆ ಮಾರು ಹೋಗಿದೆಯೆಂದು ಹಳಬರು ಘೋಷಿಸಿದರೆ ದೇಶಪ್ರೇಮವಿಲ್ಲವೆಂದು ರಾಜಕಾರಣಿಗಳು ಸಾರಿದ್ದಾರೆ. ಹೊರನಾಡಿಗೆ ಹೋಗುವವರನ್ನು ನಿಯಂತ್ರಿಸಬೇಕೆಂದು ಸರಕಾರ ಯೋಚಿಸಿದರೆ ಆ ದೇಶದಲ್ಲಿ ನಿಲ್ಲಗೊಡದಂತೆ ಯತ್ನಿಸಬೇಕೆಂದು ಜನತೆ ಬೇಡುತ್ತಿದೆ. ಆದರೆ ಇವರನ್ನೆಲ್ಲ ನಮ್ಮ ದೇಶದಲ್ಲಿಯೇ ಒತ್ತಾಯದಿಂದ ಇರಿಸಿಕೊಂಡ ಮೇಲೆ ಮುಂದೇನು? ಎಂಬ ಪ್ರಶ್ನೆಗೆ ಯಾರೂ ಹೆಚ್ಚು ತಲೆ ಕೆಡಿಸಿಕೊಂಡತೆ ಅನಿಸುವುದಿಲ್ಲ. ದಿಲ್ಲಿಯ ವಿಜ್ಞಾನಿಯೊಬ್ಬ ಭಾರತದಲ್ಲಿ ತನಗೇನೂ ಭವಿಷ್ಯವಿಲ್ಲವೆಂದು ಆತ್ಮಹತ್ಯೆ ಮಾಡಿಕೊಂಡ ನಂತರ ಸರಕಾರ, ವೈಜ್ಞಾನಿಕ ಕೇಂದ್ರ (Scientist's pool)ವನ್ನು ಸ್ಥಾಪಿಸಿ ಕೋಟ್ಯಾವಧಿ ರೂಪಾಯಿ ಸೂರೆ ಮಾಡಿದರೂ ನಿಜವಾದ ಸಮಸ್ಯೆ ಪರಿಹಾರವಾದೀತೇ? ಎಂದು ಆಲೋಚಿಸಬೇಕಾಗಿದೆ.

ತಿಂಗಳಿಗೆ ಐದೋ-ಆರೋ ನೂರು ರೂಪಾಯಿ ಕೊಟ್ಟು ಯಾವದೋ ಒಂದು ಸಂಸ್ಥೆಗೆ ಈ ವಿಜ್ಞಾನಿಯನ್ನು "ಉಂಬಳಿ"ಯಾಗಿ ಕೊಟ್ಟರೆ ತನ್ನ ಕೆಲಸ ಮುಗಿಯಿತೆಂದು ಸರಕಾರದ ವಿಚಾರ. ಸರ್ಜನನನ್ನು ವೈದ್ಯಕೀಯ ಭಾಂಡಾರದ ಮೇಲ್ವಿಚಾರಕನನ್ನಾಗಿ ಮಾಡುವದು. ಸಂಶೋಧನೆಯಲ್ಲಿ ಪರಿಣತನಿಗೆ ಕೆಳಗಿನ ವರ್ಗಗಳ ವಿದ್ಯಾರ್ಥಿಗಳಿಗೆ ಕಲಿಸಲು ಹಚ್ಚುವದು, ಸಾಮಾನ್ಯವಾದ ಮಾತು. ಒಂದೆರಡು ವರ್ಷಗಳಲ್ಲಿ "ಪೋಟಗಿ" ನಿಂತು ಬಿಡುತ್ತದೆ. ಅಂದಿನ ತನಕ ಸೇವೆ ಪಡೆದ ಸಂಸ್ಥೆ ತಮ್ಮಲ್ಲಿ ನೌಕರಿ ಇಲ್ಲವೆಂದು ಬಾಗಿಲು ಮುಚ್ಚಿ ಬಿಡುತ್ತದೆ. ಅಲ್ಲಿ ಇಲ್ಲಿ ಹತ್ತಾರು ಕಡೆ ಇಂಟರ್‌ವ್ಯೂಗಳಲ್ಲಿ ಚಹಾ ಸೇವಿಸಿ ಬೀಸ್ಕಿಟು ತಿನ್ನುವ ಅಧಿಕಾರಿಗಳು ತಾಂತ್ರಿಕ ವಿಷಯ ಜ್ಞಾನವಿಲ್ಲದೇ ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರ ಕೊಟ್ಟು ನಂತರ ಯಾವುದೋ ಮಂತ್ರಿಯ ಆಪ್ತನಿಗೋ, ರಾಜಕಾರಣಿಯ ಸಂಬಂಧಿಕನಿಗೋ ಆ ನೌಕರಿ ಮೀಸಲಿದೆ! ಎಂದು ತಿಳಿದಾಗ

ಜೋಲು ಮುಖ ಹಾಕಿಕೊಂಡು ಮನೆಗೆ ಮರಳುವದು ವಿಜ್ಞಾನಿಗೆ ರೂಢಿಯಾಗಿ ಬಿಡುತ್ತದೆ. ಅಕ್ಕ-ಪಕ್ಕದವರೂ "ಅಯೋಗ್ಯ"ನೆಂದು ಪಿಸು ಮಾತಿಗೆ ಪ್ರಾರಂಭಿಸುತ್ತಾರೆ. ದಿನ ರಾತ್ರಿ ರಕ್ತ ಸುಟ್ಟು ಬೇರೆ ದೇಶದ ವಿದ್ಯಾರ್ಥಿಗಳೊಂದಿಗೆ ಸ್ಪರ್ಧಿಸಿ ಶ್ರೇಯಸ್ಸಿನೊಡನೆ, ಪದವಿಗಳನ್ನು ಪಡೆದು, ತನ್ನ ದೇಶ ಬಾಂಧವರೊಡನೆ ಒಂದಾಗಿ ಬಾಳಿ ಬದುಕಲು ಬಂದ ಭಾರತೀಯನಿಗೆ ತನ್ನ ದೇಶದಲ್ಲಿಯೇ ಸ್ಥಳವಿಲ್ಲ! ಎಂಬ ಭಾವನೆ ಬಲು ಬೇಗ ಮೂಡುತ್ತದೆ. ಅಂತೆಯೇ ತನಗೆ ಹೆಚ್ಚಿನ ತರಬೇತಿ ನೀಡಿ ಎಲ್ಲ ರೀತಿಯ ಉತ್ತೇಜನ ಸೌಕರ್ಯಗಳನ್ನು ದೊರಕಿಸಿಕೊಟ್ಟ ವಿದೇಶಕ್ಕೇ ತಿರುಗಿ ಶರಣು ಹೋಗುತ್ತಾನೆ. ಇಂತಹರನ್ನೆ ಎದುರು ನೋಡುತ್ತಿರುವ ವಿದೇಶೀಯ ಸಂಶೋಧನೆ-ಶೈಕ್ಷಣಿಕ ಸಂಸ್ಥೆಗಳು ಹಾರ್ದಿಕ ಸ್ವಾಗತ ನೀಡಿ ವರ್ಷಕ್ಕೆ ೧೪-೧೫ ಸಾವಿರ ಡಾಲರುಗಳ ವೇತನವೆಂದು ನಿರ್ಧರಿಸಿ, ವಿಮಾನಿನ ತಿಕೀಟಿನ ಏರ್ಪಾಡು ಮಾಡಿ ಒಂದು ತಿಂಗಳ ಸಂಬಳವನ್ನೂ, ಮುಂಗಡ ಕೊಡಮಾಡುತ್ತಾರೆ. ಇಷ್ಟೊಂದು ಅಂತರವಿದೆ ತಾಯಿನಾಡು ಮತ್ತು "ಸಾಕು" ನಾಡುಗಳಲ್ಲಿ. ಮಾತೃಭೂಮಿಯೆಂದು ಒಣ ಅಭಿಮಾನದಿಂದ ಇಲ್ಲಿಯೇ ಇರಬಯಸಿದವರು ಪ್ರತಿದಿನವೂ ಸತ್ತು ಬದುಕುತ್ತಾರೆ.

ಭಾರತಕ್ಕೆ ಮರಳಿದ ವಿಜ್ಞಾನಿಯೊಬ್ಬನ ಆಸೆ-ಆಕಾಂಕ್ಷೆಗಳು, ಮರಳಿದ ಮೇಲೆ ಎದುರಿಸಬೇಕಾದ ಸಮಸ್ಯೆಗಳು, ಮುಂತಾದವನ್ನು ಕಾದಂಬರಿಯ ಮುಖಾಂತರ ಚಿತ್ರಿಸಲು ಯತ್ನಿಸಿದ್ದೇನೆ. ಇಲ್ಲಿ ಬರುವ ವ್ಯಕ್ತಿಗಳು ಕಾಲ್ಪನಿಕವಿದ್ದರೂ ಬರುವ ಘಟನೆಗಳು ಕಾಲ್ಪನಿಕ! ಎಂದು ಹೇಳುವಂತಿಲ್ಲ. ಉಚ್ಚ ಶಿಕ್ಷಣ ಮುಗಿಸಿ ಸ್ವದೇಶಕ್ಕೆ ಮರಳಿದ ಅನೇಕ ವಿಜ್ಞಾನಿಗಳ ಹೃದಯದ ಬಡಿತವನ್ನು ತೀರ ಹತ್ತಿರದಿಂದ ಕೇಳಿ ಅರ್ಥ ಮಾಡಿಕೊಳ್ಳಲು ಯತ್ನಿಸಿದ್ದೇನೆ. ಕಳೆದ ಆರು ವರ್ಷಗಳಲ್ಲಿ ನಾನೂ ಈ ಬಗೆಯ ಅನುಭವಗಳನ್ನು ಕಂಡವ. ರಾಜಸ್ಥಾನದ ಮರುಭೂಮಿಯ ಹಳ್ಳಿಯೊಂದರಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳನ್ನು ತರಬೇತು ಮಾಡಿದೆ. ದೈನಂದಿನ ಕೊಲೆ, ಸುಲಿಗೆ ಅವಮಾನಗಳಿಂದ ಪೀಡಿತವಾದಂಥ ಬಂಗಾಲದಲ್ಲಿ ಎರಡು ವರ್ಷ ಸಂಶೋಧನಾ ಕ್ಷೇತ್ರದಲ್ಲಿ ದುಡಿದೆ. ಹಿಮಾಲಯದ ಪ್ರದೇಶದಲ್ಲಿ ಕೂಡ ಬೆನ್ನು ಮುರಿದು ದುಡಿಯಲು ಸಿದ್ಧನಿದ್ದೆ. ಆದರೂ ನನ್ನ ಉಚ್ಚ ಶಿಕ್ಷಣ, ವಿದೇಶದಲ್ಲಿಯ ತರಬೇತಿ, ಡಾಕ್ಟರೇಟುಗಳ ಪ್ರಯೋಜನವನ್ನು ಸರಕಾರ, ಸಮಾಜ, ಸಂಸ್ಥೆಗಳು ಮಾಡಿಕೊಳ್ಳಲು ಕಿಂಚಿತ್ ಕೂಡ ಆಸ್ಥೆ ತೋರಿಸದೇ ಇದ್ದುದರಿಂದ ಇಷ್ಟು ವರ್ಷ ಬೆವರು ಸುರಿಸಿ ಗಳಿಸಿದ ವಿದ್ಯೆಗೆ ನಾನು ಕೊನೆಯ ನಮಸ್ಕಾರ ಹಾಕಬೇಕಾಯಿತು. ನಾನುಂಡ ಅನೇಕ ಕಹಿ ಅನುಭವಗಳು ಕಾದಂಬರಿಯಲ್ಲಿ ಅಲ್ಲಲ್ಲಿ ನುಸುಳಿಕೊಂಡಿವೆ. ಕಾದಂಬರಿಯಲ್ಲಿ ಬರುವ ಪ್ರಸಂಗಗಳು

ನಂಬಲಸಾಧ್ಯವಾದವು! ಎಂದು ತೋರಿದರೆ ಅದಕ್ಕೆ ನಮ್ಮ ದೇಶದ ವಸ್ತು ಸ್ಥಿತಿಯೇ ಕಾರಣ ಹೊರತು ನಾನಲ್ಲ. ಓದುಗರಿಗೆ ಈ ಸಮಸ್ಯೆಯ ಆಳ ಸ್ವಲ್ಪವಾದರೂ ತಿಳಿಯುವಂತಾದರೆ ನನ್ನ ಯತ್ನ ಸಫಲವಾಯಿತೆಂದು ತಿಳಿಯುವೆ.

ನನ್ನ ಪ್ರಥಮ ಕಾದಂಬರಿಯನ್ನು ಸಮಾಜ ಪುಸ್ತಕಾಲಯ ಧಾರವಾಡ ಇವರು ಪ್ರಕಾಶಿಸಲು ಮುಂದೆ ಬಂದು ಅಲ್ಪ ಸಮಯದಲ್ಲಿಯೇ ಅಂದವಾಗಿ ಮುದ್ರಿಸಿ ಹೊರತಂದಕ್ಕಾಗಿ ಕೃತಜ್ಞತೆಗಳು. ವಾಚಕರು ತಮ್ಮ ಅಭಿಪ್ರಾಯವನ್ನು ತಿಳಿಸಿದರೆ ಹೆಚ್ಚಿನ ಋಣಿಯಾಗುವೆ.

ಕೃಷ್ಣಾನಂದ ಕಾಮತ್

೧-೯-೧೯೭೧

# ಎರಡನೆ ಮುದ್ರಣದ ಮುನ್ನುಡಿ

ತನ್ನ ಮೊದಲ ಪುಸ್ತಕವಾದ "ನಾನೂ ಅಮೇರಿಕೆಗೆ ಹೋಗಿದ್ದೆ"ಯಿಂದ ಒಮ್ಮೆಲೇ ಗಣ್ಯ ಸಾಹಿತಿಗಳ ಸಾಲಿನಲ್ಲಿ ಸೇರಿಹೋದ ಡಾ. ಕೃಷ್ಣಾನಂದ ಕಾಮತರ "ಭಗ್ನಸ್ವಪ್ನ", ಅವರ ಎರಡನೆಯ ಕೃತಿಯಾಗಿದೆ. ಪ್ರಬಂಧ, ಪ್ರವಾಸಕಥನ, ಚಿತ್ರ ಲೇಖನಗಳನ್ನೇ ಅವರು ತಮ್ಮ ಸಾಹಿತ್ಯಾಭಿವ್ಯಕ್ತಿಯ ಮಾಧ್ಯಮವಾಗಿ ಬಳಸಿಕೊಂಡರು. ೨೩ ಪುಸ್ತಕಗಳನ್ನು ಬರೆದರು. ಕಥೆ, ಕಾದಂಬರಿಗಳತ್ತ ಮನಸ್ಸು ಹಾಕಿ ಕೃಷಿ ಮಾಡಿದ್ದರೆ ಆ ಕ್ಷೇತ್ರದಲ್ಲೂ ಯಶಸ್ವಿಯಾಗುತ್ತಿದ್ದರು, ಎನ್ನುವುದಕ್ಕೆ ಅವರ ಏಕಮಾತ್ರ ಕಾದಂಬರಿ 'ಭಗ್ನಸ್ವಪ್ನ'ದಲ್ಲಿ ಸೂಚನೆಗಳಿವೆ. ಬಡತನದಲ್ಲಿ ಬೆಳೆದು, ಕಠಿಣ ಪರಿಶ್ರಮದಿಂದ ವಿದ್ಯಾಭ್ಯಾಸ ಮುಗಿಸಿ ವಿದೇಶೀ ಅತ್ಯುಚ್ಚ ಪದವಿಯನ್ನೂ ಪಡೆದು ಆ ತರಬೇತಿಯ ಲಾಭ ತನಗೂ, ದೇಶಕ್ಕೂ ಕೂಡಿಯೇ ಲಭಿಸಬೇಕೆಂದು ಕನಸು ಕಂಡಾತನ ಕಥೆ ಇಲ್ಲಿದೆ. ಅದನ್ನು ಸಾಧಿಸಲು ಕಾಯಾ, ವಾಚಾ, ಮನಸಾ ಯತ್ನಿಸಿದರೂ ಆ ಕನಸು ಮತ್ತು ಪ್ರಣಯಗಳೆರಡೂ ನುಚ್ಚುನೂರಾದ ದಾರುಣ ಪ್ರಸಂಗ ಇಲ್ಲಿದೆ. ನೋಟಕ್ಕೆ ಇದು ಸಿನಿಮೀಯವೆನಿಸಿದರೂ ಕೃಷ್ಣಾನಂದರ ಆತ್ಮಸ್ನೇಹಿತನ ಜೀವನದಲ್ಲಿ ನಡೆದ ಸತ್ಯ ಘಟನೆ, ಇಲ್ಲಿ ಕಾದಂಬರಿಯ ರೂಪ ತಾಳಿದೆ. ೧೯೭೨ರಲ್ಲಿ ಈ ಕಾದಂಬರಿ ಪ್ರಕಟವಾದಾಗ ಸಾಕಷ್ಟು ಜನಪ್ರಿಯವಾಗಿತ್ತು. ಪತ್ರಿಕೆಗಳಲ್ಲಿ ಒಳ್ಳೆಯ ವಿಮರ್ಶೆಯನ್ನೂ ಪಡೆದಿತ್ತು.

'ಭಗ್ನಸ್ವಪ್ನ' ಮೊದಲ ಮುದ್ರಣದ 'ನನ್ನ ಮಾತು'ನಲ್ಲಿ ಈ ಕಾದಂಬರಿಗೆ ಪ್ರೇರಣೆ ಒದಗಿದ ಹಿನ್ನೆಲೆಯನ್ನು ಲೇಖಕರು ಪ್ರಸ್ತಾಪಿಸಿದ್ದಾರೆ. ಸ್ವಾನುಭವದ ಕಹಿಯೂ ಕೊಂಚ ಕಾಣಿಸಿಕೊಂಡಿದೆ. ಅವರ ಪರಿಸರ ವಿಜ್ಞಾನದ ಡಾಕ್ಟರೇಟ್ ಪದವಿಯಾಗಲಿ, ಆ ಬಳಿಕ ಅರಣ್ಯ ರಕ್ಷಣೆಯ ತಾಂತ್ರಿಕ ತರಬೇತಿಯಾಗಲಿ ಇವೆರಡೂ ಅತ್ಯವಶ್ಯವಿದ್ದ ತಾಯ್ನಾಡಿನಲ್ಲಿ ಅವನ್ನು ಉಪಯೋಗಿಸಿಕೊಳ್ಳಲಾರದ ವಿನಾಶಕಶಕ್ತಿಗಳೇ ಅಧಿಕಾರದಲ್ಲಿದ್ದವು. ಆಗಲೇ ಪರಿಸರನಾಶದ ನಿರಂತರತೆಯ ಬಗ್ಗೆ ಎಚ್ಚೆತ್ತುಕೊಂಡಿದ್ದ ಅಮೇರಿಕಾ, ಕೆನಡಾ ದೇಶಗಳಲ್ಲಿ ಉತ್ತಮ ಉದ್ಯೋಗದ ಅವಕಾಶಗಳಿದ್ದರೂ, ಈ ಕಾದಂಬರಿಯ ನಾಯಕನಂತೆ ಅವರು ಮರಳಿ ಅಮೇರಿಕೆಗೆ ಹೊರಟುಹೋಗುವ

ಪ್ರಯತ್ನಮಾಡಲಿಲ್ಲ. "ಇಷ್ಟು ವರ್ಷ ಬೆವರು ಸುರಿಸಿ ಗಳಿಸಿದ ವಿದ್ಯೆಗೆ ಕೊನೆಯ ನಮಸ್ಕಾರ ಹೇಳಬೇಕಾಯಿತು" ಎಂದು ಹತ್ತಾರು ಸಂಸ್ಥೆಗಳಲ್ಲಿ ನೌಕರಿಗಾಗಿ ಯತ್ನಿಸಿ ವಿಫಲರಾಗಿ, ತೀರ ನೊಂದುಕೊಂಡಾಗಲೂ, ಒಂದೇ ಮಾತಿನಲ್ಲಿ ಆ ಹತಾಶೆ ಹೇಳಿಕೊಂಡಿದ್ದಾರೆ. ದೇಶಕ್ಕೆ ಅವರ ಪರಿಸರ ಪರಿಣತಿಯ ಲಾಭ ಕಿಂಚಿತ್ ಆಗದಿದ್ದ ನೋವಿದ್ದರೂ ಅವರು ಸ್ವಾವಲಂಬಿಗಳಾದರು. ವೈಜ್ಞಾನಿಕ ಛಾಯಾಗ್ರಹಣವನ್ನು ರೂಢಿಸಿಕೊಂಡರು. ಬೇರೆ ಬೇರೆ ಪ್ರದೇಶಗಳನ್ನು ಸುತ್ತಿದರು. ಲಕ್ಷಕ್ಕೂ ಮೀರಿದ ಚಿತ್ರಗಳನ್ನು ಕ್ಲಿಕ್ಕಿಸಿದರು, ವಿನಾಶದ ಅಂಚಿನಲ್ಲಿದ್ದ ಅರಣ್ಯ, ಅಲ್ಲಿಯ ಜೀವ-ಜೀವಿಗಳು, ಜನಾಂಗಗಳು, ಅವರ ರೀತಿ ರಿವಾಜುಗಳು, ಕಲೆಯ ಪ್ರಕಾರಗಳನ್ನೆಲ್ಲ ದಾಖಲಿಸಿದರು; ಕಾಯ್ದಿರಿಸಿದರು, ನೂರಾರು ಲೇಖಗಳನ್ನು ಬರೆದರು, ಸ್ವಂತಿಕೆಯನ್ನು ಮೆರೆದರು.

ಆಗಲೇ ಅಧೋಗತಿಗೆ ಇಳಿಯಲಾರಂಭಿಸಿದ್ದ ನಮ್ಮ ಉಚ್ಚ ಶಿಕ್ಷಣದ ಪಾಶ್ಚಾತ್ಯ ಅನುಕರಣ, ಆಡಳಿತ ವರ್ಗದ ನಿರ್ಲಕ್ಷ್ಯಗಳು ಇಲ್ಲಿ ಕಾಣಿಸಿಕೊಂಡಿವೆ. ಸಾಮಾಜಿಕವಾಗಿ ಈಗ ನಮ್ಮ ದೇಶ ಸಾಕಷ್ಟು ಬದಲಾವಣೆ ಕಂಡಿದೆ. ಈ ಐವತ್ತು ವರ್ಷಗಳಲ್ಲಿ ಅಂತರ್‌ಜಾತೀಯ ವಿವಾಹಗಳು ಸಾಮಾನ್ಯವಾಗಿವೆ. ಆದರೂ ಜಾತಿ ಮುಖಂಡರ, ಪ್ರಭಾವೀ ವ್ಯಕ್ತಿಗಳ ಕೈವಾಡದಿಂದ ಸಮಾಜ ಪೂರ್ಣತಃ ಮುಕ್ತವಾಗಿಲ್ಲ. ಆಗಾಗ ಮರ್ಯಾದಾ ಕೊಲೆಗಳು, ಪ್ರೇಮಿಗಳ ಆತ್ಮಹತ್ಯೆಗಳು ವರದಿಯಾಗುತ್ತಲೇ ಇರುತ್ತವೆ. ಸುದ್ದಿ ಮಾಡದ ಪ್ರೇಮ ಪ್ರಕರಣಗಳು ಹಲವು ಕುಟುಂಬಗಳಲ್ಲಿ, ಒಲಿದವರ ಮದುವೆ ತಪ್ಪಿಸಿ, ಬಲವಂತದ ಮದುವೆಗೆ ಒಪ್ಪಿಸಿ, ಜೀವನವೆಂಬುದು ಕೆಲ ದುರ್ದೈವಿಗಳ ಪಾಲಿಗೆ ನಿತ್ಯನರಕವಾದ ಘಟನೆಗಳು ಹೇರಳವಾಗಿವೆ. ಸಮಕಾಲೀನ ಸಮಾಜದ, ಅಂದರೆ ತರುಣ ಕಾಮತರು ಕಂಡುಕೊಂಡ ಕೌಟುಂಬಿಕ, ಸಾಂಘಿಕ ವಿಚಾರ ಸರಣಿಯನ್ನು 'ಭಗ್ನ ಸ್ವಪ್ನ' ಪ್ರತಿಬಿಂಬಿಸುತ್ತದೆ.

ಪುಸ್ತಕದ ಪುನರ್‌ಮುದ್ರಣದಲ್ಲಿ ಆಸಕ್ತಿ ವಹಿಸಿ, ಅದನ್ನು ಆಕರ್ಷಕವಾಗಿ ಹೊರತಂದ ಉತ್ಸಾಹಿ ತರುಣ ಶ್ರೀ ವಿ. ಮಹೇಶ್ ಅವರಿಗೂ, ಪ್ರಿಯದರ್ಶಿನಿ ಪ್ರಕಾಶನದವರಿಗೂ ಮುಖಪುಟವನ್ನು ಚಿತ್ರಿಸಿದ ಮೋನಪ್ಪ ಅವರಿಗೂ, ಸ್ನೇಹಾ ಪ್ರಿಂಟರ್ಸ್‌ರವರಿಗೂ ನನ್ನ ಕೃತಜ್ಞತೆಗಳು.

ಕಾಮತ ಕುಟೀರ — -ಡಾ. ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್
ಹೊನ್ನಾವರ (ಉತ್ತರ ಕನ್ನಡ)

# ಭಗ್ನಸ್ವಪ್ನ

## ೧

ಓಡುತ್ತಿರುವ ಸರದಾರಜಿಯ ಟ್ಯಾಕ್ಸಿ ಒಂದನ್ನು ಕೈಮಾಡಿ ನಿಲ್ಲಿಸಿ ತನ್ನ ಎರಡೂ ಸೂಟ್‌ಕೇಸುಗಳನ್ನು ಹಿಂಬದಿಗೆ ಸೇರಿಸಿ ಅರುಣನು "ಬೆಲಾರ್ಡ ಪಿಯರ" ಎಂದು ಆಜ್ಞೆ ಇತ್ತ. ಟ್ಯಾಕ್ಸಿ ದಾದರದಿಂದ ವೇಗವಾಗಿ ಹೊರಟಿತು. ಟ್ಯಾಕ್ಸಿಯವನಿಗೆ ಈ ಸಾಹೇಬ ಬಂದರದತ್ತ ಏಕೆ ಹೊರಟಿದ್ದಾನೆಂಬ ಕಲ್ಪನೆ ಬರಲಿಲ್ಲ. ಹೆಚ್ಚಾಗಿ ಪಾಶ್ಚಾತ್ಯ ದೇಶಗಳಿಗೆ ಹೋಗುವವರು ಈ ಬಂದರಕ್ಕೆ ಹೋಗುವದು ವಾಡಿಕೆ. ಇವನು ಹಾಗೇಯೇ ಹೊರಟಿರಬಹುದೇ? ಛೇ! ಇರಲಿಕ್ಕಿಲ್ಲ. ನಾನು ಎಷ್ಟೊಂದು ಪ್ರಯಾಣಿಕರನ್ನು ಅಲ್ಲಿ ಮುಟ್ಟಿಸಿರಲಿಕ್ಕಿಲ್ಲ. ಅವರು ಹೋಗುವ ರೀವಿಯೇ ಬೇರೆ ಅವರನ್ನು ಬೀಳ್ಕೊಡಲು ಬರುವ ಜನರೆಷ್ಟು? ಅವರು ಒಯ್ಯುವ ಸಾಮಾನೆಷ್ಟು? ಇವುಗಳಲ್ಲಿ ಎಂದೂ ಇಲ್ಲದ ಈತ ವಿದೇಶಕ್ಕೆ ಹೊರಟಿರಬಹುದೇ?....... ಆತ ಎಲ್ಲೇ ಹೋಗಲಿ, ಏನೇ ಮಾಡಲಿ, ನನ್ನು ಬಾಡಿಗೆ ಸರಿಯಾಗಿ ಬಂದರೆ ಸಾಕು. ಹೆಚ್ಚಿನ ವಿಚಾರ ನನಗೇಕೆ ಎಂದು ಮನಸ್ಸಿನಲ್ಲಿ ಅಂದುಕೊಂಡು ಸರದಾರಜಿ ವೇಗವಾಗಿ ಟ್ಯಾಕ್ಸಿ ಓಡಿಸಿದ. ಬಂದರದ ಸಮಿೂಪ ಜಾತ್ರೆಯಂತೆ ಜನ ನೆರೆದಿತ್ತು. ಸಾಮಾನುಗಳನ್ನು ಕೂಲಿಯವ ಎತ್ತುತ್ತಿದ್ದಂತೆ, ಸರದಾರಜಿ ನಾಲ್ಕುವರೆ ರೂಪಾಯಿ ಎಂದದ್ದಕ್ಕೆ ಐದರ ನೋಟನ್ನು ಕೊಟ್ಟು, ಚಿಲ್ಲರೆಗೆ ಕಾಯದೇ ಅರುಣನು ಲಗುಬಗೆಯಿಂದ ಧಾವಿಸಿ ಅಲ್ಲಿ ತನ್ನ ಸಾಮಾನುಗಳನ್ನು ನಮೂದಿಸಿ, ಸುಂಕತೆತ್ತು, ಹಡಗದತ್ತ ನಡೆದ. ಹಡಗವನ್ನೇರುವ ಮೊದಲು ನೂರಾರು ಔಪಚಾರಿಕತೆಗಳು. ಪ್ರತಿಯೊಂದು ಕಡೆ ಪಾಳಿಗಾಗಿ ನಿಲ್ಲಬೇಕು. ಸಾಕು ಸಾಕಾಗಿ ಹೋಗುತ್ತದೆ-ಆದರೂ ನಿರ್ವಾಹವಿಲ್ಲ. ಪಾಸಪೋರ್ಟಿನ ಪರೀಕ್ಷೆ ಆಯಿತು. ರಿಜರ್ವಬೆಂಕಿನ ಪರ್ಮಿಟ್ಟಿನ ಪರಿಶೀಲನೆ ನಡೆಯಿತು. ಆರೋಗ್ಯ ಪರೀಕ್ಷೆಯೂ ಮುಗಿಯಿತು. ಹಡಗವೇರಲು ಎರಡು ತಾಸಿನ ಅವಧಿ ಇತ್ತು. ಜೇಬಿನಿಂದ ಸಿಗರೇಟು ತೆಗೆದು ಹೊತ್ತಿಸಿ, ಆಚೀಚೆ ನೋಡತೊಡಗಿದ. ನೆರೆದ ಜನ ವಿವಿಧ ನೋಟುಗಳನ್ನು ಕಲ್ಪಿಸಿತ್ತು. ಅವುಗಳಲ್ಲಿ ಆಸಕ್ತಿ ಇಲ್ಲದಿದ್ದರೂ ಹೊತ್ತು ಹೋಗದ್ದಕ್ಕೊ ಒಬ್ಬೊಬ್ಬರನ್ನೇ ನೋಡುತ್ತಲಿದ್ದ.

"ಅವನು ಗುಜರಾತಿ ಇರಬೇಕು. ವಿದೇಶಗಳಲ್ಲಿ ಲಡ್ಡು ದೊರೆಯಲಿಕ್ಕಿಲ್ಲವೆಂದು ಈಗಲೇ ಗಲ್ಲಗಳಲ್ಲಿ ಲಡ್ಡುಗಳನ್ನು ತುಂಬಿಕೊಂಡಂತೆ ಕಾಣುತ್ತದೆ. ತಂದೆ ವ್ಯಾಪಾರದಲ್ಲಿ ಅಪಾರ ಧನ ಸಂಪಾದಿಸಿರಬೇಕು. ಅಂತೆಯೇ ಮೀಸೆ ಒಡೆಯದ 'ಠಮಕು' ಅಪ್ಪನ ಶಿಷ್ಯವೇತನದಿಂದ ಹೊರಟಿದ್ದಾನೆ. ತಂದೆ ತಾಯಿಗಳಂತೂ ತಮ್ಮ ಮಗ ಈ ಲೋಕವನ್ನೇ ಬಿಟ್ಟು ಹೋಗುವಂತೆ ಬಿಗಿದಪ್ಪಿ ಕಣ್ಣೀರ ಕೋಡಿ ಹರಿಸುತ್ತಿದ್ದಾರೆ. ಅವನಾರೋ ಮಹಾರಾಷ್ಟ್ರೀಯನು ಇರಬೇಕು. ಅವನ ಮನೆಯ ಜನರ ಪುಣೇರಿ ಕಚ್ಚೆಯಿಂದಲೇ ಗೊತ್ತಾಗುವಂತಿದೆ. ಪಕ್ಕದಲ್ಲಿ ಪತ್ನಿಯಿದ್ದಂತಿಲ್ಲ. ಅಂದರೆ ಅವಿವಾಹಿತನೇ ಇರಬೇಕು. ಅಲ್ಲಿ ದೂರದಲ್ಲಿ ಬಾಡಿದ ಮುಖದಿಂದ ನಿಂತವಳು ಆತನ ಪ್ರೇಯಸಿ ಇರಬೇಕು. ಅವಳಿಗೆ ಆತನೊಡನೆ ಎಷ್ಟು ಮಾತನಾಡುವದಿದೆಯೋ ಏನೋ. ಆದರೆ ಈ ಸನಾತನಿಗಳು ಬಿಡಲೊಲ್ಲರಲ್ಲ! ಈ ಠೊಣಪ ಯಾರು? ಯಾವದೋ ಕಂಪನಿಯೊಂದರಲ್ಲಿ ದೊಡ್ಡ ಅಧಿಕಾರಿಯಿರಬೇಕು. ಅಂತೆಯೇ ಸಹೋದ್ಯೋಗಿಗಳೆಲ್ಲ ಬಂದಿದ್ದಾರೆ. ಅವನ ಮೇಲೆ ಏರಿಸಿದ ಹಾರತುರಾಯಿಗಳು ಈ ಮಾತನ್ನೇ ಅನುಮೋದಿಸುತ್ತವೆ. ಈ ಫೋಟೋಗ್ರಾಫರನಿಗೆ ಐನೂರು ರೂಪಾಯಿ ಕೊಟ್ಟು ನೇಮಿಸಿರಬೇಕು. ಅಂತೆಯೇ ಒಂದೇ ಸವನೆ ಕ್ಲಿಕ್‌ಕ್ಲಿಕ್ ಮಾಡುತ್ತಲೇ ಇದ್ದಾನೆ. ಬ್ರಿಟಿಷರು ಭಾರತ ಬಿಟ್ಟು ತೊಲಗಿದರೂ ಅವರ ಸಾಹೇಬಗಿರಿಯ ಥಾಟು ಇನ್ನೂ ಉಳಿದಿದೆ, ಈ ದೇಶದಲ್ಲಿ. ಅವಳಾರು? ಭಾರತೀಯ ನಟಿಯಂತೆ ತೋರುತ್ತಾಳಲ್ಲ? ಕಿವಿಯ ಹೊಳೆಯುವ ಬೆಂಡೋಲೆ, ಹಾರದ ಮಿನುಗು, ಮಿಂಚುವ ಸೀರೆಯ ರಭಸಗಳೇನು? ಎಲ್ಲಕ್ಕಿಂತ ಆ ಕಣ್ಣುಗಳ ಹಾರುನೋಟ, ಅಸಂಖ್ಯ ಪುರುಷರನ್ನು ಆಕರ್ಷಿಸುತ್ತವೆ. ಬಣ್ಣ ಕಪ್ಪಾದರೂ ತೇಜಸ್ವಿನಿ. ಯಾರೋ ಆಂಧ್ರದವಳಿರಬೇಕು. ಆಕೆಯ ಸ್ಥೂಲಳಾದ ಮಾತೆಯಿಂದ ಇದು ಸ್ಪಷ್ಟವಾಗುತ್ತಿದೆ. ಈತನಾರು? ರಾಣಾ ಪ್ರತಾಪನ ವಂಶದವನಿರಬೇಕು. ಆತನ ನಾಲ್ಕು ನೂರು ವರ್ಷದ ಹಿಂದಿನ ರುಮಾಲೇ ಇದನ್ನು ಸಾರಿಹೇಳುತ್ತದೆ. ಮೇಲೆ ವಿವಿಧ ಬಣ್ಣ ಸವರಿದ ಶರ್ಟು. ಆದರೂ ಸೂಟಧಾರಿ. ಕೊಡಂಗಿಯಂತೆ ತೋರುತ್ತಿದ್ದಾನೆ. ಪಕ್ಕದಲ್ಲಿ 'ಘುಂಘಟ'ದಿಂದ ಮುಖ ಮುಚ್ಚಿಕೊಂಡವರಲ್ಲಿ ತಾಯಿ ಮತ್ತು ಪತ್ನಿಯರಿರಬೇಕು. ಎಲ್ಲರೂ ಒಂದೇ ತರದ ಬಟ್ಟೆ ಮುಸುಕು ತೊಟ್ಟಾಗ ಗುರುತಿಸುವದು ಕಷ್ಟವಾಗುತ್ತಿರಬೇಕು! ಆತ ಯುದ್ಧಕ್ಕೆ ಹೊರಟಿರಲಿಕ್ಕಿಲ್ಲವಷ್ಟೇ? ಸ್ತ್ರೀಯರೆಲ್ಲ ಕೂಡಿ ಹಣೆಗೆ ತಿಲಕವಿಟ್ಟು ಕೈಗೆ ಕಂಕಣ ಕಟ್ಟಿದರು. ವಿದೇಶಕ್ಕೆ ಹೋಗಿಬರುವವೆಂದರೆ ಯುದ್ಧ ಗೆದ್ದ ಬಂದದ್ದಕ್ಕಿಂತ ಹೆಚ್ಚೆಂದು ಹೆಂಗಳೆಯರು ನಂಬಿದಂತಿದೆ. "ಹೋಗಿ ಬರುತ್ತೇನೆ! ಎಂದು ಹಿರಿಯರ ಕಾಲು ಹಿಡಿದು ಗೋಗರೆದು ಅಪ್ಪಣೆ ಕೇಳಿದ." ಈ ಎಲ್ಲ ಮೋಜನ್ನು ನೋಡುತ್ತಿದ್ದಂತೆ ಹಡಗವೇರಲು ಅಪ್ಪಣೆ ದೊರಯಿತು. ಹಡಗದ ಕೃತಕ ಮೆಟ್ಟಲುಗಳನ್ನು ಒಂದೊಂದಾಗಿ ಏರುತ್ತಿದ್ದಂತೆ

ಅರುಣನಿಗೆ ಹೊಟ್ಟೆಯಲ್ಲಿ ಕಲಮಲವೆದ್ದಿತು. ಐದು ವರ್ಷಗಳ ಹಿಂದೆ ಹೀಗೆಯೇ ಮೆಟ್ಟಿಲುಗಳನ್ನು ಏರಿದ್ದು ನೆನಪಾಯಿತು. ಆಗಿನ ಮತ್ತು ಈಗಿನ ಸಂದರ್ಭಗಳ ಅಂತರವನ್ನು ನೆನೆದು ಮನ ನೊಂದಿತು. ಯಾಂತ್ರಿಕವಾಗಿ ಪರಿಚಯ ಪತ್ರವನ್ನು ಅಧಿಕಾರಿಗಳಿಗೆ ಒಪ್ಪಿಸಿ, ಡೆಕ್ಕಿನ ಮೂಲೆಯಲ್ಲಿ ಕುರ್ಚಿಯೊಂದರಲ್ಲಿ ಕುಕ್ಕರಿಸಿದ. ಇಷ್ಟೊತ್ತಿನವರೆಗೆ ಅದುಮಿ ಹಿಡಿದ ಗತಸ್ಮೃತಿಗಳು ನಾಲ್ಕೂ ದಿಶೆಯಿಂದ ಮುತ್ತತೊಡಗಿದವು. ಕಾಲು ಚಾಚಿ, ಕಣ್ಣು ಮುಚ್ಚಿ, ತಲೆಯನ್ನು ಕೈಗಳಿಂದ ಅದುಮಿದ-ಆದರೂ ಬಿಸಿ ಕಂಬನಿ ಜಾರಿ, ಕೋಟು ತೇವವಾಯಿತು. ಕಣ್ಣುಗಳನ್ನು ಒರಿಸಿಕೊಂಡು ಸಾವಧಾನವಾಗಿ ಎದ್ದು ಕೆಳಗೆ ನೆರೆದ ಜನಸಮೂಹವನ್ನು ದಿಟ್ಟಿಸಿದ. ನೋಡು ನೋಡುತ್ತಿದ್ದಂತೆ ಜನಜಂಗುಳಿ ಮಾಯವಾಗಿ ಶೂನ್ಯವು ಆವರಿಸಿತು. ಐದು ವರ್ಷಗಳ ಹಿಂದೆ ತಾನು ಅಮೇರಿಕೆಗೆ ಹೊರಟುನಿಂತ ದೃಶ್ಯ ಕಣ್ಣೆದುರು ಹಾಯ್ದು ಹೋಯಿತು.......

ಆಗ ತಾರುಣ್ಯದ ಹುಮ್ಮಸು ಪುಟಿಯುತಿತ್ತು. ಸಾವಿರಾರು ಭಾರತೀಯರು ವಿದೇಶಕ್ಕೆ ಹೋಗಿ ಬರುವುದನ್ನು ನೋಡಿ ನಾನೂ ಹೋಗುವದನ್ನು ನಿರ್ಧರಿಸಿದ್ದೆ. ವಿಶ್ವವಿದ್ಯಾಲಯದ ಶಿಷ್ಯವೇತನವನ್ನೂ ಪಡೆದಿದ್ದೆ. ನಮ್ಮೂರಿನಿಂದ ವಿದೇಶಕ್ಕೆ ಹೊರಟವರಲ್ಲಿ ನಾನೇ ಮೊದಲಿಗನಾದ್ದರಿಂದ ಊರಲ್ಲಿ ಸಂಭ್ರಮವೇ ಸಂಭ್ರಮ. ಊಟಕ್ಕೆ ಕರೆಯದ ಮನೆಯಿರಲಿಲ್ಲ. ಚಹಾಕ್ಕೆ ಆಮಂತ್ರಿಸದ ಜನರಿರಲಿಲ್ಲ. ನಮ್ಮ ಪ್ರಾಥಮಿಕ ಶಾಲೆಯ ಹೆಡ್ ಮಾಸ್ತರರು ನನ್ನ ಗುಣಗಾನ ಮಾಡಿದಾಗ ನೆರೆದ ವಿದ್ಯಾರ್ಥಿಗಳೆಲ್ಲ ನಾನೊಬ್ಬ ದೇವತೆಯೆಂದು ಭಾವಿಸಿದ್ದರು. ಗ್ರಾಮಪಂಚಾಯತಿಯವರು ನನ್ನ ಮೆರವಣಿಗೆಯನ್ನೇ ಹೊರಡಿಸಿದ್ದರು. ಊರಿನ ಅನೇಕ ಕನ್ಯಾಪಿತೃಗಳು ಅದಾಗಲೇ ನನ್ನನ್ನು ಭಾವೀ ಅಳಿಯನನ್ನಾಗಿ ಸ್ವೀಕರಿಸಿದ್ದರು. ಯುವ್ವನೆಯರು ನನ್ನನ್ನು ಕೌತುಕದಿಂದ ನೋಡಲೆತ್ನಿಸಿ, ಕೂಡಲೇ ನಾಚುತ್ತಿದ್ದರು. ಸಂಬಂಧಿಕರೆಲ್ಲ ಬೀಳ್ಕೊಡಲು ಮುಂಬಯಿಗೆ ಹೊರಟುನಿಂತರೆ, ಊರಿಗೆ ಊರೇ ಮೋಟರ ನಿಲ್ದಾಣಕ್ಕೆ ಆಗಮಿಸಿತ್ತು. ಆ ಜಯಜಯಕಾರವೇನು! ಹಾರತುರಾಯಿಗಳೇನು? ನಾನು ಯಾವುದೋ ಅತ್ಯಂತ ಸಾಹಸಕ್ಕೆ ಹೊರಟು ನಿಂತಂತೆ ಭಾಸವಾಗುತ್ತಿತ್ತು.

ಮುಂಬಯಿ ಸಮೀಪಿಸುತ್ತಿದ್ದಂತೆ ಆಶಾಳನ್ನು ಭೆಟ್ಟಿ ಆಗುವ ಉತ್ಕಂಠತೆ ಹೆಚ್ಚಿತ್ತು. ಆದರೆ ಜೊತೆಗೆ ಬಂದ ಮನೆಯ ಜನರನ್ನು ಏನು ಮಾಡುವದು? ಎಂದು ಯೋಚಿಸಿ ಮುಂಬಯಿ ಊರು ನೋಡಲು ಅವರನ್ನು ಕಳಿಸಿ, ಪ್ರಾಧ್ಯಾಪಕರ ಆಶೀರ್ವಾದ ನೆಪಮಾಡಿಕೊಂಡು, ಆಶಾಳಿಗೆ ವಿಶ್ವವಿದ್ಯಾಲಯದ ತೋಟದಲ್ಲಿ ಭೆಟ್ಟಿಯಾಗಬೇಕೆಂದು ಗೆಳೆಯನೊಬ್ಬನ ಕಡೆಯಿಂದ ಆದೇಶ ಕಳಿಸಿದ್ದೆ.

ನಿರ್ದಿಷ್ಟಪಡಿಸಿದ ವೇಳೆಗಿಂತ ಹತ್ತು ನಿಮಿಷ ಮೊದಲೇ ಹೋದೆ. ಆಶಾ ಅದಾಗಲೇ ಬಂದು ನಿಂತಿದ್ದಳು. ಮುಖದಲ್ಲಿ ಕಾತುರತೆ ಸ್ಪಷ್ಟವಿತ್ತು. ನನ್ನನ್ನು ನೋಡಿ ಸಾವಕಾಶವಾಗಿ ಹತ್ತಿರ ಬಂದು ಉಕ್ಕಿ ಬರುತ್ತಿದ್ದ ಕಣ್ಣೀರನ್ನು ತಡೆದುಕೊಂಡು ಮೆಲ್ಲಗೆ ನನ್ನ ಎರಡೂ ಕೈಗಳನ್ನು ಅದುಮಿದ್ದಳು. 'ಅರುಣ, ಈ ಕೈಗಳು ಎಂದೆಂದಿಗೂ ನನ್ನವಾಗಿ ಉಳಿಯುವವಲ್ಲವೇ? ನನ್ನ ಈ ಜಡಶರೀರವು ಈ ಕೊಳೆಯುವ ಮುಂಬೈಯಲ್ಲಿ ಇದ್ದರೂ ನನ್ನ ಆತ್ಮ ಸದಾ ನಿಮ್ಮೊಟ್ಟಿಗೆ ಇದೆ. ನೀವು ವಿದೇಶಕ್ಕೆ ಹೊರಟಿರುವಿರಿ. ದೊಡ್ಡ ಡಿಗ್ರಿ ಗಳಿಸಲಿರುವಿರಿ. ಉಜ್ವಲ ಭವಿಷ್ಯ ನಿಮ್ಮನ್ನು ಕಾದಿದೆ...... ಈ ಆಶಾಳನ್ನು ಮರೆಯುವುದಿಲ್ಲವಲ್ಲವೇ?' ಎಂದು ನಡುಗುವ ಧ್ವನಿಯಿಂದ ಕಣ್ಣಲ್ಲಿ ಕಣ್ಣಿಟ್ಟು ಕೇಳಿದ್ದಳು.

ಅವಳ ಪ್ರಶ್ನೆಗೆ ನೇರ ಉತ್ತರ ಕೊಡುವ ಪರಿಸ್ಥಿತಿಯಲ್ಲಿ ನಾನಿರದಿದ್ದರೂ ನನ್ನ ಮಿಡಿಯುವ ತುಟಿಗಳು ತೇವವಾದ ಕಣ್ಣುಗಳು ಅವಳಿಗೆ ಆಶ್ವಾಸನವನ್ನು ಕೊಟ್ಟಿದ್ದವು. ಅಷ್ಟರಲ್ಲಿ ಎಲ್ಲೋ ಅಡಗಿದ ಗೆಳೆಯರ ಗುಂಪು ಧಾವಿಸಿ ಬಂದಿತು. ಎಲ್ಲರೂ ಹಾಸ್ಯ ಮಾಡುವವರೇ! ಆಶಾ ಇಲ್ಲದ ಅಮೇರಿಕೆಯಲ್ಲಿ ಏನು ಮೋಜು ಮಾಡುತ್ತೀ? ಎಂದು ನನ್ನನ್ನು ಕೇಳಿದರೆ ಅರುಣನಿಲ್ಲದ ಕಾಲೇಜಿನಲ್ಲಿ ಆಶಾ ನಾಲ್ಕು ವರ್ಷದ ಎಂ.ಎಸ್.ಸಿ. ಮುಗಿಸಿದರೆ ದೊಡ್ಡದೆಂದು ಆಕೆಯ ಗೇಲಿ ಮಾಡಿದರು. ಆಶಾ ಅಂದು ಬೇಗ ಮನೆ ತಲುಪಬೇಕಾಗಿತ್ತು. ಆದ್ದರಿಂದ ಮರುದಿನ ಆಕೆಯೂ ಬಂದರಕ್ಕೆ ಬರುವದೆಂದು ನಿರ್ಧರಿಸಿ ಟ್ಯಾಕ್ಸಿಯೊಂದರಲ್ಲಿ ಆಕೆಯನ್ನು ಮನೆಗೆ ಕಳಿಸಿದ್ದೆವು. ಗೆಳೆಯರೆಲ್ಲ ನನ್ನೊಟ್ಟಿಗೆ ಬಂದು, ಸಾಮಾನು, ಬಟ್ಟೆಬರೆ ಕಟ್ಟುವುದರಲ್ಲಿ ಸಹಾಯ ಮಾಡಿದ್ದರು.

ಮರುಳು ಜನ ಯಾವತ್ತೂ ಒಂದೇ ಎಂದು ತೋರುತ್ತದೆ. ಅಂದೂ ಇದೇ ರೀತಿ ಕಿಕ್ಕಿರಿದು ತುಂಬಿದ್ದರು. ಎಷ್ಟೋ ಮುಂಚಿತವಾಗಿ ಬಂದರಕ್ಕೆ ತಲುಪಿದಾಗ ಆಶಾ ಅದಾಗಲೇ ಬಂದು ಮೂಲೆಯಲ್ಲಿ ನಿಂತಿದ್ದಳು. ಇಷ್ಟಾದರೂ ಮನೆಯ ಜನರೆದುರು ಅವಳನ್ನು ಮಾತನಾಡಿಸುವಂತಿರಲಿಲ್ಲ. ತೀರ ಸಾಂಪ್ರದಾಯಿಕ ಕಟ್ಟಿನಲ್ಲಿ ಬೆಳೆದ ತಂದೆ, ನಮ್ಮತ್ತೆ, ದೊಡ್ಡಮ್ಮ, ಚಿಕ್ಕಪ್ಪ ಇದನ್ನು ಸಹಿಸುವಂತಿರಲಿಲ್ಲ. ವಿದೇಶಕ್ಕೆ ಹೊರಡಲು ಅಪ್ಪಣೆ ದೊರೆತಿದ್ದೇ ದೊಡ್ಡ ಮಾತು ಎಷ್ಟೊಂದು ಆಣೆಗಳನ್ನಿಡಬೇಕಾಯಿತು. ಸೆರೆ ಮುಟ್ಟುವದಿಲ್ಲವೆಂದು ಒಬ್ಬರಿಗೆ ವಚನಕೊಟ್ಟರೆ ಹುಡುಗಿಯರ ಸಹವಾಸ ಮಾಡುವುದಿಲ್ಲವೆಂದು ತಂದೆಗೆ ಮಾತು. ಅಂಗ್ಲಳನ್ನು ಮದುವೆಯಾಗುವುದಿಲ್ಲವೆಂದು ಅಜ್ಜಿಗೆ ಆಣೆಯಿಟ್ಟು ಹೇಳಬೇಕಾಯಿತು. ಇವು ಯಾವುದರ ಬಯಕೆಯಿಲ್ಲದ ನನಗೆ ಆಣೆಯಿಡಲು ಯಾವ ತೊಂದರೆಯೂ ಆಗಲಿಲ್ಲ ಆದರೆ ಆಶಾಳನ್ನು ಮಾತನಾಡದೆಯೇ ಬೀಳ್ಕೊಡಬೇಕಾಗಿ ಬಂದುದರಿಂದ ಕಷ್ಟವಾಯಿತು. ಎಷ್ಟೇ ಪ್ರಯತ್ನ ಪಟ್ಟರೂ ಕಣ್ಣು ಕದ್ದುಕದ್ದು ಅವಳನ್ನು ನೋಡುತ್ತಿದ್ದವು.

ಅವಳಾದರೂ ಜೊತೆಗೆ ಯಾರನ್ನೊ ಕರೆದುಕೊಂಡು ಬಂದು ಅವಳೊಡನೆ ಮಾತನಾಡುತ್ತ ಹತ್ತಿರದಲ್ಲೇ ನಿಂತಿದ್ದಳು. ಆಗೊಮ್ಮೆ ಈಗೊಮ್ಮೆ ಕಂಬನಿ ಉದುರಿಸುತ್ತಲೇ ಇರುವದು ನನಗೆ ಕಾಣಿಸದಿರಲಿಲ್ಲ. ನಮ್ಮ ಈ ಕಳ್ಳ ನೋಟವನ್ನು ನೋಡಿ ನೋಡಿ ತಾಳಲಾರದೇ ಚಿಕ್ಕಪ್ಪನವರು, "ಅಲ್ಲೋ ಅರುಣ, ಈ ಕಪ್ಪು ಮುಖದ ಕೋತಿಯನ್ನೇ ಹೀಗೆ ಹುಚ್ಚುಚ್ಚಾರ ನೋಡಿದರೆ ನಾಳೆ ಬಿಳೇ ಕೋತಿಯನ್ನು ನೋಡಿ ಹೇಗೆ ಸುಮ್ಮನಿರಬಲ್ಲೆ" ಎಂದು ಒಮ್ಮಿಂದೊಮ್ಮೆ ಆಡಿದ ಚುಚ್ಚು ಮಾತಿಗೆ ಸಿಕ್ಕು ಬಿದ್ದುದಕ್ಕೆ ಕೂಡಲೇ ಉತ್ತರ ಹೊಳೆಯದೇ ತಡವರಿಸುತ್ತ, "ಆಕೆಯನ್ನು ಎಲ್ಲೋ ಕಂಡಂತಿದೆ. ಬಹುಶಃ ಕಾಲೇಜಿನ ಸಹಪಾಠಿಯಿರಬೇಕು ಎಂದು ಆಲೋಚಿಸುತ್ತಿದ್ದೇನೆ" ಎಂದೆ. ಆದರೆ ನೆರೆದ ಜನರ ಪರಿವೆಯೇ ಇಲ್ಲದೇ ಗರ್ಜಿಸಿದ ಚಿಕ್ಕಪ್ಪನವರು ಆಶಾಳನ್ನು ಮಾತನಾಡಿಸುವ ನನ್ನ ಅಳಿದುಳಿದಾಸೆಯನ್ನೂ ಮುಳುಗಿಸಿ ಬಿಟ್ಟರು. ಈ ಸಂದರ್ಭವನ್ನು ಊಹಿಸಿಕೊಂಡೇ ಹಾಳೆಯ ತುಣುಕನ್ನಿಟ್ಟು "ಹೋಗಿ ಬರುವೆ ಆಶಾ! ನನ್ನನ್ನು ಮರೆಯಬೇಡ, ಎಂದೆಂದಿಗೂ ನಿನ್ನವನಾಗಿ ಇರ ಬಯಸುವ ಅರುಣ" ಎರಡು ಸಾಲು ಗೀಚಿದ್ದೆ. ಉಳಿದವರಿಗೆ ಗೊತ್ತಾಗದಂತೆ ಸಮಯ ನೋಡಿ ಆಶಾಳತ್ತ ತೂರಿದ್ದೆ. ಆಕೆಯಾದರೂ ಜಾಗರೂಕತೆಯಿಂದ ಅದನ್ನು ಎತ್ತಿದ್ದಳು.

ಹಡಗವೇರಲು ಅಪ್ಪಣೆ ದೊರೆತಾಗ ಎಲ್ಲರ ಕಣ್ಣಲ್ಲೂ ನೀರು ಬಂದಿತ್ತು. ಆಶಾಳತ್ತ ನೋಡಿದಾಗ ಎಂದೂ ಅಳದ ನನ್ನ ಕಣ್ಣುಗಳೂ ಹಸಿಯಾದವು. ಹಡಗವೇರಿದ ಮೇಲೂ ಮೂಕ ಸಂಭಾಷಣೆ ನಡೆದೇ ಇತ್ತು. ಹಡಗವೂ ದೊಡ್ಡ ಸಿಳ್ಳನ್ನು ಕೊಟ್ಟು ಪ್ರಯಾಣಸನ್ನದ್ಧವಾಯಿತು. ಕೆಳಗಿನಿಂದ ಗುರುತಿನ ಕೈಗಳು ಒಂದೇಸಮವೇ ಬೀಸುತ್ತಿದ್ದವು. ಕಣ್ಣಿಗೆ ಮರೆಯಾಗುವ ತನಕ ಎಲ್ಲರನ್ನೂ ನೋಡುತ್ತ ನಿಂತೆ. ಹಡಗ ಬಲು ದೂರ ಹೊರಟರೂ ಆಶಾ ಕಣ್ಣಿಗೆ ಕಟ್ಟಿದ್ದಳು. ಭೂಮಿ ದೂರದೂರವಾಗುತ್ತ ಬಂದಂತೆ ಭಾರತಮಾತೆಗೆ ಮನಸ್ಸಿನಲ್ಲೇ ನಮಿಸಿ, ಆಶೀರ್ವಾದ, ಕೈಕೊಂಡ ಕೆಲಸದಲ್ಲಿ ಯಶಸ್ಸು ಕೋರಿದೆ. ಭೂಮಿಯ ಕೃತಕ ದೀಪಗಳೆಲ್ಲ ಮಾಯವಾಗುತ್ತ ಬಂದಂತೆ ಆಕಾಶ ದೀಪಗಳು ಮಿನುಗತೊಡಗಿದವು. ಚಂದ್ರನ ಕಾಂತಿ ಅಲೆಗಳ ಮೇಲೆ ಪ್ರತಿಬಿಂಬಿಸಿತ್ತು. ತಾರೆಗಳ ಬೆಳಕು ನೀರಮೇಲೆ ಮಿಂಚುತ್ತಿತ್ತು. ಆಗೊಮ್ಮೆ ಈಗೊಮ್ಮೆ ದೂರದಲ್ಲಿ ಕಡಲ್‌ಮೀನುಗಳು ನೀರಿನಿಂದ ಎತ್ತರಕ್ಕೆ ಜಿಗಿದು ತಿರುಗಿ ನೀರಿನಲ್ಲಿ ಮಾಯವಾಗುತ್ತಿದ್ದವು. ಇವೇನನ್ನೂ ಲೆಕ್ಕಿಸದೇ ಹಡಗ ವೇಗದಿಂದ ಚಲಿಸುತ್ತಿತ್ತು. ಹಿತವಾದ ತಂಗಾಳಿಯಲ್ಲಿ ಹಿಂದಿನ ಮುಂದಿನ ಸುಖ ಪ್ರಸಂಗ ನೆನೆಯುತ್ತ ನನ್ನದೇ ಕಲ್ಪನಾಲೋಕದಲ್ಲಿ ವಿಹರಿಸುತ್ತಿದ್ದೆ."

ಸ್ವಪ್ನಲೋಕ, ಜೋರಾಗಿ ಬೀಸುವ ತಂಗಾಳಿಯಿಂದ ಭಿನ್ನವಾಯಿತು. ಕಣ್ತೆರೆದಾಗ ಸುತ್ತಲೂ ಕತ್ತಲೆ ಆವರಿಸಿತ್ತು. ಡೆಕ್ಕಿನ ಮೇಲೆ ತಾನೊಬ್ಬನೇ ಬಿದ್ದುಕೊಂಡದ್ದು ಅರುಣನ

ಲಕ್ಷ್ಯಕ್ಕೆ ಬಂತು-ಚಳಿಯೂ ಪ್ರಾರಂಭವಾಗಿತ್ತು. ಸ್ವಲ್ಪ ಬೆಚ್ಚಗೆ ಮಾಡಿಕೊಳ್ಳಲೆಂದು ಹಡಗದ ಬಾರಿನತ್ತ ಧಾವಿಸಿದ-ಒಂದೆರಡು ಪೆಗ್ ಬಿಯರ ಸುರಿದುಕೊಂಡ. ಹಾಗೆ ಕುಳಿತಲ್ಲೇ ಟೇಬಲ್ಲ ಮೇಲೆ ತಲೆಯಾನಿಸಿದ. ಹಾಗೇ ಜೊಂಪು ಹತ್ತಿರಬೇಕು. ಸ್ನೇಹದ ಹಸ್ತವೊಂದು ಬಂದು ತಲೆ ಸವರಿದಂತಾಯಿತು. ಆಶಾ! ಇರಬಹುದೇ! ತಲೆಯೆತ್ತಿ ನೋಡಿದ. ಬಾರಿನ ಮಾಣಿ ಇನ್ನೊಂದು ಬಿಯರ ಬೇಕೆ? ಎಂದು ಕೇಳಿದ. ಊಹೂಂ ಎಂದು ಹಾಗೆ ಎದ್ದು ನಿಧಾನವಾಗಿ ತನ್ನ ಕೆಬಿನ್ನದತ್ತ ನಡೆದ. ಹಡಗದ ಮಾಣಿ ಚಹಾ, ಕಾಫಿ, ಹಣ್ಣು, ಹಾಲು ಏನಾದರೂ ಬೇಕೇ? ಎಂದು ಕೇಳಿದ. ಏನೂ ಬೇಡಾ! ಎಂದು ಒಂದೇ ಉತ್ತರವಿತ್ತು ಅವನೆದುರಿಗೇ ದಢ್ಡನೆ ಬಾಗಿಲು ಹಾಕಿಕೊಂಡ. ಅವಮಾನಿತನಾದ ಮಾಣಿ, ಇವನೆಲ್ಲೊ ಹುಚ್ಚನಿರಬೇಕು! ಎಂದುಕೊಂಡು ಹೋಗಿಬಿಟ್ಟ.

ಕೋಣೆಯಲ್ಲಿ ನಲ್ಲಿ ನೀರಿನಿಂದ ಮುಖ, ತಲೆ ತೊಳೆದುಕೊಂಡು ಅರುಣ ದೀಪವಾರಿಸಿ ಮಲಗಲೆತ್ನಿಸಿದ. ನಿದ್ದೆ ಬರಲಿಲ್ಲ ಮರೆಯಲು ಯತ್ನಿಸಿದಷ್ಟೂ ಅವೇ ನೆನಪು ಮತ್ತೆ ಮುತ್ತತೊಡಗಿದವು. ಆತ ಹೊರಟ ಹಡಗಕ್ಕಿಂತ ವೇಗವಾಗಿ ಹೊರಟಿತ್ತು ಸ್ಮೃತಿಲಹರಿ.

೨

ಅಂದು ಜೂನ್ ಇಪ್ಪತ್ತನೇ ದಿನಾಂಕ. ಬೇಸಿಗೆಯ ರಜೆಯ ನಂತರ ಕಾಲೇಜುಗಳೆಲ್ಲ ಪ್ರಾರಂಭವಾಗಿದ್ದವು. ವಿದ್ಯಾರ್ಥಿನಿಯರು ಕಾಲೇಜಿನಲ್ಲಿ ಪ್ರವೇಶ ದೊರಕಿಸಿ ಫೀ ತುಂಬುವುದರಲ್ಲಿ ಮಗ್ನರಾಗಿದ್ದರೆ, ಹಲವು ವಿದ್ಯಾರ್ಥಿಗಳು ಯಾವ ಹೊಸ ಹುಡುಗಿಯರು ತಮ್ಮ ಕಾಲೇಜಿಗೆ ಸೇರಿದ್ದಾರೆ? ಅವರಲ್ಲಿ ಎಷ್ಟು ಮಂದಿಗೆ 'ನೋಡುವಂತಹ ಮುಖ ಇದೆ'? ಎಂಬ ಸಂಶೋಧನೆಯಲ್ಲಿ ತೊಡಗಿದ್ದರು. ನಾನು ಇದರಲ್ಲಿ ಪ್ರತ್ಯಕ್ಷ ಭಾಗವಹಿಸದಿದ್ದರೂ ಅದರಲ್ಲಿ ಆಸಕ್ತಿ ಇದ್ದ ನನ್ನ ಸ್ನೇಹಿತವೃಂದ ತುಂಬ ಉತ್ಸಾಹದಿಂದ ತಮ್ಮ ಸಂಶೋಧನೆಯ ವರದಿಯನ್ನು ನನಗೆ ಒಪ್ಪಿಸುತ್ತಿದ್ದರು. ಆ ವರ್ಷ ಕಾಲೇಜಿಗೆ ಬಹಳ ಹುಡುಗಿಯರು ಬಂದರೂ ಮೇಲಿನ ಕ್ಲಾಸಗೆ ಆರೇ ಜನ ಭರ್ತಿಯಾಗಿದ್ದರು. ಅದರಲ್ಲೂ ಇಬ್ಬರೇ ವಿಜ್ಞಾನದ ವಿದ್ಯಾರ್ಥಿಯರೆಂದು ಬೇಗ ಗೊತ್ತಾಯಿತು. ಕುಮಾರಿ ದೇಶಪಾಂಡೆ ನಮ್ಮ ವಿಭಾಗಕ್ಕೆ ಬಂದಿದ್ದಾಳೆಂದೂ ತಿಳಿಯಿತು.

ಸರಿ, ದೇಶಪಾಂಡೆಯ ಫಜೀತಿ ಮಾಡಬೇಕೆಂದು ಗೆಳೆಯರೆಲ್ಲ ಹೊಂಚು ಹಾಕಿದರು. ವಿಭಾಗದ ವಾಚನಾಲಯದಲ್ಲಿ ಪ್ರಾಧ್ಯಾಪಕ ಸ್ಥಳದಲ್ಲಿ ನನ್ನನ್ನು ಕೂಡ್ರಿಸಿದರು.

ಖಾಡಿಲಕರನು ಅವಳ ಹತ್ತಿರ ಹೋಗಿ ತನ್ನ ಪರಿಚಯ ಮಾಡಿಕೊಟ್ಟು, ತಮ್ಮ ಪ್ರಾಧ್ಯಾಪಕರು ತಮ್ಮನ್ನು ಭೇಟಿಯಾಗುವಂತೆ ಆದೇಶಿಸಿದ್ದಾರೆಂದು ಹೇಳಿದ ಆಕೆ ನಮ್ರತೆಯಿಂದ "ಒಳಗೆ ಬಹಬಹುದೇ" ಎಂದು ಕೇಳಿ, ಒಳಗೆ ಬಂದಳು. ನಾನು, ಆಕೆಯ ಈ ಮೊದಲ ಪರೀಕ್ಷೆ, ಕಾಲೇಜುಗಳ ವಿವರ ಕೇಳಿ "ನಾಳೆ ಬೆಳಿಗ್ಗೆ ಪದಾರ್ಥ ವಿಜ್ಞಾನದ ಕ್ಲಾಸು ಪ್ರಾರಂಭವಾಗುವದು" ಎಂದು ಹೇಳಿದೆ. ಅವಳು ತುಂಬ ಧನ್ಯವಾದಗಳನ್ನು ಅರ್ಪಿಸಿ ಹೊರಟು ಹೋದಳು. ಗೆಳೆಯರೆಲ್ಲ ಮರೆಯಲ್ಲಿ ನಿಂತು ಮೋಜು ನೋಡುತ್ತಿದ್ದರು.

ಮರುದಿನ ಹನ್ನೊಂದು ಗಂಟೆಗೆ ಡಾ. ಮೊರಿಸರು ಕ್ಲಾಸು ತೆಗೆದುಕೊಳ್ಳಲು ಬಂದರು. ನನ್ನನ್ನು ಪ್ರಾಧ್ಯಾಪಕರ ಸ್ಥಾನದಲ್ಲಿ ನಿರೀಕ್ಷಿಸಿದ, ಕು. ದೇಶಪಾಂಡೆಗೆ ತಾನೆಲ್ಲೋ ತಪ್ಪಿ ಇನ್ನೊಂದು ಕ್ಲಾಸಿಗೆ ಬಂದಿರಬೇಕೆಂಬ ಭ್ರಮೆಯಾಯಿತು. ಅನುಮಾನಿಸುತ್ತ ಕೊನೆಗೆ ಒಂದು ತೀರ್ಮಾನಕ್ಕೆ ಬಂದು ಎದ್ದೇ ಹೋದಳು. ನನಗೆ ಐದು ನಿಮಿಷ ತಡವಾದದ್ದರಿಂದ ಲಗುಬಗೆಯಿಂದ ಬರುತ್ತಿದ್ದೆ. "ಗುಡ್ ಮಾರ್ನಿಂಗ್ ಸರ್" ಹೆಣ್ಣು ಧ್ವನಿ ಕೇಳಿದಾಗ ತಲೆಯೆತ್ತಿ ನೋಡಿದೆ. ನಿನ್ನೆ ಭೆಟ್ಟಿಯಾದ ಹುಡುಗಿ. ನನ್ನನ್ನು ಪ್ರಾಧ್ಯಾಪಕನೆಂದು ಬಗೆದಿದ್ದಾಳೆ. ಮುಗ್ಧ ಕುಮಾರಿ ಎಂದುಕೊಂಡು ಮರುಕಪಟ್ಟು ಕಣ್ಣಿನಿಂದಲೇ ಅವಳಿಗೆ ಸುಪ್ರಭಾತ ಸೂಚಿಸಿ ಕ್ಲಾಸಿಗೆ ಧಾವಿಸಿದೆ. ಅವಳೂ ಹಿಂಬಾಲಿಸಿದಳು. ಇಬ್ಬರೂ ಒಟ್ಟಿಗೆ ಬಾಗಿಲಿಗೆ ಬಂದು ನಿಂತದ್ದನ್ನು ನೋಡಿ ಡಾ. ಮೋರಿಸರು, "ಏನು ಮಿಸ್! ಮಿ. ಅರುಣನಿಲ್ಲದ ಕ್ಲಾಸು ರುಚಿಸುವುದಿಲ್ಲವೇ?" ಎಂದಾಗ ನಗೆಯ ತೆರೆಯೇ ಎದ್ದಿತು. ಕು. ದೇಶಪಾಂಡೆ ಲಜ್ಜೆಯಿಂದ ಬಾಗಿ ಹೋದಳು. ಕ್ಲಾಸು ಮುಗಿಯುವ ತನಕ ತಲೆಬಗ್ಗಿಸಿಯೇ ಕುಳಿತಿದ್ದಳು. ಕ್ಲಾಸು ಬಿಟ್ಟಕ್ಷಣ ನೇರ ನನ್ನ ಹತ್ತಿರ ಬಂದು, "ಏನ್ರಿ ಮಿ. ಅರುಣ! ಹೀಗೆ ನೀವು ಮೊಸಮಾಡಬಹುದೇ?" ಎಂದಳು. ನಾಳೆ ಕ್ಲಾಸ ಇದೆಯೆಂದು ಸತ್ಯವನ್ನು ಹೇಳಿದೆನಲ್ಲ? ನಾನೆಲ್ಲಿ ಮೋಸ ಮಾಡಿದೆ? ಎಂಬ ಮರುಸವಾಲು ಹೊರಡಿಸಿದೆ. ಕೆಂಡಕಾರುವ ಕಣ್ಣುಗಳಿಂದ ನನ್ನನ್ನು ನೋಡಿ ತತ್‌ಕ್ಷಣ ಬಿರಬಿರನೆ ಹೋಗಿಬಿಟ್ಟಳು. ಅಂದಿನಿಂದ ಅವಳು ನನ್ನತ್ತ ಕಣ್ಣೆತ್ತಿ ನೋಡಲಿಲ್ಲ. ನಾನಾದರೂ ಅವಳನ್ನು ಮಾತನಾಡಿಸುವ ಗೊಡವೆಗೆ ಹೋಗಲಿಲ್ಲ.

ಅಂದು ಆಗಸ್ಟ್ ಹದಿನೈದರ ಸೂಟಿ ಇತ್ತು. ಮಧ್ಯಾಹ್ನ ಮಲಬಾರ ಹಿಲ್ಲಿನಲ್ಲಿ ಪಂತಿಗಾಗಿ ನೆರೆಯುವದೆಂದು ಡಿಪಾರ್ಟಮೆಂಟಿನ ವಿದ್ಯಾರ್ಥಿಗಳೆಲ್ಲ ನಿರ್ಧರಿಸಿದ್ದೆವು. ಎಲ್ಲರೂ ವೇಳೆಗೆ ಸರಿಯಾಗಿ ಮುಟ್ಟಿದರೂ, ಕು. ದೇಶಪಾಂಡೆ ತಲುಪಿರಲಿಲ್ಲ. ತಾನು ಆಯ್ಸಕ್ರೀಮ್ ಮಾಡಿ ತರುವೆನೆಂದು ಆಕೆ ಹೇಳಿದ್ದರಿಂದ ಎಲ್ಲರಿಗೂ ಅಸಮಾಧಾನ-ಅರ್ಧ ತಾಸು ಕಳೆದನಂತರ ಕಾರಿನೊಳಗಿಂದ ಇಳಿಯುತ್ತ

ಕ್ಷಮಾಯಾಚನೆಯೊಂದಿಗೆ ಆಯ್ಸಕ್ರೀಮ್ ತೆಗೆದಳು. ಎಲ್ಲರಿಗೂ ಹಂಚುವ ಪಾಳಿ ಅವಳಿಗೇ ಬಿತ್ತು. ಮುಂಬಯಿಯ ಅಂದಿನ ಅನಿರೀಕ್ಷಿತ ಬಿಸಿಲಿಗೆ ಆಯ್ಸಕ್ರೀಮ್ ಸ್ವಲ್ಪ ಕರಗಿದ್ದರಿಂದ ನನಗೆ ಕೊಡುವಾಗ ಕರಗಿದ ಆಯ್ಸಕ್ರೀಮ ನನ್ನ ಕೈಮೇಲೆ ಬಿದ್ದಾಗ ತುಂಟತನದಿಂದ ಅವಳ ಹೊಸ ಸೀರೆಯ ಸೆರಗಿಗೆ ಅದನ್ನು ಒರಸಿದಾಗ ಛಟ್‌ಯೆಂದು ಎಡಗೈ ನನ್ನ ಕೆನ್ನೆಗೊಂದು ಏಟು ಬಿಗಿಯಿತು. ಹುಡುಗಿ ಇಷ್ಟು ಧಿಟ್ಟೆಯೆಂಬ ನಿರೀಕ್ಷೆ ಇರದ್ದರಿಂದ ಈ ಘಟನೆಯಿಂದ ಸಾವರಿಸಿಕೊಂಡು, "ಕು. ದೇಶಪಾಂಡೆಯ ಕೈ ಇಷ್ಟೊಂದು ಮೃದುವಾಗಿದೆಯೆಂದು ಅನಿಸಿರಲಿಲ್ಲ" ಎಂದಾಗ ಎಲ್ಲರೂ ನಕ್ಕರು. ಘಟನೆಯ ಗಾಂಭೀರ್ಯ ನಗೆಯಲ್ಲಿ ತೇಲಿತು. ಕು. ದೇಶಪಾಂಡೆಯ ಮುಖ ಮಾತ್ರ ಅರೆಮುನಿಸು ಅರೆ ದ್ವೇಷದಿಂದ ಕೆಂಪಾಗಿತ್ತು. ಉಳಿದ ವೇಳೆಯಲ್ಲಿ ಆಕೆ ಹೆಚ್ಚು ಮಾತನಾಡಲಿಲ್ಲ. ಆಕೆಯು ಸ್ವಾಭಾವಿಕವಾಗಿಯೇ ಗಂಭೀರ ಪ್ರಕೃತಿಯವಳು. ಆದುದರಿಂದ ಇದನ್ನಾರೂ ಗಮನಿಸುವಂತಿರಲಿಲ್ಲ.

ಮರುದಿನ ಯಾಕೋ ಕು. ದೇಶಪಾಂಡೆ ಕ್ಲಾಸಿಗೆ ಬಂದಿರಲಿಲ್ಲ. ಅವಳು ಬಾರದ್ದರಿಂದ ನನಗೆ ಬಹಳ ಅಧೈರ್ಯವೆನಿಸಿತು. ರಾತ್ರಿ ಹಾಸ್ಟೆಲಿನಲ್ಲಿ "ನಾನು ಅನುಚಿತ ಕೆಲಸ ಮಾಡಿದನೇ?" ಎಂದು ತುಂಬ ಯೋಚಿಸಿದೆ. ಮಲಗುವಾಗ ತಲೆನೋವು ಕಾಣಿಸಿಕೊಂಡಿತು. ಬೆಳಿಗ್ಗೆ ಮೈ ಭಾರವಾಗಿತ್ತು. ನೋಯುತ್ತಿತ್ತು. ಸಾಕಷ್ಟು ಬಿಸಿಯೂ ಆಗಿತ್ತು. ಕಾಲೇಜಿನ ವಿಚಾರ ಬಿಟ್ಟು ಮಲಗಿಬಿಟ್ಟೆ. ಸಂಜೆ ಮಿತ್ರ ಮಂಡಳಿ ಬಂದಾಗ ಅಂದು ಕು. ದೇಶಪಾಂಡೆ ಬಂದಿದ್ದಳೆಂದು ತಿಳಿದು ನೆಮ್ಮದಿಯೆನಿಸಿತು. ಆದರೆ ಜ್ವರ ಮಾತ್ರ ಏರಿತು. ಮರುದಿನ ೧೦೨ ಡಿಗ್ರಿಗೆ ಏರಿತು. ಹಾಸ್ಟೆಲಿನ ಡಾಕ್ಟರರು ಬಂದು ಒಂದು ಇಂಜೆಕ್ಷನ್ ಕೊಟ್ಟರು. ಏನೂ ಪ್ರಯೋಜನವಾಗಲಿಲ್ಲ. ಅಂದಿನ ಪಿಕ್‌ನಿಕ್ಕಿನ ಮೊದಲಿನ ದಿನ ವೇಳೆಯಲ್ಲಿ ಮಳೆಯಲ್ಲಿ ನೆನೆದಿದ್ದೆ. ಅದರ ಪರಿಣಾಮವೆಂದು ಗುಣವಾಗುವ ತನಕ ಕಾದೆ. ಆಯ್ಸಕ್ರೀಮ್ ಪ್ರಕರಣ ಮತ್ತೆ ಮತ್ತೆ ಕಣ್ಣೆದುರು ಹಾಯುತ್ತಿತ್ತು. ಸೂರು ನೋಡುತ್ತ ಕೈಬೆರಳನ್ನು ಹೆಣೆಯುತ್ತ ಬಿದ್ದುಕೊಂಡಿದ್ದೆ. ಯಾರೋ ಬಾಗಿಲು ತಟ್ಟಿದಂತಾಯಿತು. ಏಳಲು ತುಂಬ ಅಶಕ್ತಿಯೆನಿಸಿದ್ದರಿಂದ ಮಲಗಿದ್ದಲ್ಲಿಂದಲೇ ಬನ್ನಿ, ಎಂದೆ. ಹೆಣ್ಣು ಆಕೃತಿಯೊಂದು ಒಳಪ್ರವೇಶಿಸಿದಂತಾಯಿತು. ಕು. ಆಶಾ ದೇಶಪಾಂಡೆ! ಹುಡುಗರ ಹಾಸ್ಟೆಲಿಗೆ ಹುಡುಗಿ ಹೀಗೆ ಬಂದಳು? ಎನ್ನುವುದಕ್ಕಿಂತ ನನ್ನ ಖೋಲಿಗೆ ಆಶಾ ದೇಶಪಾಂಡೆ ಹೇಗೆ ಬಂದಳು? ಎಂದು ಆಶ್ಚರ್ಯವಾಯಿತು. ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದೆ. ಆಕೆ ಏಳಲು ಕೊಡಲಿಲ್ಲ. ತಾನೇ ಮಾತಿಗೆ ಪ್ರಾರಂಭಿಸಿದಳು. "ಕ್ಷಮಿಸಿ ಮಿ. ಅರುಣ, ನೀವು ಎರಡು ದಿನ ಕ್ಲಾಸಿಗೆ ಬರಲಿಲ್ಲ. ಆಮೇಲೆ ನಿಮಗೆ ಮೈಯಲ್ಲಿ ಚೆನ್ನಾಗಿರಲಿಲ್ಲವೆಂದು ತಿಳಿದು ಕಳವಳವಾಯಿತು. ನೋಡಿ ಹೋಗೋಣವೆಂದು

ಬಂದೆ" ಎಂದಳು. "ನಿಮಗೆ ಒಬ್ಬರಿಗೇ ಬರಲು ಹೇಗೆ ಧೈರ್ಯವಾಯಿತು?" ಎಂದು ಬಾಯಿಗೆ ಬಂದ ಮಾತನ್ನು ತಡೆದು, "ನಿಮ್ಮನ್ನು ಹಾಸ್ಟೆಲಿನ ಒಳಗೆ ಹೇಗೆ ಬಿಟ್ಟರು?" ಎಂದು ಕೇಳಲು "ನೀವು ನನಗೆ ಸಂಬಂಧವಾಗಬೇಕೆಂದು ಚೌಕಿದಾರನಿಗೆ ಹೇಳಿದೆ. ಮರುಮಾತಿಲ್ಲದೇ ಒಳಗೆ ಬಿಟ್ಟನು" ಎಂದಳು.

ಕೆಲಹೊತ್ತು ಇಬ್ಬರೂ ಮೌನವಾಗಿದ್ದರೆ ಆಕೆ ಏನನ್ನೊ ಹೇಳಹೋಗಿ ಹಿಂಜರಿಯುತ್ತಿರುವಂತೆ ಅರುಣನಿಗೆನಿಸಿತು. ಅಂತೆಯೇ "ನನ್ನಿಂದ ಏನಾದರೂ ಕೆಲಸವಾಗಬೇಕಾಗಿದೆಯೇ" ಎಂದು ಕೇಳಿದೆ. "ಹೌದು..... ಒಂದು ಕೆಲಸವಾಗಬೇಕಾಗಿದೆ......ಅಂದು ಪಿಕನಿಕ್ ನಡೆದಾಗ ನಾನು ಎಂದಿಲ್ಲದ ಅಪರಾಧ ಮಾಡಿದ್ದೇನೆ. ನಾನು ದುಡುಕಬಾರದಾಗಿತ್ತು. ನನ್ನನ್ನು ಕ್ಷಮಿಸುವಿರಾ?" ಎಂದು ಕೇಳಿದಾಗ ಅವಳ ಕಂಠ ನಡುಗುತ್ತಿತ್ತು. ಅಶ್ರುಗಳು ಇನ್ನೇನು ನೆಲಕ್ಕೆ ಜಿಗಿಯುವ ಹವಣಿಕೆಯಲ್ಲಿದ್ದವು. ಅರುಣನು ತಟ್ಟನೆ ಬೇರೆಡೆ ನೋಡುತ್ತ "ಇದೆಂತಹ ಮಾತು? ನಾನು ಅದಾಗಲೇ ಅದನ್ನು ಮರೆತಿದ್ದೇನೆ. ಅದರಲ್ಲಿ ತಪ್ಪು ನನ್ನದೇ ಅಲ್ಲವೇ? ಕ್ಷಮಿಸಬೇಕಾದವರು ನೀವು" ಎಂದಾಗ ಅಳು ನಗುವಾಯಿತು. ರಾಜಿಗಾಗಿ ಎಂಬಂತೆ ಇಬ್ಬರ ಕೈಗೂಡಿದವು. ಒಮ್ಮೆಲೇ ಬೆಚ್ಚಿಬಿದ್ದಳು. ಕು. ದೇಶಪಾಂಡೆ ಹಾಗೆಯೇ ಅರುಣನ ಹಣೆಯ ಮೇಲೆ ಕೈಯಿಟ್ಟಳು. "ಆಯಿಗs! ನಿಮ್ಮ ಹಣೆ ಸುಡುತ್ತಿದೆ. ಇಷ್ಟಾದರೂ ಎಷ್ಟು ಶಾಂತವಾಗಿ ಮಲಗಿರುವಿರಲ್ಲ!" ಎಂದು ಸುತ್ತ ನೋಡಿದಳು. ಕೋಣೆಯ ಮೂಲೆಯಲ್ಲಿದ್ದ ಹೂಜಿಯ ನೀರಿನಿಂದ ತನ್ನ ಕರವಸ್ತ್ರವನ್ನು ತೋಯಿಸಿ ನನ್ನ ಹಣೆಗೆ ಪಟ್ಟಿ ಹಾಕಿದಳು. ಅದು ಒಣಗುತ್ತಿದ್ದಂತೆ ಹನಿಹನಿಯಾಗಿ ನೀರು ಬಿಡುತ್ತ ಕುಳಿತಳು. ಹಾಗೆಯೇ ಬಿದ್ದುಕೊಂಡಿದ್ದ ನನಗೆ ಹನ್ನೆರಡು ಗಂಟೆಗೆ ಕ್ಲಾಸಿದ್ದದ್ದು ನೆನಪಾಯಿತು. ಅಂತೆಯೇ "ಮಿಸ್ ದೇಶಪಾಂಡೆ! ನಿಮಗೆ ತಡವಾಗುತ್ತಿದೆ. ಕ್ಲಾಸಿದ್ದದ್ದು ಮರೆತೇ ಹೋಯಿತೇ?" ಎಂದು ನಗಲು ಯತ್ನಿಸಿದೆ. "ಹೋಗುತ್ತೇನೆ ಆದರೆ ನನ್ನದೊಂದು ವಿನಂತಿ. ಇನ್ನು ಮುಂದೆ ನೀವು ನನ್ನನ್ನು ಮಿಸ್ ದೇಶಪಾಂಡೆ ಎಂದು ಕರೆಯದೇ ಬರೇ ಆಶಾ ಎಂದು ಕರೆದರೆ ನನಗೆ ಹೆಚ್ಚು ಸಂತೋಷವಾಗುತ್ತದೆ" ಎಂದು ಎದ್ದು ನಿಂತಳು. "ಹೋಗುತ್ತ, ನಮ್ಮ ಚಪರಾಸಿ ಎಲ್ಲಾದರೂ ಕಂಡರೆ ಇಲ್ಲಿ ಕಳಿಸುವಿರಾ ಆಶಾ?" ಎಂದಾಗ ಅವಳ ಕಣ್ಣು ಮಿನುಗಿದವು. ತೃಪ್ತಿಯ ನಗು ಬೀರಿ ಹೊರಟು ಹೋದಳಾಕೆ.

ಆಶಾ ಕಣ್ಮರೆಯಾದ ಮೇಲೆ ಜ್ವರದ ಉದ್ವೇಗದಲ್ಲಿ ಕನಸುಕಂಡಿತೇ ಅಥವಾ ಇದು ನೈಜ ಅನುಭವವೇ! ಎಂದು ತರ್ಕಿಸುವದು ನನಗೆ ಕಷ್ಟವಾಯಿತು. ಒಂದು ಕಪ್ ಚಹಾ ತರಿಸಿ ಕುಡಿಯಬಹುದಾಗಿತ್ತು. ಚಪರಾಸಿ ಎಲ್ಲಿರುವನೋ ಎಂದು ಏಳಲು

ತ್ರಾಣವಿಲ್ಲದೇ ಗೋಡೆಯತ್ತ ದಿಟ್ಟಿಸುತ್ತ ಮಲಗಿದ್ದೆ. ಐದು ನಿಮಿಷಗಳ ನಂತರ ಬಾಗಿಲು ತೆರೆದ ಸಪ್ಪಳವಾಯಿತು. ಆದರೂ ತಿರುಗಿ ನೋಡಲಿಲ್ಲ. ಯಾರೋ ಕಣ್ಣು ಮುಚ್ಚಿದರು. ಬಿಡಿಸಿಕೊಳ್ಳ ಹೋದಾಗ ಮೃದು ಸ್ತ್ರೀ ಹಸ್ತ ಸ್ಪರ್ಶವಾಯಿತು. "ಆಶಾ" ಎಂದಾಗ ಕೈಬಿಟ್ಟು ಕಿಲಕಿಲನೆ ನಕ್ಕಳು. "ಅಂತೂ ಈ ಹೊಸ ಸ್ನೇಹಿತೆಯನ್ನು ಮರೆಯಲಿಲ್ಲವೆಂದಾಯಿತು. ಇಕೊ ನಿಮಗಾಗಿ ಕಾಫಿ ಕೆಂಟಿನ್ನಿನಿಂದ ತರಿಸಿದ್ದೇನೆ" ಎಂದು ತನ್ನ ಥರ್ಮಾಸ ಫ್ಲಾಸ್ಕಿನಿಂದ ಕಾಫಿ ಬಗ್ಗಿಸಿ ನನ್ನ ಕೈಗಿತ್ತಳು. ತಾನು ತಂದ ಟಿಫಿನ್ ತೆಗೆದು ಮೆಲ್ಲಲಾರಂಭಿಸಿದಳು. "ದಿನಾಲು ತಿನ್ನುವ ತಿಂಡಿಗಿಂತ ಇಂದಿನ ತಿಂಡಿಗೆ ಬಹಳ ರುಚಿ ಬಂದಿದೆ. ದಿನಾಲು ನಾನು ಇಲ್ಲೇ ಟಿಫಿನ್ ತಕ್ಕೊಳ್ಳಲೇ?" ಎಂದು ಕೇಳಿದಳು-

"ನಿಮ್ಮನ್ನು ಚೌಕಿದಾರನು ಒಳಗೆ ಬಿಟ್ಟಿರಲ್ಲವೇ?" ಎಂದಾಗ "ನಾ ಎಲ್ಲ ಬಲ್ಲೆ. ಆಗೀಗ ಒಂದೆರಡು ರೂಪಾಯಿ ಒಗೆದರೆ ಸುಮ್ಮನಿರುತ್ತಾನೆ. ಈಗಾದರೂ ನಾನು ಅದನ್ನೇ ಮಾಡಿದೆ. ನೋಡಿ, ಪ್ರತಿಸಲ ಬಂದಾಗ ಸಲಾಮು ಹೊಡೆದು ನೀವು ಕೋಣೆಯಲ್ಲಿರುವ ಸಂಕೇತ ಕೊಡದಿದ್ದರೆ ಹೇಳುವಿರಂತೆ" ಎಂದಳು. "ಅಂದಹಾಗೆ ನಿಮಗೆ ವ್ಯವಹಾರ ಚೆನ್ನಾಗಿ ತಿಳಿದಂತಿದೆ" ಎಂದರೂ ಮನಸ್ಸಿನಲ್ಲಿ "ಹುಡುಗಿ ನನ್ನ ಎಣಿಕೆ ಮೀರಿ ಜೋರು!" ಇದ್ದಾಳೆಂದು ಅನಿಸದೇ ಇರಲಿಲ್ಲ.

ಆಶಾ ಹಾಸ್ಟೆಲಿಗೆ ಬಂದ ಸುದ್ದಿ ಕಾಡ್ಗಿಚ್ಚಿನಂತೆ ಬಲು ಬೇಗ ಗೆಳೆಯ ವೃಂದದಲ್ಲಿ ಹಬ್ಬಿತು. ಎಲ್ಲರೂ ಬಂದು ನನ್ನನ್ನು ಪೀಡಿಸತೊಡಗಿದರ. ಎಲ್ಲರ ಪ್ರಶ್ನೆಯೂ ಒಂದೇ "ಅವಳನ್ನು ಹೇಗೆ ಬಲೆಗೆ ಹಾಕಿಕೊಂಡೆ?" ಎಂದು ಚಹಾಪಾರ್ಟಿಯಾಗಲಿ! ಎಂದು ಒಬ್ಬನಂದರೆ, ಇನ್ನೊಬ್ಬನು ಭರ್ಜರಿ ಔತಣವಾಗಲಿ ಎನ್ನುವ. ಒಬ್ಬಾತ, ನಾನೇ ಅವಳನ್ನು ನಿನ್ನ ಕಡೆಗೆ ಕಳಿಸಿದೆ! ಎಂದು ತನ್ನ ಶ್ರೇಯಸ್ಸನ್ನು ಸಾಧಿಸಲು ಯತ್ನಿಸಿದರೆ, ಇನ್ನೊಬ್ಬಾತ ನಿನ್ನ ಅಸ್ವಸ್ಥತೆಯ ಬಗ್ಗೆ ನಾನೇ ಅವಳಿಗೆ ಮೊದಲು ತಿಳಿಸಿದ್ದು! ಎಂದ. ಅವರೆಲ್ಲರ ಮಾತಿಗೆ ನನ್ನದೊಂದೇ ಉತ್ತರ. "ಸ್ವಲ್ಪ ತಾಳಿ-ನಾಳೆ ಅವಳಿಗೇ ಕೇಳುತ್ತೇನೆ-ನಮ್ಮ ಗೆಳೆತನದ ಶ್ರೇಯಸ್ಸು ಯಾರಿಗೆ ಸಲ್ಲತಕ್ಕದ್ದು ಎಂದು. ಅಲ್ಲದೇ ಎಂಥ ಪಾರ್ಟಿ ಕೊಡಬೇಕೆಂಬುದನ್ನೂ ನಾನೇ ಕೇಳಿ ನಿರ್ಧರಿಸುತ್ತೇನೆ-" ಎಂದಾಗ ಎಲ್ಲರೂ ದಂಗಾದರು. ಇಷ್ಟು ಸಲಿಗೆ ಬೆಳೆದು ಬಿಟ್ಟಿದೆಯೇ? ಎಂದು ಆಶ್ಚರ್ಯಪಟ್ಟರು. ನಾನು ಅದನ್ನು ಚೇಷ್ಟೆಗೆಂದೇ ಹೇಳಿದರೂ ನಿಜವೆಂದೇ ಅವರೆಲ್ಲ ನಂಬಿದಂತಿತ್ತು.

ಮರುದಿನ ಜ್ವರ ಇಳಿಯಿತು. ಆದರೂ ಡಾಕ್ಟರರು ಮಲಗಿ ವಿಶ್ರಾಂತಿ ಪಡೆಯುವಂತೆ ಹೇಳಿದ್ದರು. ಮಲಗಿದಲ್ಲೇ ಇಂದೂ ಕೂಡ ಆಶಾ ಬಂದಿದ್ದರೆ.....ಎಂಬ ಹುಚ್ಚು ವಿಚಾರ ಸುಳಿಯಿತು. ಒಂದೇ ದಿನದಲ್ಲಿ ಆಶಾ ನನ್ನಲ್ಲಿ ಮಾಡಿದ ಪರಿವರ್ತನೆಯ

ಬಗ್ಗೆ ವಿಚಾರಿಸುತ್ತ ಬಿದ್ದುಕೊಂಡಿದ್ದೆ. ಕಾಲೇಜು ಸೇರಿದಂದಿನಿಂದ ಎಷ್ಟೊಂದು ಹುಡುಗಿಯರನ್ನು ನೋಡಿರಲಿಲ್ಲ? ಎಷ್ಟೊಂದು ಜನರಿಗೆ ಹಾಸ್ಯ, ಕುಚೋದ್ಯ ಮಾಡಿರಲಿಲ್ಲ? ಆದರೆ ಆಶಾ ಅವರೆಲ್ಲರಿಗಿಂತ ಭಿನ್ನವಾಗಿದ್ದಾಳೆ. ಬಹಳ ಗಂಭೀರೆ. ಅಷ್ಟೇ ಚತುರೆ. ತೆಳ್ಳಗಿನ ಮಾಟವಾದ ಮೈಕಟ್ಟು, ಮೈ ಬಣ್ಣ ನಸುಗಪ್ಪಾದರೂ ಮುಖದಲ್ಲಿ ತೇಜಸ್ಸಿದೆ. ಅವಳ ಉದ್ದವಾದ ಕೇಶರಾಶಿ ಎಂತಹರನ್ನೂ ಮರುಳಗೊಳಿಸಬಲ್ಲದು. ಅವಳು ತೊಡುವ ವೇಷಭೂಷಣಗಳು ಅವಳ ಕಲಾತ್ಮಕ ದೃಷ್ಟಿಯನ್ನು ಸಾರಿ ಹೇಳುತ್ತವೆ. ಕಾರಿನಲ್ಲಿ ಬರುತ್ತಾಳೆ ಎಂದರೆ ಸಿರಿವಂತರ ಕುಟುಂಬಕ್ಕೆ ಸೇರಿದವಳಿರಬೇಕು. ಆದರೂ ಎಳ್ಳಷ್ಟೂ ಗರ್ವವಿಲ್ಲ ಎಂದು ಆಲೋಚಿಸುತ್ತಿದ್ದೆ. ಕಣ್ಣುಮುಚ್ಚಿ ಮಲಗಲೆತ್ನಿಸಿದೆ. ನಿದ್ದೆ ಬರಲಿಲ್ಲ. ಎದುರಿಗೆ ಆಶಾಳೇ ಬರುತ್ತಿದ್ದಂತೆ ಭಾಸವಾಯಿತು. ಹಾಗೇ ಮೆಲ್ಲಗೇ "ಆಶಾ" ಎಂದೆ "ಓ ಬಂದೆ" ಎಂದಿತು ಪರಿಚಿತ ಹೆಣ್ಣುಧ್ವನಿ. ಒಮ್ಮೆಲೆ ಕಣ್ತೆರೆದೆ, ಎದುರಿಗೆ ಆಶಾ! ನನ್ನ ಕಣ್ಣುಗಳನ್ನು ನಂಬದಾದೆ. ಎಂದಿಲ್ಲದ ಎಚ್ಚರಿಕೆಯಿಂದ ವೇಷಭೂಷಣ ಮಾಡಿಕೊಂಡಂತಿತ್ತು. ಕೈಯಲ್ಲಿ ಪ್ಲಾಸ್ಟಿಕ್ ಬ್ಯಾಗ ಒಂದು ಇತ್ತು. ಬ್ಯಾಗದೊಳಗಿಂದ ಮೊದಲು ಬಿಸ್ಕೀಟು ಬಂದವು. ಫ್ಲಾಸ್ಕು ಕಾಣಿಸಿಕೊಂಡಿತು. ಕಾಫಿ ಬಗ್ಗಿಸಿಕೊಟ್ಟು ಹಣ್ಣು ಸುಲಿಯಲಾರಂಭಿಸಿದಳು. "ಇವನ್ನೆಲ್ಲ ಏಕೆ ತಂದೆ ಆಶಾ?" ಎಂದೆ. "ನಾನು ನಿಮಗೆ ಮಾಡಿದ ಅವಮಾನಕ್ಕೆ ಇದೇನೂ ಅಲ್ಲ. ಆದರೂ ಸ್ವಲ್ಪವಾದರೂ ತಪ್ಪುಗಾಣಿಕೆ ಸಲ್ಲಿಸೋಣ! ಎಂದು ತಂದೆ" ಎಂದಳು. ಅವಳು ಸುಲಿದು ಕೊಟ್ಟ ಮೋಸಂಬಿ ತಿನ್ನುತ್ತ ಅವಳನ್ನೇ ನೋಡುತ್ತಿದ್ದೆ. "ನೀವೂ ತಿನ್ನಿರಲ್ಲ" ಎಂದು ಒತ್ತಾಯಮಾಡಿದಾಗ ತಾನೂ ಹಣ್ಣು, ಕಾಫಿ ತೆಗೆದುಕೊಂಡಳು.

"ನಿನ್ನೆ ನಾನು ಇಲ್ಲಿಂದ ಹೋದಮೇಲೆ ಏನು ತಮಾಷೆಯಾಯಿತು ಗೊತ್ತೆ? ನನ್ನ ಪ್ರಯೋಗಗಳ ಪಾರ್ಟನರ ಆದ ಮಿ. ಪಿಂಗಳೆ ಕಾಲೇಜು ಬಿಟ್ಟು ಹೋದನಲ್ಲವೇ? ಆದ್ದರಿಂದ ನನಗೆ ಯಾರು ಹೊಸ ಪಾರ್ಟನರ ಬೇಕೆಂದು ಪ್ರಾಧ್ಯಾಪಕರು ಕೇಳಿದರು" "ನೀನು ಮಿ. ಅರುಣನ ಪಾರ್ಟನರ ಆಗಬಹುದಲ್ಲ. ಅವನೂ ಒಬ್ಬನೇ ಆಗಿದ್ದಾನೆ" ಎಂದು ಅವರೇ ಸೂಚಿಸಿದರು. "ಅವನೊಬ್ಬ ಕುಚೋದ್ಯಗಾರ, ಏನಾದರೊಂದು ಕುಚೇಷ್ಟೆ ಮಾಡಬಹುದು" ಎಂದು ನಾನು ಹೇಳಿದೆ. ಅದಕ್ಕವರು ಒಂದು ದೊಡ್ಡ ಉಪನ್ಯಾಸವನ್ನೇ ಬಿಗಿದು, ಕ್ಲಾಸಿನಲ್ಲಿ ಸ್ವಂತ ಬುದ್ಧಿ ಯಾರಿಗಾದರೂ ಇದ್ದಿದ್ದರೆ ಅದು ಅರುಣನಿಗೆ ಮಾತ್ರ! ಓದಿನ ಕಡೆಗೆ ಇನ್ನೂ ಹೆಚ್ಚು ಲಕ್ಷ್ಯ ಕೊಟ್ಟರೆ, ಅವನೊಬ್ಬ ವಿಖ್ಯಾತ ವಿಜ್ಞಾನಿಯಾಗುವುದರಲ್ಲಿ ಸಂದೇಹವಿಲ್ಲ, ಎಂದು ನಿಮ್ಮನ್ನು ಬಹಳ ಹೊಗಳಿದರು. ನಾನು ಅವರು ಹೇಳಿದ್ದನ್ನೆಲ್ಲ ಕೇಳುತ್ತ ಒಪ್ಪಿಗೆಯ ಗೋಣು ಹಾಕಿದೆ-ಇಂದಿನಿಂದ ನೀವು ನನ್ನ ಪಾರ್ಟನರ್ ಎಂದು ಮುಗುಳುನಗೆ ನಕ್ಕಳು.

"ನೀವು ಹೀಗೆ ಮಾಡಿದ್ದಕ್ಕೆ ಎಷ್ಟೊಂದು ಸಹಪಾಠಿಗಳಿಗೆ ನಿರಾಶೆಯಾಗಿದೆ ಗೊತ್ತೆ? ಪಿಂಗಳೆ ಹೋದಂದಿನಿಂದ ಕು. ದೇಶಪಾಂಡೆ ತನ್ನ ಪಾರ್ಟನರ ಆಗಬಹುದೆಂದು ಗೋಡೆಬೋಲೆ ಆಶಾಗೋಪುರ ಕಟ್ಟಿದ್ದ. ಸದಾವರ್ತೆಯಂತೂ ತಾನು ರ್‍ಯಾಂಕ ವಿದ್ಯಾರ್ಥಿಯಾದ್ದರಿಂದ ತಾನಾಗಿಯೇ ಪಾರ್ಟನರ್ ಆಗೆಂದು ತನ್ನನ್ನು ನೀವು ಕೇಳಬಹುದೆಂದು ನಂಬಿದ್ದಾನೆ. ನಿಮ್ಮ ಮನೆಯ ಪಕ್ಕದಲ್ಲಿದ್ದ ಆ ಗುರುದಾಸ ಪೈಯಂತೂ ನೀವು ತನ್ನವಳೇ ಎಂದು ವರ್ತಿಸುತ್ತಾನೆ. ಅಂದು ಪಿಕ್‌ನಿಕ್ ಮುಗಿದ ಮೇಲೆ ನಿಮ್ಮ ಕಾರಿನಲ್ಲೇ ಹೊರಟನಲ್ಲವೇ? ಸಮಯ ಸಿಕ್ಕಹಾಗೆಲ್ಲ ನಿಮ್ಮ ಬಗ್ಗೆ ಮಾತನಾಡದೇ ಇರುವುದಿಲ್ಲ. ನಿಮ್ಮ ತಾಯಿ ಮತ್ತು ಅವನ ತಾಯಿ ಜೀವಸ್ಯ ಕಂಠಸ್ಯ ಅಂತೆ- ನಿಮ್ಮಲ್ಲಿ ಹೋಗಿ ಬರುವದು ಪರಿಪಾಠವಂತೆ. ತಾಯಿಯ ಸಂಗಡ ನೀವೂ ಅವನ ಮನೆಗೆ ಹೋದಾಗಲೆಲ್ಲ ಅವನ ತಂಗಿಯಿಂದ ಅವನ ನೋಟುಪುಸ್ತಕಗಳನ್ನೆಲ್ಲ ತರಿಸಿಕೊಳ್ಳುವಿರಂತೆ. ಆಶಾ ತನ್ನಲ್ಲಿ ಮೋಹಿತಳಾಗಿದ್ದಾಳೆಂಬುದರಲ್ಲಿ ಯಾವ ಸಂದೇಹವನ್ನೂ ಆತ ಇಟ್ಟುಕೊಂಡಿಲ್ಲ" ಎಂದು ಅವಳ ಪ್ರತಿಕ್ರಿಯೆಗೆ ಕಾದೆ. ಹೂವಿನಂತೆ ಅರಳಿದ ಅವಳ ಮುಖ ತಟ್ಟನೆ ಬಾಡಿತು. "ಅರುಣ, ಈ ಜಗತ್ತಿನಲ್ಲಿ ನಾನು ಯಾರನ್ನಾದರೂ ದ್ವೇಷಿಸುವಂತಿದ್ದರೆ, ಅದು ಈ ಮಹಾರಾಜನನ್ನು. ಶನಿಯಂತೆ ನನ್ನನ್ನು ಕಾಡುತ್ತಿದ್ದಾನೆ. ನಾನು ತಪ್ಪಿ ಕೂಡ ಅವನನ್ನು ಮಾತನಾಡಿಸುವ ಗೋಜಿಗೆ ಹೋಗುವುದಿಲ್ಲ. ಆದರೂ ಆತ ಬಿಡವೊಲ್ಲ. ನಮ್ಮ ತಾಯಿ ಅವರ ಮನೆಗೆ ಹೋದಾಗೆಲ್ಲ ಏನಾದರೂ ನೋಟ್ಸ್ ಕೊಟ್ಟು ಕಳಿಸುವ. ಆಗೊಮ್ಮೆ ಈಗೊಮ್ಮೆ ಮೂರ್ಖ ಪ್ರೇಮಪತ್ರಗಳನ್ನು ಬರೆಯುವ. ನನ್ನ ತಾಯಿ ತಂದೆಗಳಿಗೆ ತನ್ನಿಂದ ಆಶಾಗೆ ವಿದ್ಯಾಭ್ಯಾಸಕ್ಕೆ ಬಹಳ ಸಹಾಯವಾಗುತ್ತದೆ! ಎಂಬ ಕಲ್ಪನೆ ಮಾಡಿಕೊಟ್ಟಿದ್ದಾನೆ. ಅಂದು ಪಿಕ್‌ನಿಕ್‌ದ ನಂತರ ಅವನು ಕಾರಿನಲ್ಲಿ ಬಂದದ್ದು ನನಗೆ ಎಳ್ಳಷ್ಟೂ ಮನಸ್ಸಿಗೆ ಬರಲಿಲ್ಲ. ಆದರೆ ನಾನು ಬರುವ ಮೊದಲೇ ಡ್ರೈವರನ ಜೊತೆ ಮಾತನಾಡಿ ಕಾರು ಏರಿ ಹಿಂದಿನ ಸೀಟಿನಲ್ಲಿ ಕುಳಿತೇ ಬಿಟ್ಟಿದ್ದ. ಅವನನ್ನು ಕಂಡಾಗ ಕೆನ್ನೆಗೆ ಎರಡು ಬಿಗಿಯುವಷ್ಟು ಸಿಟ್ಟು ಬಂದಿತ್ತು ಆದರೂ ನಮ್ಮೆರಡು ಮನೆತನಗಳ ಸ್ನೇಹ ನೆನಪಿಗೆ ಬಂದು ಸುಮ್ಮನಾದೆ. ನಾನೂ ಹಿಂದಿನ ಸೀಟಿನಲ್ಲಿ ತನ್ನ ಮಗ್ಗುಲಲ್ಲಿ ಬಂದು ಕೂಡಬಹುದೆಂದು ಆತನ ನಿರೀಕ್ಷೆಯಿತ್ತು. ಆದರೆ ನಾನು ಮುಂದಿನ ಸೀಟಿನಲ್ಲಿ ಹೋಗಿ ಕುಳಿತೆ. ಕಾರು ಹೋಗುತ್ತಿದ್ದಂತೆ ನೂರಾರು ಪ್ರಶ್ನೆಗಳನ್ನು ಕೇಳಿದ. ಆದರೆ ಒಂದಕ್ಕೂ ಸಮರ್ಪಕ ಉತ್ತರ ದೊರಯಲಿಲ್ಲ. ಆತ ಇಳಿದು ಹೋದಕೂಡಲೇ ಡ್ರೈವರನಿಗೆ ಬಜಾಯಿಸಿ ಹೇಳಿದೆ. "ಇನ್ನು ಮುಂದೆ ಕಾರಿನಲ್ಲಿ ನನ್ನ ಅನುಮತಿಯಿಲ್ಲದೇ ಯಾವ ವಿದ್ಯಾರ್ಥಿಯೂ ಕೂಡ್ರಬಾರದು." "ನಾನೇನು ಮಾಡಲಿ, ಬಾಯಿಯವರೇ, ನಿಮ್ಮ ಹೆಸರು ಹೇಳಿ, ಕಾರಿನಲ್ಲಿ ಬಂದು ಕುಳಿತ ಅವನು" ಎಂದು ಡ್ರೈವರ ಗೊಣಗಿದ......ಹೋಗಲಿ, ಇಂಥ ವೇಳೆಯಲ್ಲಿ ಎಂಥಾ ಮೂರ್ಖನನ್ನು ನೆನೆಸುತ್ತಿದ್ದೇನಲ್ಲ ಎಂದು ನಕ್ಕಳು.

ಕೆಲಹೊತ್ತು ಮೌನವಾಗಿದ್ದೆವು ಮತ್ತೆ ಆಶಾ ಪ್ರಾರಂಭಿಸಿದಳು. "ನಿನ್ನೆ ನಾನೊಂದು ಕನಸು ಕಂಡೆ, ಅರುಣ. ನೀವು ತುಂಬ ಕಲಿತು ಉಚ್ಚ ಪದವೀಧರರಾಗಿದ್ದಿರಿ. ಎಲ್ಲೆಲ್ಲೂ ನಿಮಗೆ ಪ್ರಶಂಸೆ, ಗೌರವ ದೊರೆಯುತ್ತಿದ್ದವು. ಹೆಚ್ಚಿನ ಅಭ್ಯಾಸಕ್ಕೆ ವಿದೇಶಕ್ಕೆ ಹೊರಟು ನಿಂತಿದ್ದಿರಿ. ನಿಮ್ಮ ಬೀಳ್ಕೊಡುವಿಕೆ ನಡೆದಿತ್ತು... ಕನಸು ಮುಂದುವರಿಯುತ್ತಿದ್ದಂತೆ ಚಹ ಸಿದ್ಧವಿದೆಯೆಂದು ಆಳು ಎಚ್ಚರಿಸಿದ" ಎಂದಳು.

* * *

ಬಾಗಿಲು ಬಡಿದುಕೊಳ್ಳಲಾರಂಭಿಸಿತು "ಮಧ್ಯಾಹ್ನ ಹನ್ನೆರಡು ಗಂಟೆಯಯಿತು. ಇನ್ನೂ ಏಳುವ ವಿಚಾರವಿಲ್ಲವೇ?" ಎಂದು ಸ್ಟುವರ್ಡನ ಧ್ವನಿ ಕೇಳಿಸಿತು. ಬಾಗಿಲು ತೆಗೆದು 'ನನಗೆ ಊಟ ಬೇಡ. ಒಂದಿಷ್ಟು ಕರಿ ಕಾಫಿ (ಹಾಲು ಸಕ್ಕರೆ ಇಲ್ಲದ್ದು) ಬಿಸ್ಕೀಟು ತಂದುಕೊಡು' ಎಂದು ಹೇಳಿದ. ಪ್ರಾತರ್ವಿಧಿಗಳನ್ನು ತೀರಿಸಿ, ಕಾಫಿ ಸೇವಿಸಿ ಸಿಗರೇಟ ಹೊತ್ತಿಸಿ ಹಡಗದ ಡೆಕ್ಕನ್ನು ಏರಿದ ಅರುಣ ಬಿಸಿಲಿಗೆ ಬೆನ್ನು ಮಾಡಿ ಕುರ್ಚಿಯೊಂದರಲ್ಲಿ ಕುಳಿತ. ಅಂದಿಗೂ ಇಂದಿಗೂ ಎಷ್ಟು ಅಂತರ, ಅಂದು ಇಡೀ ಹಡಗವನ್ನು ಸುತ್ತು ಹಾಕಿ ಹಡಗದ ಅಂಚೆ ಆಫೀಸಿಗೆ ಹೋಗಿ, ವಿಮಾನ ಪತ್ರವೊಂದನ್ನು ಪಡೆದು ಆಶಾಳಿಗೆ ಹಡಗದಿಂದ ಮೊದಲನೇ ಪತ್ರ ಬರೆದಿದ್ದೆ. ನಿರೀಕ್ಷಿಸಿದ್ದಕ್ಕಿಂತಲೂ ಮೊದಲೇ ಪತ್ರ ಬರೆದಿದ್ದರಿಂದ ಹಿಗ್ಗಿಹೋಗಿದ್ದಳವಳು. ತಾನೂ ನನ್ನೊಂದಿಗೆ ವಿದೇಶಕ್ಕೆ ಹೊರಟಿದ್ದಷ್ಟೇ ಆನಂದವಾಗಿತ್ತು, ಪತ್ರ ಕೈಗೆ ಬಂದಾಗ! ಎಂದು ಬರೆದಿರಲಿಲ್ಲವೇ ಆಕೆ ಉತ್ತರ ರೂಪವಾಗಿ? ನಂತರ ಪ್ರತಿಯೊಂದರ ಬಗ್ಗೆ ಎಷ್ಟೊಂದು ವಿವರ ಪತ್ರಗಳನ್ನು ಬರೆಯುತ್ತಿದ್ದೆ.....ಆದರೆ ಇಂದು!

* * *

ಇಬ್ಬರೂ ಕಾಫಿ ಕುಡಿಯುತ್ತಿದ್ದಂತೆ "ನಾನು ಬಹಳಷ್ಟು ವಿಚಾರಿಸಿ ಯೋಚಿಸಿದೆ. ನೀವು ನನಗೆ ಮಾಡಿದ ತಪ್ಪಾದರೂ ಏನು? ಎಂದು. ಮೊದಲನೇ ದಿನ ವಾಚನಾಲಯದಲ್ಲಿ ನಾನು ನಿಮ್ಮನ್ನು ಪ್ರಾಧ್ಯಾಪಕರೆಂದು ನಂಬಿದ್ದು ನನ್ನದೇ ತಪ್ಪು. ಇತರ ಸಹಪಾಠಿಗಳು ನನಗೆ ಮೋಸಮಾಡಿದ್ದರು. ಆದರೆ ತಪ್ಪಿಕೂಡ ನೀವು ಆ ಮಾತು ಹೇಳಲಿಲ್ಲವಲ್ಲ? ಸಹಪಾಠಿಗಳ ತುಂಟತನಕ್ಕೆ ನೀವು ಕಾರಣರೇ? ಅಂದಂತೆ ಅಂದಿನ ಪಂತಿಯಲ್ಲಿ ಸೀರೆಗೆ ಆಯ್ಸಕ್ರೀಮ್ ಒರಸಿದ್ದರೇನಾಯಿತು? ಒಮ್ಮೆ ಒಗೆದರೆ ಹೋಗಿಬಿಡುತ್ತಿತ್ತು. ಬದಲಾಗಿ ಅಷ್ಟೆಲ್ಲ ಜನರ ಎದುರಿಗೆ ಕಪಾಳಕ್ಕೆ ಬಿಗಿಯುವದು ನನ್ನ ಅಧಿಕ ಪ್ರಸಂಗಲ್ಲವೇ? ಇಷ್ಟಾದರೂ ನೀವು ಸಿಟ್ಟಾಗದೇ ನನ್ನ ಹಸ್ತಸ್ಪರ್ಶದ ಸುಖವನ್ನೆ ವಿವರಿಸಿ ಹೇಳಿ ಎಲ್ಲರನ್ನೂ ನಗಿಸಿದಿರಿ. ಈ ನಿಮ್ಮ ಸರಳಸ್ವಭಾವದಿಂದ ನನ್ನನ್ನು ಗೆದ್ದುಬಿಟ್ಟಿದ್ದೀರಿ.....ಪ್ರತಿದಿನ ನಿಮ್ಮ ಬಗ್ಗೆ ಆದರ ಹೆಚ್ಚುತ್ತ ನಡೆದಿದೆ..... ಎಂದು

ಏನೇನೋ ಹೇಳುವುದರಲ್ಲಿದ್ದಳು. ಅಷ್ಟರಲ್ಲಿ ಬಾಗಿಲು ಬಡಿದು ಒಳಗೆ ಪ್ರವೇಶಿಸಿದ ಡಾ. ಮೊರಿಸರು ಮೊದಲು ಆಶಾಳನ್ನು ನೋಡಿ, "ಹಲೋ! ಕು. ದೇಶಪಾಂಡೆ, ನೀವೂ ಅರುಣನ ಚಿಕಿತ್ಸೆ ನಡಿಸಿದ್ದೀರಾ? ಪರವಾ ಇಲ್ಲ. ನಾಳೆಯೇ ಅವನು ಗುಣಮುಖವಾದಾನು. ಅಂದಹಾಗೆ ನಿಮಗೂ ಸಹಪಾಠಿಗಳ ಬಗಗೆ ಮರುಕ ಇದೆಯೆಂಬದಾಯಿತು" ಎಂದು ಅರುಣನತ್ತ ತಿರುಗಿ, "ಮಿ. ಅರುಣ ಹೇಗಿದ್ದಿ? ನೀನಿಲ್ಲದ ಕ್ಲಾಸು ಶೂನ್ಯವೆನಿಸುತ್ತದೆ" ಎಂದರು. ಆಶಾ ತೋರಿಸಿದ ಕುರ್ಚಿಯಲ್ಲಿ ಕುಳಿತು ಐದು ನಿಮಿಷ ಲೋಕಾಭಿರಾಮವಾಗಿ ಮಾತನಾಡಿ ಬೇಗ ಗುಣಮುಖವಾಗುವಂತೆ ಹಾರೈಸಿ. ಹೊರಟು ಹೋದರು. ಅವರು ಹೋದೊಡನೆ ಆಶಾ ಎದ್ದು ಅರುಣನ ಮೈಮೇಲೆ ರಗ್ಗನ್ನು ಹೊದಿಸಿ. "ಪ್ರಾಧ್ಯಾಪಕರ ಮೇಲೂ ಎಷ್ಟೊಂದೂ ಛಾಪ ಹಾಕಿರುವಿರಲ್ಲ" ಎನ್ನುತ್ತ "ನಾನಿನ್ನು ಕ್ಲಾಸಿಗೆ ಹೊರಡಬೇಕು. ಕಾಫಿ ಕುಡಿಯಿರಿ, ಹಟಮಾಡಬಾರದು ಹಂ" ಎಂದು ತುಂಟತನದಿಂದ ನನ್ನನ್ನು ನೋಡುತ್ತ ಬಾಗಿಲು ಮುಚ್ಚಿ ಹಾಗೆಯೇ ಬಿಟ್ಟಳು.

ಅಪರಿಚಿತ ಹೆಣ್ಣೊಬ್ಬಳು "ಹೀಗೆ ನನ್ನ ಮೇಲೆ ವರ್ಚಸ್ಸು ಬೀರಬಹುದೆಂದು ನಾನು ಕನಸಿನಲ್ಲೂ ನಂಬಿರಲಿಲ್ಲ. ನನ್ನ ಬೇನೆಯಿಂದಾಗಿ ಸಂಭವಿಸಿದ ಈ ಘಟನೆಯನ್ನು ಮೆಲುಕು ಹಾಕುತ್ತ ಬಿದ್ದುಕೊಂಡಿದ್ದೆ."

* * *

ಗತಜೀವನದ ನೆನಪುಗಳು ಒಂದರ ಹಿಂದೊಂದು ಅಲೆಅಲೆಯಾಗಿ ಬಂದು ಅರುಣನನ್ನು ಮುತ್ತುತ್ತಿದ್ದವು. ಆಗಲೇ ಬಿಸಿಲು ಸಾಕಷ್ಟು ಏರಿತ್ತು. ಸೂರ್ಯನಿಗೆ ಸಾಕ್ಷಿಯಾಗಿ ಹಿಂದೆ ಆಶಾಳ ಸಾನ್ನಿಧ್ಯದಲ್ಲಿ ಪಡೆದ ಮಧುರ ಸ್ಮೃತಿಗಳೆಲ್ಲ ನೆನಪಾಗತೊಡಗಿದವು. ಅವನ್ನು ಹಿಂದಕ್ಕಟ್ಟಲೆಂಬಂತೆ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡ.

೩

"ನಾನು ಗುಣಮುಖವಾಗಿ ತಿರುಗಿ ಕ್ಲಾಸಿಗೆ ಹೋಗಲಾರಂಭಿಸಿದಾಗ ಕ್ಲಾಸಿನ ಬಣ್ಣವೇ ಬದಲಾಗಿತ್ತು. ನನ್ನ ಸ್ನೇಹಿತರಲ್ಲಿ ಅನೇಕರು-ತಮ್ಮಲ್ಲೊಬ್ಬನೆಂದು ನಂಬಿದವರು (ಕುಮಾರಿಯರನ್ನು ಕೀಟಲೆಗೊಳಿಸುವವರು) ನಾನೊಬ್ಬ ಅಪರಿಚಿತನೆಂಬಂತೆ ವರ್ತಿಸತೊಡಗಿದರು. ಅದೆಷ್ಟೊ ಚುಚ್ಚು ಮಾತುಗಳು. "ಆಶಾರಾಣಿ ಶುಶ್ರೂಷೆಗೆ

ಟೊಂಕಕಟ್ಟಿ ನಿಲ್ಲುವದಾದರೆ ರಾಯರು ಕಾಹಿಲೆ ಬೀಳದೇ ಏನು? ದೇವಾಧಿದೇವತೆಗಳಿಗೂ ಅಲಭ್ಯವಿದ್ದ ಇಂಥ ಉಪಚಾರ ಸಿಗುವುದಾದರೆ ನಾನು ಪ್ರತಿವಾರ ಕಾಹಿಲೆ ಬೀಳುತ್ತಿದ್ದೆ.....ಒಳ್ಳೆ ಟಾನಿಕ್ ದೊರಕಿದೆಯಲ್ಲ! ಅಂತೆಯೇ ಅರುಣ ದಿನ ದಿನಕ್ಕೆ ಉಬ್ಬುತ್ತಿದ್ದಾನೆ" ನಾನಾಗಿ ಮಾತನಾಡ ಹೋದರೆ "ಸಾಕಷ್ಟು ನಿನ್ನ ಪುರಾಣ. ಹೌದು! ಎಂದು ನಂಬುವ ಆಶಾದೇವಿಗೆ ಹೇಳು" ಎಂದು ಬಾಯಿ ಮುಚ್ಚಿಸಿ ಬಿಡುವರು. ಯಾವದೇ ಸೂಚನೆಯಿರಲಿ, ಕೆಲಸವಿರಲಿ ಚುನಾವಣೆಯಿರಲಿ, ಒಬ್ಬ ಅರುಣನ ಹೆಸರು ಸೂಚಿಸಿದರೆ ಇನ್ನೊಬ್ಬ ಆಶಾಳ ಹೆಸರು ಸೂಚಿಸಿಯೇ ತೀರುವ. ಕ್ಲಾಸಿನಲ್ಲಿ ಕೋಲಾಹಲವೆದ್ದು ಹುಡುಗರೆಲ್ಲ ಚಪ್ಪಾಳೆ ತಟ್ಟುವರು. ನೊಂದ ಇಬ್ಬರಿಗೂ ಕೆಳಗೆ ಹಾಕಿದ ಮುಖ ಮೇಲೆತ್ತುವಂತಿರಲಿಲ್ಲ. ಪ್ರಯೋಗ ಶಾಲೆಯ ಗೋಡೆಗಳ ಮೇಲೆ. ಮೂತ್ರಾಲಯಗಳಲ್ಲಿ ಇಬ್ಬರ ಜೋಡಿ ಹೆಸರು ಕಾಣಿಸಿಕೊಂಡವು! ಒಬ್ಬರನ್ನು ಇನ್ನೊಬ್ಬರು ಮಾತನಾಡಿಸುವದಿರಲಿ. ನೋಡುವದೂ ದುಸ್ತರವಾಯಿತು. ಇಡೀ ದಿನವೊಂದರಲ್ಲಿ ಆಗೀಗ ಕದ್ದು ಒಬ್ಬರನ್ನು ಇನ್ನೊಬ್ಬರು ನೋಡುವದಷ್ಟೆ ಬಂದಿತು. ಪ್ರಯೋಗಶಾಲೆಯಲ್ಲಿ ಇಬ್ಬರೂ ಯಾಂತ್ರಿಕವಾಗಿ ಕೆಲಸ ಮಾಡಿ ಆದಷ್ಟು ಬೇಗ ಹೋಗಿಬಿಡುವರು ಆಶಾಳಂತೂ ಬೇರಾರೊಡನೆಯೂ ಮಾತನಾಡುವದನ್ನೇ ನಿಲ್ಲಿಸಿ ಬಿಟ್ಟಳು.

ಒಂದು ದಿನ ವರ್ಗ ಮುಗಿದು ಕೆಲಹೊತ್ತು ಕಳೆದಿತ್ತು. ಪ್ರಯೋಗ ಶಾಲೆಯ ಯಂತ್ರವೊಂದನ್ನು ರಿಪೇರಿ ಮಾಡುವುದರಲ್ಲಿ ನಾನು ಮಗ್ನನಾಗಿದ್ದೆ. ಇದ್ದಕ್ಕಿದ್ದಂತೆ ಸ್ತ್ರೀ ಹಸ್ತವೊಂದು ಚೀಟಿಯೊಂದನ್ನು ಕೈಯಲ್ಲಿ ಒತ್ತಿತು. ಆಶಾ! ತಲೆಯೆತ್ತಿ ನೋಡುತ್ತಿದ್ದಂತೆ ಹೋಗಿಯೇ ಬಿಟ್ಟಳು. ಯಾರಾದರೂ ನೋಡಿರಬಹುದೇ? ಎಂದು ಅತ್ತಿತ್ತ ನೋಡಿ ಚೀಟಿಯನ್ನು ಜೇಬಿಗಿಳಿಸಿದೆ. ಉಳಿದ ಕೆಲಸವನ್ನೆಲ್ಲ ಲಗುಬಗೆಯಿಂದ ಮುಗಿಸಿ ವಾಚನಾಲಯಕ್ಕೆ ಬಂದು ಮೂಲೆಯ ಕುರ್ಚಿಯೊಂದರಲ್ಲಿ ಕುಳಿತು ಸಾವಕಾಶವಾಗಿ ಚೀಟಿಯನ್ನು ಪುಸ್ತಕವೊಂದರಲ್ಲಿ ಇರಿಸಿ ಓದಲಾರಂಭಿಸಿದ್ದೆ.

ಪ್ರಿಯ ಅರುಣ,

ನಿಮಗೆ ಎಷ್ಟೋ ವಿಷಯ ಹೇಳಬೇಕು, ಕೇಳಬೇಕು ಎಂದು ಕನವರಿಸುತ್ತಲೇ ಇದ್ದೇನೆ. ಎಲ್ಲ ವಾತಾವರಣ ಒಮ್ಮೆಲೆ ಬದಲಾಗಿ ಬಿಟ್ಟಿದೆ. ನಿಮ್ಮ ಮುಖ ಕೂಡ ಕಣ್ಣೆತ್ತಿ ನೋಡುವದು ದುಸ್ತರವಾಗಿದೆ.....ನಿಮ್ಮನ್ನು ದ್ವೇಷಿಸುತ್ತಿದ್ದ ಕಾಲವೊಂದಿತ್ತು. ಆಗ ನುಂಗುವಂತೆ ನಿಮ್ಮನ್ನು ನೋಡುತ್ತಿದ್ದೆ. ಯಾರ ಭಯವೂ ಇರಲಿಲ್ಲ. ಆದರೆ ಈಗ ಏನೂ ಮಾಡುವಂತಿಲ್ಲ. ನಮಗರಿಯದ ಎಷ್ಟೋ ಸುದ್ದಿಗಳು ಕಾಲೇಜಿನಲ್ಲಿ ಹರಡಿವೆ. ಹರಡುತ್ತಲಿವೆ. ನನ್ನ ಸಂಗಾತಿಗಳು ಕೇಳುವ ಎಷ್ಟೋ ಪ್ರಶ್ನೆಗಳಿಂದ ಅವರ

ಕೆನ್ನೆಗೆ ಬಿಗಿಯುವಷ್ಟು ಸಿಟ್ಟು ಬರುತ್ತದೆ. ಆದರೆ ಸಿಟ್ಟನ್ನು ನುಂಗಿ ನಗುತ್ತಲೇ ಹಾರಿಕೆಯ ಉತ್ತರ ಕೊಟ್ಟು ಮುಗಿಸುತ್ತೇನೆ. ಕೆಲ ವಿಷಯಗಳ ಬಗ್ಗೆ ನಿಮ್ಮ ಹತ್ತಿರ ಕೂಲಂಕಷ ಮಾತುಕತೆಯಾಡಬೇಕಾಗಿದೆ. ಈ ರವಿವಾರ ನಿಮಗೆ ಬಿಡುವಿದೆಯೇ? ನಮಗಂತೂ ಅಂದು ಪೂರ್ಣ ಬಿಡುವಿದೆ. ಮನೆಯವರೆಲ್ಲ ಲೋಣಾವಳಕ್ಕೆ ಹೋಗುವವರಿದ್ದಾರೆ. ತಿರುಗಿ ಬರುವಾಗ ಮಧ್ಯ ರಾತ್ರಿಯಾಗಬಹುದು. ಆದ್ದರಿಂದ ನಿಮಗೆ ಅನುಕೂಲವಾದರೆ ಎಲ್ಲಿಯಾದರೂ ಭೆಟ್ಟಿಯಾಗೋಣ. ಉಳಿದದ್ದು ಭೆಟ್ಟಿಯಾದ ನಂತರ.

ಇತಿ ನಮಸ್ಕಾರಗಳು<br>ಆಶಾ ದೇಶಪಾಂಡೆ

ಪತ್ರವನ್ನು ಒಂದು ಸಲ, ಎರಡು ಸಲ, ಹತ್ತು ಸಲ ಓದಿದ್ದೆ. ಎಷ್ಟು ಓದಿದರೂ ಮನದಣಿಯದು. ಕೊನೆಗೆ ಎತ್ತಿ ತುಟಿಗೆ ಒತ್ತಿಕೊಂಡೆ. ಆಗಲೇ ಆಶಾಳನ್ನು ಹುಡುಕಿ ಒಪ್ಪಿಗೆಯನ್ನು ಸೂಚಿಸಬೇಕೆನ್ನಿಸಿತು. ಆದರೆ ಇಷ್ಟೊಂದು ಉತ್ಸುಕತೆಯನ್ನು ತೋರಿಸುವದು ಸರಿಯಲ್ಲವೆಂದು ಓಡುತ್ತಿರುವ ಮನಸ್ಸಿಗೆ ಕಡಿವಾಣ ಹಾಕಿ ಹಾಸ್ಟೆಲಿಗೆ ಹೋದೆ. ಅಂದು ರಾತ್ರಿ ಅಭ್ಯಾಸ ಮಾಡಲಾಗಲಿಲ್ಲ. ಪತ್ರ, ಆಶಾ ಒಂದೇ ಸವನೆ ಕಣ್ಣೆದುರಿಗೆ ಸುಳಿದು ಹೋಗುತ್ತಿದ್ದರು. ಜಗ್ಗನೆದ್ದು ಪೆನ್ನು ತೆಗೆದುಕೊಂಡು ಆ ಪತ್ರಕ್ಕೆ ಉತ್ತರ ಬರೆಯಲು ಕುಳಿತೆ. ಹೇಗೆ ಪ್ರಾರಂಭಿಸುವದೆಂಬ ವಿಚಾರದಲ್ಲೆ ಅರ್ಧ ಗಂಟೆ ಕಳೆಯಿತು. ಕೊನೆಗೆ ಅವಳ ಪತ್ರದ ಧಾಟಿ ಹಿಡಿದೇ ಉತ್ತರ ಸಿದ್ಧವಾಯಿತು.

ಪ್ರಿಯ ಆಶಾದೇವಿ,

ನಿಮ್ಮ ಅನಿರೀಕ್ಷಿತ ಪತ್ರ ಹೆಚ್ಚಿನ ಸುಖ, ಸಮಾಧಾನಗಳನ್ನುತಂದವು. ನನಗಾಗಿ ಇಷ್ಟು ಅನುಕಂಪವಿದೆಯೆಂದು ತಿಳಿದು ಹೃದಯ ಹಿಗ್ಗಿನಿಂದ ಕುಣಿಯಿತು. ನಿಮ್ಮ ಭೆಟ್ಟಿಯನ್ನು ಚಾತಕಪಕ್ಷಿಯಂತೆ ಎದುರು ನೋಡುತ್ತಿದ್ದೇನೆ. ನಾಳೆಯೇ ರವಿವಾರ ಇರಬಾರದಿತ್ತೆ! ಎಂದುಕೊಂಡೆ. ಇಂದು ಮಂಗಳವಾರ, ಇನ್ನು ನಾಲ್ಕು ದಿನಗಳಿವೆ ದಿನಗಳೆದಂತೆ ಕೆಂಪು ಪೆನ್ನಿನಿಂದ ಅದನ್ನು ಕೆಲೆಂಡರ ಮೇಲಿಂದ ಗೀಚುತ್ತೇನೆ ನಿಮ್ಮನ್ನು ಭೆಟ್ಟಿಯಾಗಬೇಕೆಂದು ನನಗೂ ಹಲವು ದಿನಗಳಿಂದ ಹಂಬಲವಿದೆ. ಆಗಲಿ, ಅಂದು ಸರಿಯಾಗಿ ಹನ್ನೆರಡು ಗಂಟೆಗೆ ಭಾರತ ಪ್ರೆಸ್ಸಿನ ಎದುರಿಗೆ ಬಸ್‌ಸ್ಟಾಪಿನ ಹತ್ತಿರ ಕ್ಯೂದಲ್ಲಿ ನಿಂತಿರುತ್ತೇನೆ. ಅಲ್ಲಿ ಬಂದು ಬಿಡುವದು.

ಉಳಿದದ್ದು ಪ್ರತ್ಯಕ್ಷ ಭೆಟ್ಟಿಯಾದಾಗ.

ಇಂತೀ ತಮ್ಮ<br>ಎಸ್. ಅರುಣ

ಮರುದಿನ ಕ್ಲಾಸು ಕೂಡಿದಾಗ ಆಶಾ, ನನ್ನ ಮುಖದಲ್ಲಿ ಏನನ್ನೊ ಗೊತ್ತು ಹಚ್ಚಲು ಪ್ರಯತ್ನಿಸುತ್ತಾಳೆಂದು ತಿಳಿಯಿತು. ಕಣ್ಣು ಸನ್ನೆಯಿಂದ ಸೂಚಿಸಲು ನೋಡಿದಾಗ ಅಷ್ಟೇ ನನ್ನನ್ನೇ ನೋಡುತ್ತದ್ದುದು ಲಕ್ಷ್ಯಕ್ಕೆ ಬಂದಿತು. ಕೂಡಲೇ ಕಣ್ಣಲ್ಲಿ ಕಸಬಿದ್ದಂತೆ ನಟಿಸಬೇಕಾಯಿತು. ಆಶಾಳಿಗೆ ಎಷ್ಟರ ಮಟ್ಟಿಗೆ ಅರ್ಥವಾಯಿತೋ! ನಂತರ ಪ್ರಯೋಗಶಾಲೆಯಲ್ಲಿ ಆಶಾ ತನ್ನ ವೆನಿಟಿ ಬ್ಯಾಗನ್ನು ಟೇಬಲ್ಲನ ಮೇಲೆ ಇಟ್ಟಿದ್ದಳು. ಪ್ರಯೋಗ ನಡೆಯುತ್ತಿದ್ದಂತೆ ಹಿಂದಿನ ರಾತಿ ಬರೆದ ಪತ್ರವನ್ನು ಅದರಲ್ಲಿ ಸೇರಿಸಿದೆ. ಆಶಾ ಅದನ್ನೇ ನಿರೀಕ್ಷಿಸುತ್ತಿದ್ದಳೇನೋ! ಎರಡೇ ನಿಮಿಷಗಳಲ್ಲಿ ಬ್ಯಾಗನ್ನು ಎತ್ತಿಕೊಂಡು ಹೊರಗೆ ಹೋದಳು. ಬಹುಶಃ ವೇಟಿಂಗ ರೂಮಿನಲ್ಲಿ ಕುಳಿತು ಆ ಪತ್ರ ಓದಿರಬೇಕು. ಕೆಲಹೊತ್ತಿನ ಮೇಲೆ ನಗುಮುಖದಿಂದ ತಿರುಗಿಬಂದು ತಲೆಯಲ್ಲಾಡಿಸಿ ಸಮ್ಮತಿ ಸೂಚಿಸಿದಳು.

ರವಿವಾರಗಳಲ್ಲಿ ಹಾಸ್ಟೆಲ್ ವಿದ್ಯಾರ್ಥಿಗಳು ಬೆಳಿಗ್ಗೆ ೯-೧೦ ಗಂಟೆಯ ತನಕ ಮಲಗುವ ಪರಿಪಾಠ ಇಟ್ಟುಕೊಂಡಿರುತ್ತಾರೆ. ನಂತರ ಚಹವೋ, ಕಾಫಿಯೋ ಕುಡಿದು ಆ ಖೋಲಿಗೆ, ಈ ಖೋಲಿಗೆ ಭೆಟ್ಟಿ ಕೊಡುತ್ತ ಅವರನ್ನು ಕಾಡುತ್ತ, ಇವರನ್ನು ಕೀಟಲೆ ಮಾಡುತ್ತ ಊಟದ ತನಕ ಅಂತೂ ವೇಳೆಗಳೆದು ಊಟಮಾಡಿ ಸಿನಿಮಾಕ್ಕೆ ಹೋಗುವದು ವಾಡಿಕೆ. ಒಮ್ಮೆ ಈ ಸಹಪಾಠಿಗಳು ಮುಕುರಿ ಬಿದ್ದರೆ ಜಾರುವದು ಕಷ್ಟವೆಂದು ತಿಳಿದು ಬೆಳಿಗ್ಗೆಯೇ ಹಾಸ್ಟೇಲಿನಿಂದ ಜಾರಿಕೊಂಡು ವಿಶ್ವವಿದ್ಯಾಲಯದ ವಾಚನಾಲಯವನ್ನು ಸೇರಿಕೊಂಡೆ. ಓದುವ ಮನಸ್ಥಿತಿಯೂ ಇರಲಿಲ್ಲ. ಕೆಲವು ಮ್ಯಾಗಝಿನ್ ತೆಗೆದುಕೊಂಡು ಹಾಳೆ ತಿರುವುತ್ತ ಕುಳಿತೆ. ಕಣ್ಣು ಚಿತ್ರಗಳನ್ನು ನೋಡುತ್ತಿತ್ತು. ಮನಸ್ಸೆಲ್ಲ ಆಶಾನತ್ತ ಹೊರಳಿತ್ತು. ಆಶಾ ಈಗ ಏನು ಮಾಡುತ್ತಿರಬಹುದು. ಬಹುಶಃ ಕಾಫಿ-ತಿಂಡಿ ಮುಗಿಸಿರಬಹುದು. ನಮ್ಮ ಭೆಟ್ಟಿಯನ್ನೇ ಎದುರು ನೋಡುತ್ತಿರಬಹುದೇ? ಅರೇ! ಇದರ ಬಗ್ಗೆ ನಾವು ವಿಚಾರ ಮಾಡಲೇ ಇಲ್ಲವಲ್ಲ! ನನಗೆ ಹೇಗೆ ತಿಳಿಯಬೇಕು? ಏನೇ ಇರಲಿ, ನಿರ್ದಿಷ್ಟ ವೇಳೆಗೆ ನಾನು ಹೋದರಾಯಿತು. ಬಾಕಿ ಎಲ್ಲ ಆಕೆ ನೋಡಿಕೊಳ್ಳುತ್ತಾಳೆ, ಎಂದು ಯೋಚಿಸುತ್ತಲಿದ್ದೆ. ವೇಳೆಯೇ ಹೋಗದು. ಸಮೀಪದ ಹೋಟಲಿಗೆ ಹೋಗಿ ಬೋಂಡಾ, ಚಹ ತೆಗೆದುಕೊಂಡೆ. ಇನ್ನೂ ಸಾಕಷ್ಟು ವೇಳೆಯಿತ್ತು ಎಳೆ ಬಿಸಿಲು ಹಿತವಾಗಿತ್ತು. ವೇಳೆ ಕಳೆಯಲು ನಿರ್ದಿಷ್ಟ ಪಡಿಸಿದ ಸ್ಥಳಕ್ಕೆ ನಡೆದೇ ಏಕೆ ಹೋಗಬಾರದು ಎಂದು ವಿಚಾರ ಬಂದಿತು. ಹೊರಟೇಬಿಟ್ಟೆ. ಸ್ಥಳ ಮುಟ್ಟಿದಾಗ ಹನ್ನೊಂದುವರೆಯಾಗಿತ್ತು. ಆದರೆ ಆಶ್ಚರ್ಯ! ಅದಾಗಲೇ ಆಶಾ ಬಂದಿದ್ದಳು. ಆಶ್ಚರ್ಯದ ಧ್ವನಿಯಲ್ಲಿ ಕೇಳಿದ್ದೆ: "ಇದೇನ್ರಿ ಆಶಾ, ನಿಮ್ಮ ಗಡಿಯಾರ ಬಹಳ ಫಾಸ್ಟ್ ಇದೆಯೆಂದು ತೋರುತ್ತದೆ. ನಾನು ಅರ್ಧ ತಾಸು ಮುಂಚಿತವಾಗಿ ಬದರೆ ನೀವು ನನಗಿಂತಲೂ ಮೊದಲು ಬಂದು ಬಿಟ್ಟಿದ್ದಿರಲ್ಲ!"

"ಸ್ವಲ್ಪ ಮೆಲ್ಲಗೆ ಮಾತನಾಡಿ ಈ ದಿವಸಗಳಲ್ಲಿ ಕಂಬಗಳಿಗೂ ಕಣ್ಣು ಕಿವಿಗಳಿರುವವೆಂಬುದು ನಿಮಗೆ ತಿಳಿಯದೇ? ನನ್ನ ಗಡಿಯಾರ ಸರಿಯಾಗಿಯೇ ಇದೆ. ಏನೋ ಮೊದಲೇ ಬಂದ ನಿಮ್ಮನ್ನು ಭೆಟ್ಟಿಯಾಗುವ ಗದ್ದಲದಲ್ಲಿ ಇಲ್ಲಿ ಬಂದು ಹದಿನೈದು ನಿಮಿಷಗಳಾಗಿ ಹೋದವು. ಕ್ಯೂನಲ್ಲಿ ನಿಂತೆ. ಪ್ರತಿಸಲ ನನ್ನ ಪಾಳಿ ಬಂದಾಗ ಹಿಂದೆ ಬಂದು ನಿಲ್ಲುತ್ತಿದ್ದೆ. ಬಸ್ ಹತ್ತುವವರಿಗೆ ಇದಾವ ತಮಾಷೆಯೆಂದು ಅರ್ಥವಾಗಿರಲಿಕ್ಕಿಲ್ಲ ಬಹುಶಃ ಹುಚ್ಚಿಯೆಂದು ತಿಳಿದಿರಲು ಸಾಕು" ಎಂದಳು.

"ಹಾಗಾದರೆ ಬನ್ನಿ. ಟ್ಯಾಕ್ಸಿಯಲ್ಲಿ ಹೋಗೋಣ."

"ಎಲ್ಲಿಗೆ?"

"ಎಲ್ಲಿಯಾದರೂ ಸ್ವಲ್ಪ ಏಕಾಂತವಿರುವ ಸ್ಥಳಕ್ಕೆ"

"ಅಂದರೆ? ಡ್ರೈವರನಿಗೂ ಎಲ್ಲಿ ಹೋಗುವುದೆಂದು ಹೇಳುವುದು ಬೇಡವೇ?"

"ವಿಹಾರಲೇಕಕ್ಕೆ ಹೋಗೋಣವೇ?"

ಸರಿಯೆಂದು ಒಪ್ಪಿದಳು ಆಶಾ. ಹೋಗುತ್ತಿದ್ದ ಟ್ಯಾಕ್ಸಿಯೊಂದನ್ನು ನಿಲ್ಲಿಸಿ ಇಬ್ಬರೂ ಏರಿದೆವು. ವಿಹಾರಲೋಕಕ್ಕೆ ಟ್ಯಾಕ್ಸಿ ಹೊರಟಿತು. ಆಶಾಳೇ ಮೊದಲು ಮಾತಿಗೆ ಪ್ರಾರಂಭಿಸಿದಳು. "ನೀವು ಪತ್ರದಲ್ಲಿಯೇ ಆಗಲಿ, ಪ್ರತ್ಯಕ್ಷವಾಗಿಯೇ ಆಗಲಿ ನೀವು ಎಂದು ಸಂಬೋಧಿಸುವದು ನನಗೆ ಇಷ್ಟೂ ಒಪ್ಪಿಗೆಯಿಲ್ಲ ಇನ್ನು ಮುಂದೆ ಏಕವಚನದಲ್ಲೇ ಮಾತನಾಡಿಸುವದು. ಒಪ್ಪಿಗೆಯೇ" ಎಂದಳು. 'ಓಹೋ! ಅದರಲ್ಲೇನು ಮಹಾ ಎಂದಾಗ ಕೈಗೆ ಚೂಟೊಂದು ದೊರೆಯಿತು. ಇಬ್ಬರೂ ಅಕ್ಕಪಕ್ಕದಲ್ಲಿ ಕುಳಿತು ಯಾವುದೊ ಸ್ವಪ್ನಲೋಕದಲ್ಲಿ ವಿಹರಿಸುವಂತಿತ್ತು.'

ಮಾತಿನ ಭರದಲ್ಲಿ ವಿಹಾರಲೋಕ ಬಂದದ್ದು ಇಬ್ಬರಿಗೂ ಅರಿವಾಗಲಿಲ್ಲ. ಟ್ಯಾಕ್ಸಿ ನಿಲ್ಲುತ್ತಲೇ ಮುಂಬೈ ಬಿಟ್ಟು ಬೇರೊಂದು ಜಗತ್ತಿಗೆ ಬಂದಂತೆ ಭಾಸವಾಯಿತು. ಪ್ರಶಾಂತ ವಾತಾವರಣದಲ್ಲಿ ಹರಡಿ ನಿಂತಿದೆ ಮಾನವ ನಿರ್ಮಿತ ಸರೋವರ. ಮುಂಬೈ ಮಹಾನಗರದ ನೀರಡಿಕೆಯನ್ನು ಹೋಗಲಾಡಿಸಲು ದೊಡ್ಡ ದೊಡ್ಡ ಪೈಪುಗಳ ಮೂಲಕ ನೀರನ್ನು ಒಯ್ಯಲಾಗಿದೆ. ಟ್ಯಾಕ್ಸಿಯವನ ಕೈಗೆ ರೊಕ್ಕ ಹಾಕಿ ಎತ್ತರದಿಂದ ತಗ್ಗಿನಲ್ಲಿ ಇಳಿಯುವ ಕಾಲು ದಾರಿಯಿಂದ ಇಬ್ಬರೂ ಇಳಿದೆವು. ಅಲ್ಲೊಂದು ಜುಳುಜುಳು ಹರಿಯುವ ತಿಳಿನೀರಿನ ಕಾಲುವೆ. ಅದನ್ನು ದಾಟಲು ಸಂಕವೊಂದು. ಅದರ ಪಕ್ಕದಲ್ಲಿಯೇ ಇಬ್ಬರೂ ಕುಳಿತೆವು. ಕೆಲಹೊತ್ತು ಇಬ್ಬರೂ ಮೌನವಾಗಿದ್ದೆವು ತಲೆಯೆತ್ತಿ ಆಶಾಳತ್ತ ನೋಡಿದಾಗ ಆಕೆ ಸುತ್ತಲೂ ಪ್ರಕೃತಿ ದೃಶ್ಯ ನೋಡುತ್ತ ತಲ್ಲೀನಳಾದಂತೆ ಕುಳಿತಿದ್ದಳು. ಕೊನೆಗೂ ಅವಳೇ ಮೌನವನ್ನು ಮುರಿದಳು.

"ಇಲ್ಲಿ ಎಷ್ಟೊಂದು ಸೊಗಸಾಗಿದೆಯಲ್ಲವೇ?"

"ಮುಂಬೈ ಸಮೀಪದಲ್ಲಿಯೇ ಇಷ್ಟು ರಮ್ಯ ಸ್ಥಳವಿದೆಯೆಂಬುದು ಕಲ್ಪನೆಗೆ ಮೀರಿದ ಮಾತು."

"ನಮ್ಮ ಮನೆಯವರು ಲೋಣಾವಳಕ್ಕೆ ಹೋಗಿಯೂ ಇಷ್ಟೊಂದು ಆನಂದ ಪಡುತ್ತಾರೋ ಇಲ್ಲವೋ?"

"ಮನೆಯವರು! ಅಂದರೆ ನಿಮ್ಮ ಮದುವೆಯಾಗಿದೆಯೆ?"

"ಹೋಗ್ರಿ-ಏನು ಚೇಷ್ಟೆ! ಮನೆಯವರೆಂದರೆ ತಂದೆ-ತಾಯಿ-ತಂಗಿ ತಮ್ಮ ಮುಂತಾದವರು."

"ಅಂದ ಹಾಗೆ ಅವರ ಬಗ್ಗೆ ಏನೂ ಹೇಳದೇ ನನಗೆ ಹೇಗೆ ಗೊತ್ತಾಗಬೇಕು?"

"ನೀವು ಒಮ್ಮೆಯಾದರೂ ಕೇಳಿದ್ದಿರೇನು?"

"ಈಗಲಾದರೂ ಹೇಳಬಹುದಲ್ಲ?"

"ನೋಡ್ರಿ ನಮ್ಮದೊಂದು ಪುಟ್ಟ ಸಂಸಾರ ನಮ್ಮ ತಂದೆಯವರು ಬಹಳ ಕಷ್ಟಪಟ್ಟು ಓದಿ ಮುಂದೆ ಬಂದವರು. ಕೋರ್ಟಿನ ಕಾರಕೂನರೆಂದು ನೌಕರಿ ಪ್ರಾರಂಭಿಸಿದರು. ಈಗ ಹಾಯಕೋರ್ಟಿನಲ್ಲಿ ನ್ಯಾಯಾಧೀಶರು. ಇಷ್ಟಾದರೂ ಒಂದಿಷ್ಟು ಗರ್ವವಿಲ್ಲ. ಅವರನ್ನು ಮೆಚ್ಚಬೇಕಾದರೆ ನೀವೇ ಭೆಟ್ಟಿಯಾಗಬೇಕು."

"ಹಾಗಾದರೆ ಒಮ್ಮೆ ನನ್ನ ಪರಿಚಯ ನಿನ್ನ ಪಿತಾಜಿಗೂ ಮಾಡಿಕೊಡುತ್ತಿ ಅನ್ನು."

"ಶ್ ಶ್! ತಪ್ಪಿ ಕೂಡಾ ಮಾಡಿಸುವುದಿಲ್ಲ....ಅವರು ಸಂಪ್ರದಾಯವಂತರು. ಧರ್ಮ, ಕರ್ಮ, ಜಾತಿ-ನೀತಿ ಎಲ್ಲ ಪಾಲಿಸುತ್ತಾರೆ. ಮನೆಯ ಜನರೆಲ್ಲ ತಮ್ಮ ನಡಾವಳಿಯಂತೇ ಇದ್ದು ಮನೆಯೊಳಗೇ ಇರಬೇಕು ಅನ್ನುತ್ತಾರೆ."

"ಹಾಗಾದರೆ ಹೀಗೆಲ್ಲ ಅಲೆಯಲು ನಿನ್ನನ್ನು ಹೇಗೆ ಬಿಡುತ್ತಾರೆ?"

"ನಿಮ್ಮ ಪ್ರಶ್ನೆಯ ಕುದುರೆಗೆ ಸ್ವಲ್ಪ ಲಾಗ ಹಾಕಿರಲ್ಲ? ಅದನ್ನೇ ಹೇಳುತ್ತೇನೆ. ನಮ್ಮ ತಾಯಿಯವರೂ ಸಂಪ್ರದಾಯವಂತರು. ಬಹಳ ವರ್ಷಗಳವರೆಗೆ ನಮ್ಮ ತಂದೆಗೆ ಸಂತಾನವಾಗಲಿಲ್ಲ. ನಂತರ ಅದೆಷ್ಟೋ ದೇವರಿಗೆ ಹರಕೆ ಕಾಣಿಕೆಗಲು ಸಂದಾಯವಾದ ಮೇಲೆ ನಾವು ಮೂವರು ಹುಟ್ಟಿದೆವು. ಎಲ್ಲರಿಗಿಂತ ಹಿರಿಯಳು ನಮ್ಮಕ್ಕ ಸುನಂದಾ. ಮೆಟ್ರಿಕ್ ಪಾಸು ಮಾಡಿದ್ದಾಳೆ. ಹದಿನಾರನೇ ವಯಸ್ಸಿಗೇ ಅವಳ ಮದುವೆಯಾಗಿದೆ. ನನ್ನ ಭಾವ ಡಾ. ಶಶಾಂಕ ನಾಡಕರ್ಣಿ-ಟೆಕನಾಲಜಿಯಲ್ಲಿ ಪಿ.ಎಚ್.ಡಿ. ಮಾಡಿ

ಕಲ್ಯಾಣದಲ್ಲಿ ದೊಡ್ಡ ನೌಕರಿಯಲ್ಲಿದ್ದಾರೆ.....ಆ ಮೇಲಿನವನು ಅಣ್ಣ. ಕೊನೆಯವಳು ನಾನು. ನಮ್ಮನ್ನೆಲ್ಲ ಬಹಳ ಮುದ್ದಿನಿಂದ ಬೆಳೆಸಿದ್ದಾರೆ. ನನ್ನನ್ನಂತೂ ಇನ್ನೂ ಸಣ್ಣ ಮಗುವೆಂದೇ ಭಾವಿಸಿದ್ದಾರೆ. ಸಣ್ಣ ಮಗುವಿಗೆ ಬೇಕಾದಲ್ಲಿ ಹೋಗಿಬರಲು ಸ್ವಾತಂತ್ರ್ಯವಿದೆಯಲ್ಲವೇ?"

"ನಿಮ್ಮಣ್ಣ ಏನು ಮಾಡುತ್ತಾರೆ?"

"ಮೊದಲೇ ಹೇಳಲಿಲ್ಲವ? ನಮ್ಮದೊಂದು ಸುಖಸಂಸಾರವೆಂದು. ಆದರೆ ಅಣ್ಣ ಮಾತ್ರ ಒಂದು ತರಹ. ೩ ಬಾರಿ ಮೆಟ್ರಿಕ್ಕಿಗೆ ಕೂಡ್ರಬೇಕಾಯಿತು. ಕಾಲೇಜಿನ ಶಿಕ್ಷಣ ತಲೆಗೆ ಹತ್ತುವದಿಲ್ಲವೆಂದು ತಾನೇ ಬಿಟ್ಟು ಬಿಟ್ಟ. ತಂದೆಯವರು ಪ್ರಯತ್ನದಿಂದ ತೆಗೆಸಿಕೊಟ್ಟ ನೌಕರಿಗೆ ರಾಜೀನಾಮೆ ಕೊಟ್ಟ. ಭಾವನವರು ತಮ್ಮ ಕಂಪನಿಯಲ್ಲಿ ಮೇಲ್ವಿಚಾರಕನ ಕೆಲಸ ಕೊಡಿಸಿದರು. ಕೆಲವೇ ತಿಂಗಳಿನಲ್ಲಿ ತಿರುಗಿ ಬಂದ. ನಮ್ಮೆಲ್ಲರಿಗಿಂತ ಅವನ ವರ್ತನೆ ಬಹಳೇ ಭಿನ್ನವಾಗಿದೆ. ಮನಸ್ಸಿಗೆ ಬಂದಾಗ ಮನೆಗೆ ಊಟಕ್ಕೆ ಬರುವದು. ಅಕಾಲಕ್ಕೆ ಮನೆ ಸೇರುವದು. ಸಿನಿಮಾ, ಚಹ-ಸಿಗರೇಟುಗಳ ಚಟವೂ ಇದೆ. ತಂದೆ ಎಂತಹ ಮನೆತನದಲ್ಲಿ ಇಂತಹ ಮಗ ಹುಟ್ಟಿದನಲ್ಲ ಎಂದು ಕೊರಗುತ್ತಾರೆ. ಕೆಲವೊಮ್ಮೆ ತಮ್ಮ ಹೆಣ್ಣು ಮಕ್ಕಳು ತಂದೆಯಂತೆ ಮಗ ತಾಯಿಯಂತೆ ಆಗಿದ್ದಾನೆಂದು ತಾಯಿಗೆ ಹಾಸ್ಯಮಾಡುತ್ತಾರೆ."

"ಬಹುಶಃ ಅವನಿಗೊಂದು ಮದುವೆ ಮಾಡಿದರೆ ಸರಿಹೋಗಬಹುದೆಂದು ತೋರುತ್ತದೆ."

"ಅವನಿಗೆ ಮದುವೆಯಾಗಬೇಕೆಂದರೆ ಹುಡಿಗಿಯರಿಗೆ ಕಡಿಮೆಯಿಲ್ಲ. ಆದರೆ ಆತನ ಕಲ್ಪನೆಯ ಪತ್ನಿ ಸಿನಿಮಾ ತಾರೆಯಾಗಬೇಕು! ಎಲ್ಲಿಂದ ಬರಬೇಕು ಸಿನಿಮಾ ತಾರೆ? ಹೀಗಾಗಿ ಮದುವೆ ಮಾಡದೇ ಮಗ ಸರಿಯಾಗಲಾರ, ಎಂದು ಗೊತ್ತಿದ್ದೂ ಇದಕ್ಕೆ ಉಪಾಯ ತೋಚದಾಗಿದೆ ತಂದೆಯವರಿಗೆ."

"ವಾಹ! ಇದೂ ಸಮಸ್ಯೆಯೇ? ಮದುಮಗಳಿಗೆ ಸಿನಿಮಾ ತಾರೆಯಂತೆ ಅಲಂಕರಿಸಿ ಅವನಿಗೆ ತೋರಿಸಿದರಾಯಿತು. ಅವನ ಮನಃಪರಿವರ್ತನೆ ಯಾದೀತು!"

"ನಿಮಗೂ ಬಹಳ ವಿಚಾರಗಳು ಬರತ್ತವೆಂದಾಯಿತು" ಎಂದು ಆಶಾ ಮುಗುಳ್ನಗೆ ನಕ್ಕಳು.

"ಇನ್ನೊಂದು ಮಾತು. ಬಹಳ ದಿನಗಳಿಂದ ನಿಮ್ಮನ್ನು ಕೇಳಬೇಕೆಂದಿದ್ದೆ. ದೇಶಪಾಂಡೆ ಎಂದರೆ ನಿಮ್ಮ ತಂದೆಯವರು ಯಾವ ಕಡೆಯವರು?"

“ನಮ್ಮ ಪೂರ್ವಜರು ಕಾರವಾರದ ಹತ್ತಿರದ ಮಾಜಾಳಿಯವರಂತೆ. ನಮ್ಮಜ್ಜ ಸ್ಕೂಲ ಮಾಸ್ತರರು. ಬಡತನದಲ್ಲೆ ನಮ್ಮ ತಂದೆಯವರಿಗೆ ಶಿಕ್ಷಣ ಕೊಡಿಸಿದರು. ಮೆಟ್ರಿಕ್ಕಿನಲ್ಲಿ ಉಚ್ಚ ಶ್ರೇಣಿ ಪಡೆದ ತಂದೆಯವರು ಒಂದು ವರ್ಷ ಕೋರ್ಟಿನ ಕಾರಕೂನರೆಂದು ಕೆಲಸ ಮಾಡಿ ಕಾಲೇಜಿಗೂ ಹೋದರು. ಇಂಟರದಲ್ಲಿ ಇದ್ದಾಗ ಕಾರವಾರದ ಪ್ರಸಿದ್ಧ ವಕೀಲರ ಮಗಳನ್ನು ಸೊಸೆಯಾಗಿ ತಂದರು ನಮ್ಮಜ್ಜ. ನಂತರ ತಂದೆಯವರ ಜೀವನವೇ ಮಾರ್ಪಾಟಾಯಿತು. ಬಿ.ಎ. ಎಲ್‌ಎಲ್. ಬಿ. ಮುಗಿಸಿ ಕೆಲ ವರ್ಷ ವಕಾಲತ್ತು ಮಾಡಿ, ಸಬ್‌ಜಜ್ಜರಾಗಿ ಧಾರವಾಡ, ಕಾರವಾರ, ಬೆಳಗಾಂವ, ವಿಜಾಪುರಗಳಲ್ಲೆಲ್ಲ ಕೆಲಸ ಮಾಡಿದ್ದಾರೆ. ಬೆಳಗಾಂವದಲ್ಲಿ ಅನೇಕ ವರ್ಷವಿದ್ದರು. ಅಲ್ಲಿಯೇ ನಮ್ಮ ಬಾಲ್ಯ ಕಳೆಯಿತು. ಹೀಗಾಗಿ ಪ್ರಾಥಮಿಕ ಶಿಕ್ಷಣ ಕನ್ನಡದಲ್ಲಿ ಆಯಿತು. ನಮ್ಮ ಮಾತೃಭಾಷೆ ಕೊಂಕಣಿಯಾಗಿದ್ದರೂ ಮೊದಲಿನಿಂದ ಮರಾಠಿಯ ರೂಢಿಯೇ ಹೆಚ್ಚು. ಮನೆ ಮಾತು ಕೊಂಕಣಿ ಮಾತನಾಡಿದರೆ ಅರ್ಥವಾಗುವಷ್ಟು ಬರುತ್ತದೆ. ಮಾತನಾಡಲು ಬರುವದಿಲ್ಲ. ತಂದೆ ತಾಯಿಗಳಿಗೆ ಒಳ್ಳೆಯ ಕೊಂಕಣಿ ಮತ್ತು ಕನ್ನಡ ಬರುತ್ತದೆ.”

“ಕಾರವಾರದಲ್ಲಿ ನಿಮ್ಮ ಮನೆ ಇದೆಯೇ? ನಿಮ್ಮ ಕುಟುಂಬದವರು ಯಾರಾದರೂ ಅಲ್ಲಿದ್ದಾರೆಯೇ?”

“ಧಾರವಾಡ ಕಾರವಾರಗಳು ನನ್ನ ಮಟ್ಟಿಗೆ ಹೆಸರುಗಳು ಮಾತ್ರ. ಎಷ್ಟೋ ದಿನಗಳಿಂದ ನಮ್ಮ ಮೂಲ ಊರಿಗೆ ಹೋಗಬೇಕೆಂದಿರುವೆ. ಆದರೆ ಇನ್ನೂ ಸಾಧ್ಯವಾಗಿಲ್ಲ.”

“ಈ ಊರುಗಳೆಲ್ಲ ನೋಡಬೇಕೆಂದಿದ್ದರೆ ದೀಪಾವಳಿ ರಜೆಯಲ್ಲಿ ನನ್ನೊಟ್ಟಿಗೆ ಹೊರಡು. ನನ್ನ ಊರು, ಅಂಕೋಲೆಯಾದರೂ ಈ ಎಲ್ಲ ಊರುಗಳ ಪರಿಚಯ ನನಗೆ ಚೆನ್ನಾಗಿದೆ. ನಿನಗೆಲ್ಲ ಸುತ್ತಾಡಿಸಿಕೊಂಡು ಬರುವೆ. ಹೊರಡುವಿಯಾ?”

“ನಿಜವಾಗಿ ಕರೆದೊಯ್ಯುವಿರಾ? ನಾನೆಷ್ಟು ಭಾಗ್ಯಶಾಲಿ.....” ಎಂದು ಅದೇನೋ ಯೋಚಿಸುತ್ತ, “ಸಾಧ್ಯವಿಲ್ಲ. ತಂದೆಯವರು ಕೊಂದೇಬಿಟ್ಟಾರು!” ಎಂದು ಸುಮ್ಮನಾದಳು.

ಮತ್ತೆ ಇಬ್ಬರೂ ಮೌನವಾದೆವು. “ಹಸಿವಾಗಲಿಲ್ಲವೇ? ಏನಾದರೂ ತಿಂದು ಬರೋಣ! ಎಂದು ನಾನೇ ಎದ್ದು ನಿಂತೆ. ಆಶಾಳೂ ಎದ್ದು ನಿಂತಳು. ಏರನ್ನು ಏರುತ್ತ ಹೋದಂತೆ ಜನರ ಗದ್ದಲ ತಿರುಗಿ ಪ್ರಾರಂಭವಾಯಿತು. ತಗ್ಗಿನಿಂದ ಮೇಲೆ ಬಂದಾಗ ಜನಜಾತ್ರೆಯೇ ನೆರೆದಿತ್ತು. ಕಾರುಗಳು, ಟ್ಯಾಕ್ಸಿಗಳು, ಮೋಟಾರುಗಳು ಜನರನ್ನು ತುಂಬಿ ತುಂಬಿ ತರುತ್ತಿದ್ದವು. ಬರುವವರ ಅಚ್ಚುಕಟ್ಟುತನ, ಬಟ್ಟೆ ಬರೆ, ಮಾತಿನ

ಠೀವಿ ನೋಡಿದರೆ ಇವರೆಲ್ಲ ಆಢ್ಯ ಕುಟುಂಬಗಳಿಗೆ ಸೇರಿದವರೆಂದು ಸ್ಪಷ್ಟವಾಗುತ್ತಿತ್ತು. ಮುಂಬಯಿಯ ಚಿಕ್ಕ ಮನೆಗಳಲ್ಲಿ ಪಡೆಯಲಾಗದ ಏಕಾಂತವನ್ನು ಇಲ್ಲಿ ಪಡೆಯಲು ಅನೇಕ ನವದಂಪತಿಗಳು, ಪ್ರೇಮಿಗಳು ಬಂದಂತಿತ್ತು. ಮುಂದುವರಿದ ಕಾಲೇಜ ವಿದ್ಯಾರ್ಥಿ-ವಿದ್ಯಾರ್ಥಿನಿಯರು ರವಿವಾರವನ್ನು ಹಾಯಾಗಿ ಕಳೆಯಲು ಬಂದದ್ದರಿಂದ ಹಾಡು, ಹರಟೆ, ಕುಣಿತ ಚೀರಾಟ-ನಗೆಗಳು ಜೋರಾಗಿ ನಡೆದಿದ್ದವು. ಎಲ್ಲರೂ ತಂತಮ್ಮ ರಾಜ್ಯದಲ್ಲಿಯೇ ಮುಳುಗಿದ್ದರಾದ್ದರಿಂದ ಪಕ್ಕದವರು ಏನು ನಡೆಸಿದ್ದಾರೆಂಬ ಗೋಜಿಗೆ ಯಾರೂ ಹೋದಂತಿರಲಿಲ್ಲ."

ಕ್ಯಾಂಟೀನ ಒಂದರಲ್ಲಿ ಹೊಕ್ಕು ಎರಡು ಖುರ್ಚಿಗಳನ್ನೆಳೆದು ಎದುರು ಬದುರು ಕುಳಿತದ್ದಾಯಿತು. ಮಾಣಿ ಬಂದ, ಅವನಿಗೆ ದೋಸೆಯ ಆರ್ಡರ ಕೊಟ್ಟು ಮತ್ತೆ ಮಾತಿಗೆ ಪ್ರಾರಂಭವಾಯಿತು.

"ಅರುಣ, ಬಿ.ಎಸ್.ಸಿ. ಮುಗಸಿದ ನಂತರ ಮುಂದೇನು ಮಾಡಬೇಕೆಂದಿರುವಿರಿ?"

"ಅಷ್ಟು ದೂರದವರೆಗೆ ವಿಚಾರ ಮಾಡುವಷ್ಟು ಶಕ್ತಿ ನನ್ನಲ್ಲಿ ಇಲ್ಲ. ಪಾರ್ಟ ಟೈಂ (Part-time) ನೌಕರಿ, ಟ್ಯೂಶನ್ಸ್ ಮಾಡುತ್ತ ಇಷ್ಟು ದಿನ ತಳ್ಳಿದ್ದಾಯಿತು..... ಮುಂದೇನು ಮಾಡಬೇಕೆನ್ನುವದು ಬಿ.ಎಸ್.ಸಿ.ಯ ಫಲಿತಾಂಶವನ್ನು ಅವಲಂಬಿಸಿದೆ. ನಾನು ಬಡಕುಟುಂಬಕ್ಕೆ ಸೇರಿದವ. ಆದರೆ ಬುದ್ಧಿ ಶಕ್ತಿಯ ಬಲದಿಂದ ಸಾಕಷ್ಟು ಶಿಷ್ಯವೇತನ ಪಡೆಯುತ್ತಲಿದ್ದೇನೆ. ಮೇಲು ಖರ್ಚಿಗೆ ರಜೆಯಲ್ಲಿ ಚಿಕ್ಕಪುಟ್ಟ ಕೆಲಸ ಮಾಡುತ್ತಿದ್ದೇನೆ. ಇದರಲ್ಲಿಯೇ ಸ್ವಲ್ಪ ಉಳಿತಾಯ ಮಾಡಿ ಮನೆಗೆ ಕಳಿಸುತ್ತೇನೆ" ಎಂದಾಗ ನಿಟ್ಟುಸುರೊಂದು ಹೊರಬಿತ್ತು.

"ಅರುಣ, ಏನೂ ತಪ್ಪು ಭಾವಿಸಬೇಡಿ. ನಿಮ್ಮ ಬಗ್ಗೆ ಹೆಚ್ಚಿಗೆ ತಿಳಿಯಬೇಕೆಂದು ಬಹಳ ದಿನಗಳಿಂದಲೂ ಆಸೆ. ಇಷ್ಟು ಕಡಿಮೆ ಹಣದಲ್ಲಿ ನಿಮ್ಮ ವಿದ್ಯಾಭ್ಯಾಸ ನಡೆಯಬೇಕೆಂದರೆ ತುಂಬ ತೊಂದರೆಯಾಗುತ್ತಿರಬೇಕು.... ಅಲ್ಲವೇ?"

"ತೊಂದರೆಯೇನು? ನಮ್ಮಂತಹರು ಜನ್ಮತಾಳುವದೇ ಕಷ್ಟ ಅನುಭವಿಸಲಿಕ್ಕೆಂದು ತೋರುತ್ತದೆ. ನನಗೆ ಮುದಿ ತಂದೆಯೊಬ್ಬರೇ ಇದ್ದಾರೆ. ತಾಯಿ ಸ್ವರ್ಗಸ್ಥಳಾಗಿ ಹತ್ತು ವರ್ಷಗಳಾಗಿವೆ. ಅದಕ್ಕೂ ಮೊದಲು ಅನೇಕ ವರ್ಷ ಅವರ ಆರೋಗ್ಯ ಸರಿಯಾಗಿರಲಿಲ್ಲ. ಹೀಗಾಗಿ ತಂದೆಯವರು ಸಾಲ ಕೈಕೊಳ್ಳಬೇಕಾಯಿತು. ಸಾಲ ತೀಸಲಾಗದೇ ಮನೆಯನ್ನು ಮಾರಬೇಕಾಯಿತು. ಈಗೊಂದು ಚಿಕ್ಕ ಗುಡಿಸಲವಿದೆ. ಸಣ್ಣದೊಂದು ಹೊಲವಿದೆ. ಈ ಮುದಿ ಪ್ರಾಯದಲ್ಲೂ ದಿನವಿಡೀ ತಂದೆಯವರು ನಾಲ್ಕು ಕಾಳು ಹುಟ್ಟಿಸುತ್ತಾರೆ. ನಾನು ನಾಳೆ ದೊಡ್ಡ ಸಾಹೇಬನಾಗಿ ಇದ್ದ ಸಾಲ

ತೀರಿಸಿ ತಮಗೆ ಸುಖ ಶಾಂತಿಗಳನ್ನು ತರುವೆನೆಂಬ ನಿರೀಕ್ಷೆಯಲ್ಲಿ ದಿನ ನೂಕುತ್ತಿದ್ದಾರೆ. ಎಲ್ಲಿ ಅವರ ಆಶಾಭಂಗವಾದೀತೋ! ಎಂದು ನನಗೆ ದಿಗಿಲಾಗುತ್ತದೆ. ಮಿತ್ರವೃಂದದಲ್ಲಿ ನಾನು ಎಷ್ಟೊಂದು ಹಾಸ್ಯ-ವಿನೋದ ಚೇಷ್ಟೆಗಳಲ್ಲಿ ಭಾಗವಹಿಸುತ್ತೇನೆ. ಆದರೆ ನಾನೆಷ್ಟು ದುಃಖಿ ಎನ್ನುವದು ನನಗೊಬ್ಬನಿಗೇ ಗೊತ್ತು, ಆಶಾ" ಎಂದಾಗ ಕಂಠ ಬಿಗಿದು ಬಂದಿತ್ತು. "ನಾನು ನಿಮ್ಮನ್ನು ನೋಯಿಸಿದೆ. ಕ್ಷಮಿಸಿ. ಇಂಥ ಪರಿಸ್ಥಿತಿಯಲ್ಲಿ ಈ ಪ್ರಶ್ನೆ ಕೇಳಬಾರದಾಗಿತ್ತು." ಅಷ್ಟರಲ್ಲಿ ಬಿಸಿ ಬಿಸಿ ದೋಸೆ, ಪೆಟಿಸ್, ಟೊಮೆಟೊ ಸೊಸ್ ಮತ್ತು ಕಾಫಿ ಬಂದಿತು. ಇಬ್ಬರೂ ಮೌನವಾಗಿಯೇ ಉಪಹಾರವನ್ನು ಮುಗಿಸಿದೆವು. ಬಿಲ್ ಬಂದಾಗ ಬೇಡವೆಂದರೂ ಆಶಾಳೇ ಕೊಟ್ಟಳು. ಅಲ್ಲಿಂದ ಎದ್ದು ನಿಧಾನವಾಗಿ ನಡೆಯುತ್ತ ಹೂದೋಟದ ಗುಂಟ ಸಾಗಿದ್ದೆವು. ಎದುರಿಗೆ ಹಸುರು ದಿನ್ನೆಯೊಂದು. ಅದನ್ನೇರಿದ್ದೆವು. ಅಲ್ಲಲ್ಲಿ ಮರಗಳು. ಮರದ ಛಾಯೆಯಲ್ಲಿ ಅಲ್ಲಿ ಇಲ್ಲಿ ಗಂಡು-ಹೆಣ್ಣು ಜೋಡಿಯಾಗಿ ಕುಳಿತಿದ್ದರು. ಇಬ್ಬರೂ ದಿನ್ನೆಯ ಇನ್ನೊಂದು ಬದಿಗೆ ಹೋಗಿ ಕುಳಿತದ್ದಾಯಿತು.

"ಜಗತ್ತು ಬಹು ವಿಚಿತ್ರವಾಗಿದೆ! ಕಾಲೇಜಿನ ಪ್ರಾರಂಭದ ದಿನಗಳಲ್ಲಿ ನಾನು ನಿಮ್ಮನ್ನು ದ್ವೇಷಿಸುತ್ತಿದ್ದೆ. ಪ್ರಾಧ್ಯಾಪಕರೆಂದು ನಿಮ್ಮ ಬಳಿಗೆ ನನ್ನನ್ನು ಕಳಿಸಿದಾಗ, ಪ್ರಮಿಲಾಳ ಜಡೆ ಹಿಡಿದು ನೀವು ಎಳೆದಾಗ, ಆಯ್ಸಕ್ರೀಮ್ ನನ್ನ ಸೀರೆಗೆ ಒರಸಿದಾಗ, ಗೀತಾಳ ಸೀರೆಗೆ ನೀವು ಮಸಿ ಸಿಡಿಸಿದಾಗ ನೀವೊಬ್ಬ ಪಕ್ಕಾ "ಮವಾಳಿ"ಯೆಂದು ತಿಳಿದಿದ್ದೆ."

"ಓಹೋ! ಪ್ರಮಿಲಾ ಮತ್ತು ಗೀತಾಳ ಕಥೆ ನಿಮಗೆ ಹೇಳಲಿಲ್ಲ ಅಲ್ಲವೇ? ಪ್ರಮಿಲೆಯ ಜಡೆಗಳು ನಮ್ಮ ಕಾಲೇಜಿನಲ್ಲಿಯೇ ಅತಿ ಉದ್ದ. ಅವಳು ಯಾವಾಗಲೂ ಅವನ್ನು ಅತಿ ಮಮತೆಯಿಂದ ಜೋಪಾನ ಮಾಡುತ್ತಾಳೆ. ಯಾರ ಕಣ್ಣು ತಾಕೀತೆಂದು ಉದ್ದ ಸೆರಗು ತೆಗೆದು ಅದನ್ನು ಮುಚ್ಚುತ್ತಾಳೆ. ಅವಳ ಕೇಶರಾಶಿಯ ದರ್ಶನ ಕಾಲೇಜಿನಲ್ಲಿ ಯಾರಿಗೂ ಆದಂತಿಲ್ಲ. ಒಂದು ದಿನ ಮಾತಿನ ಮಲ್ಲ ಆಪ್ಟೆ! ಅವಳ ಜಡೆಗಳನ್ನು ಸರಿಯಾಗಿ ನೋಡಿದವನು ಮಹಾ ಭಾಗ್ಯಶಾಲಿ! ಎಂದ. ಆತನ ಮಾತಿಗೆ ಪ್ರತಿಯಾಗಿ ನಾನು "ಜಡೆ ನೋಡುವದಷ್ಟೇ ಏಕೆ ಎಲ್ಲರೆದುರು ಅದನ್ನು ಹಿಡಿದೆಳೆಯಬಹುದು" ಎಂದೆ. ಮಾತಿಗೆ ಮಾತು ಬೆಳೆದು ಹಾಗೆ ಮಾಡಿದರೆ ಐವತ್ತು ರೂಪಾಯಿ ಕೊಡುವುದಾಗಿ ಆಪ್ಟೆ ಹೇಳಿದ. ಈ ಪಣ ಗೆಲ್ಲಲು ಅಂದು ವಿಶ್ರಾಂತಿಪೂರ್ವದಲ್ಲಿ ಅವಳ ಜಡೆಯುನ್ನು ಮೆಲ್ಲಗೆ ಹಿಡಿದು ಎಳೆದಿದ್ದೆ. ಅನಿರೀಕ್ಷಿತವಾಗಿ ಜಡೆ ಎಳೆದದ್ದರಿಂದ ಆಕೆ ಹಾಯ್ ಎಂದು ಚೀರಿದ್ದರಿಂದ ಸ್ವಲ್ಪ ಗುಲ್ಲಾಯಿತು.

ಸಲ್ಲದ ರೀತಿಯಲ್ಲಿ ೫೦/- ನುಂಗಿರಬಹುದೆಂದು ನೀವು ತಿಳಿದಿರಬಹುದು. ಆದರೆ ನಾನು, ಪ್ರಮೀಳೆಯ ಹತ್ತಿರ ಹೋಗಿ ನಡೆದ ಘಟನೆಯ ಬಗ್ಗೆ ವಿವರಿಸಿ, ನನ್ನ ಅಧಿಕ ಪ್ರಸಂಗತನಕ್ಕೆ ಕ್ಷಮೆ ಬೇಡಿದೆ. ಗೆದ್ದ ರೂಪಾಯಿಗಳಿಂದ ಭೋಜನಕೂಟವನ್ನು ಏರ್ಪಡಿಸಿದ್ದಾಗಿ ಹೇಳಿ, ಅದಕ್ಕೆ ಆಕೆ ಮುಖ್ಯ ಅತಿಥಿಯಾಗಿ ಬರಬೇಕೆಂದು ವಿನಂತಿಸಿದ್ದಾಗ ಆಕೆ ನಕ್ಕು ನನ್ನ ಹುಡುಗಾಟಿಕೆಯನ್ನು ಮನಸ್ಸಿಗೆ ಹಚ್ಚಿಕೊಳ್ಳದೇ ಆತ್ಮೀಯತೆಯಿಂದ ಭೋಜನಕ್ಕೆ ಬಂದಿದ್ದಳು, ಆಗ ನೀವು ನನ್ನ ಮೇಲೆ ವಿಷ ಕಾರುತ್ತಿದ್ದದ್ದರಿಂದ ನಿಮ್ಮನ್ನು ಕರೆಯುವ ಸಾಹಸ ಮಾಡಲಿಲ್ಲ.

"ನನ್ನ ಮೂರ್ಖತನದಿಂದ ನಾನೊಂದು ಸುಸಂಧಿ ಕಳೆದುಕೊಂಡಂ ತಾಯಿತು."

"ಇನ್ನು ಗೀತಾಳ ಪ್ರಕರಣ. ಆಕೆ ಗಂಡುಬೀರಿ ಎನ್ನುವದು ವಿದ್ಯಾರ್ಥಿವೃಂದ, ಶಿಕ್ಷಕ ವೃಂದಗಳಿಗೆ ಗೊತ್ತಿದ್ದ ಮಾತು. ಸಹಪಾಠಿಗಳನ್ನೆಲ್ಲ ತುಚ್ಛರೀತಿಯಲ್ಲಿ ಕಾಣುವದು ಅವಳ ಪದ್ಧತಿ. ಒಮ್ಮೆ ಕಾಲೇಜ ಬಸ್‌ಸ್ಟಾಪ್ ಹತ್ತಿರ ಕ್ಯೂ ನಿಂತಾಗ ವಿದ್ಯಾರ್ಥಿಯೆಬ್ಬನು ತನ್ನನ್ನು ಸ್ಪರ್ಶಿಸಿದನೆಂದು ಚಪ್ಪಲಿನಿಂದ ಹೊಡೆದಿದ್ದಳಂತೆ. ಹೀಗಾಗಿ ಅವಳ ಗೊಡವೆಗೇ ಯಾರೂ ಹೋಗುತ್ತಿಲ್ಲ. ಅವಳಿಂದ ಅವಮಾನಿತರಾದ ವಿದ್ಯಾರ್ಥಿಗಳೆಲ್ಲ ಅವಳಿಗೆ ಬುದ್ಧಿ ಕಲಿಸಬೇಕೆಂದು ನನ್ನ ಹತ್ತಿರ ಬಂದರು. ಅಂದು ಚರ್ಚಾ ಕೂಟದಲ್ಲಿ ಆಕೆ ಗಂಜಿಯ ಬಿಳಿ ಸಲವಾರ ಮತ್ತು ಗುಲಾಬಿ ಕಮೀಜ ಧರಿಸಿರಲಿಲ್ಲವೇ? ಆಕೆ ಕುಳಿತ ಹಿಂದಿನ ಬೆಂಚಿನಲ್ಲಿ ಉಳಿದವರೊಂದಿಗೆ ನಾನೂ ಕುಳಿತಿದ್ದೆ. ಮೆಲ್ಲಮೆಲ್ಲಗೆ ಕೆಂಪು ಮಸಿಯನ್ನು ಸಲವಾರದ ಮೇಲೆ ಸಿಂಪಡಿಸುತ್ತ ನಡೆದೆ. ಚರ್ಚಾಕೂಟ ಮುಗಿಯುತ್ತಲೂ ವಿದ್ಯಾರ್ಥಿಗಳೆಲ್ಲಾ ಪ್ರಾಧ್ಯಾಪಕರು ಹೋದ ನಂತರ ಗದ್ದಲ ಮಾಡುತ್ತ ಗುಂಪು ಗುಂಪಾಗಿ ಹೊರಟರು. ಹಿಂದಿನ ವಿದ್ಯಾರ್ಥಿಯೊಬ್ಬ "ಗೀತಾರಾಣಿಯ ಬಿಳಿ ಸಲವಾರ ಪ್ರಿಂಟ್ ಆಗಿದೆಯಲ್ಲ" ಎಂದು ಒದರಿದ. ನೆರೆದವರೆಲ್ಲ ಖೊಳ್ಳೆಂದು ನಕ್ಕರು. ಇನ್ನೊಬ್ಬ ಇಂದು ಕಾಲಿನಲ್ಲಿ ಚಪ್ಪಲಿಯಿಲ್ಲವೇ ಎಂದ. ಗೀತಾಳ ಕಣ್ಣು ರಕ್ತ ಕಾರಲಾರಂಭವಾಯಿತು. ಬಿರಬಿರನೆ ಆಕೆ ಹೋಗಲಾರಂಭಿಸಿದಾಗ ಎರಡೂ ಪಕ್ಕದಲ್ಲಿ ನಿಂತ ವಿದ್ಯಾರ್ಥಿಗಳು ಚಪ್ಪಾಳೆ ತಟ್ಟಿ ಸೈನ್ಯದ ಮಾರ್ಚಿಂಗ ಬ್ಯಾಂಡ್ ಸಿಳ್ಳು ಹಾಕಲಾರಂಭಿಸಿದರು. ಗೀತಾ ನೇರ ಮನೆಗೇ ಹೋಗಿಬಿಟ್ಟಳು. ನಂತರ ನಾನು ಪ್ರಿನ್ಸಿಪಾಲರ ಕೋಣೆಗೆ ಧಾವಿಸಿದೆ. ಅಂದು ನಡೆದ ಘಟನೆಯನ್ನು ಹೇಳಿ-ಗಲಾಟೆಗೆ ನಾನೇ ಕಾರಣವೆಂದು ವಿವರಿಸಿದೆ. ಸಿಟ್ಟು ಬರುವ ಬದಲಾಗಿ ಅವರಿಗೆ ನನ್ನ ಬಗ್ಗೆ ಅಭಿಮಾನವೆನಿಸಿತು. "ಇದೇ ಕಾಲೇಜಿನ ವಿದ್ಯಾರ್ಥಿಗಳು ಚರ್ಚಾಕೂಟದಲ್ಲಿ ನೆರೆದಿದ್ದಾಗ ಈ ತುಂಟತನ ಯಾರು ಮಾಡಿದರೆಂದು ಗೊತ್ತು ಹಚ್ಚುವದು ಸುಲಭವಾಗಿರಲಿಲ್ಲ. ಆದರೂ ನೀನಾಗಿ ಬಂದು ಕ್ಷಮೆ ಕೇಳಿದಿಯಲ್ಲ? ಕಾಲೇಜಿನ ಕುಚೋದ್ಯಗಾರರಲ್ಲಿ ಕೆಲವರಾದರೂ ನಿನ್ನಂತೆ ಇದ್ದರೆ ನನಗೆ ಯಾವ ತಲೆನೋವೂ ಇರಲಿಲ್ಲ" ಎಂದು ಮಾತು ಮುಗಿಸಿದರು. ಗೀತಾ

ತಂದೆಯನ್ನು ಕರೆದುಕೊಂಡು ಬಂದು ಪ್ರಿನ್ಸಿಪಾಲರಿಗೆ ದೂರನ್ನು ಒಪ್ಪಿಸಿದಳು. ಪ್ರಿನ್ಸಿಪಾಲರು ಗೀತಾಳ ತಂದೆಯನ್ನು ಕುರಿತು ಜನರ ಶಾಂತಿ, ಶಿಸ್ತುಗಳನ್ನು ಕಾಯಬೇಕಾದ ಪೋಲೀಸ ಅಧಿಕಾರಿ ಸ್ವತಃ ಮಗಳಿಗೆ ಶಿಸ್ತು ಕಲಿಸಲಾರಿರಾ? ನನಗೆ ಸಮಾಚಾರ ನಿನ್ನೆಯೇ ದೊರಕಿದೆ. "ಎಲ್ಲ ಪರಿಶೀಲಿಸಿ ನೋಡಲಾಗಿ ತಪ್ಪು ನಿಮ್ಮ ಮಗಳದೇ! ಎಂಬ ನಿರ್ಧಾರಕ್ಕೆ ಬಂದಿದ್ದೇನೆ. ಈ ಮೊದಲಾದರೂ ಗೀತಾಳ ಬಗ್ಗೆ ಅನೇಕ ದೂರುಗಳು ಬಂದಿದ್ದವು. ಮೊನ್ನಿನ ಘಟನೆಯಿಂದಾಗಿ ಐವತ್ತಕ್ಕೂ ಮಿಕ್ಕಿ ವಿದ್ಯಾರ್ಥಿಗಳನ್ನು ವಿಚಾರಿಸಿದೆ. ಒಬ್ಬರಾದರೂ ಅವಳ ಬಗ್ಗೆ ಸಹಾನುಭೂತಿಪರ ಉತ್ತರ ಕೊಟ್ಟರೆ ನನಗೆ ಸಮಾಧಾನವಾಗುತ್ತಿತ್ತು. ಇನ್ನಾದರೂ ಆಕೆ ಸರಿಯಾಗಿ ವರ್ತಿಸದಿದ್ದರೆ ಕಾಲೇಜನ್ನು ಬಿಡಬೇಕಾದೀತು? ಎಂದು ಎಚ್ಚರಿಸಿದರು. ಮಗಳ ಪ್ರಭಾವ ತಂದೆಗೆ ತಿಳಿಯದೇ?" ಆದರೂ ದುರುಗುಟ್ಟಿ ಮಗಳನ್ನು ನೋಡಿ, "ಇನ್ನು ಮುಂದೆ ನೀನು ನಮ್ರಳಾಗದಿದ್ದರೆ ಕಾಲೇಜಿನಿಂದ ಹೊರಗೆ ಹಾಕುವರಂತೆ" ಎಂದು ಹೇಳಿ ತಿರುಗಿ ಹೋದರು.

ಅಂದಿನಿಂದ ಗೀತಾದೇವಿ ಸೀತಾದೇವಿಯಾಗಿದ್ದಾಳೆ.....ಈಗ ಹೇಳು, ನಾನೆಂಥ ಪುಂಡತನ ಮಾಡಿದ್ದೇನೆಂದು.

"ವಿಷಯ ಅಪೂರ್ಣವಾಗಿ ತಿಳಿದಾಗ ಅಪಾರ್ಥ ಮಾಡಿಕೊಳ್ಳುವದು ಹೆಚ್ಚು. ಅಂದು ಪೋಲಿಯಾಗಿದ್ದವನು ಇಂದು ಆದರ್ಶ ವಿದ್ಯಾರ್ಥಿಯಾಗಿ ಬಳಿಗೆ ನಿಂತಿದ್ದಾನೆ."

ಮಾತು, ಪ್ರಾಧ್ಯಾಪಕರು-ಅಭ್ಯಾಸ-ಪ್ರಯೋಗಗಳತ್ತ ಹೊರಟಿತು. ಜೋರಾದ ಹರಟಯಲ್ಲಿ ತೊಡಗಿದ್ದವು. ಅಂದಿನಿಂದಲೇ ನಾನು ಆಶಾಳನ್ನು ಏಕವಚನದಿಂದ ಕರೆಯಲಾರಂಭಿಸಿದ್ದೆ. ಅಷ್ಟರಲ್ಲಿ ಸಂಜೆಯಾಗುತ್ತ ಬಂದಿತ್ತು. ಬಾನೆಲ್ಲ ಕೆಂಪಾಗಿತ್ತು. ಮೋಡಗಳು ಕೆಂಬಣ್ಣ ತಾಳಿದ್ದವು. ಆಶಾ ಪಕ್ಕಕ್ಕೆ ಸರಿದು, "ಯುವಕರು ಯುವತಿಯ ಆತ್ಮೀಯ ಸ್ನೇಹಿತರಾಗಬಲ್ಲರು, ಎಂದು ಜೀವನದಲ್ಲಿ ಮೊದಲ ಬಾರಿ ಅರಿವು ಮಾಡಿಕೊಟ್ಟ ನಿಮಗೆ ಧನ್ಯವಾದಗಳು" ಎಂದಳು. ನಾನು ಅವಳನ್ನೇ ನೋಡುತ್ತಿದ್ದೆ. ಅದಾವದೋ ತೃಪ್ತಿಯ ನಗೆ ಆಶಾಳ ಮುಖದಲ್ಲಿ ಲಾಸ್ಯವಾಡುತ್ತಿತ್ತು.

* * *

ಇಂದಿನ ಸೂರ್ಯಾಸ್ತಕ್ಕೂ ಅಂದಿನ ಸೂರ್ಯಾಸ್ತಕ್ಕೂ ಬಹಳ ಅಂತರವಿರಲಿಲ್ಲ. ಆದರೆ ಅರುಣನ ಜೀವನ ಬಟಾ ಬರಿದಾಗಿದೆ. ಜೀವನದಲ್ಲಿ ಏನೆಲ್ಲ ಮಾಡಬೇಕೆಂದು ಕನಸು ಕಂಡ ದಿನಗಳಿದ್ದವು. ವಿಚಾರಸರಣಿ ಮುಂದರಿಯುತ್ತಿದ್ದಾಗಲೇ ನಿನ್ನೆಯಿಂದ ಹಸಿದ ಹೊಟ್ಟೆ ಸಂಪು ಹೂಡಿಬಿಟ್ಟಿತು. ಇನ್ನಾದರೂ ಮೈ, ಹೊಟ್ಟೆಯ ಸಮಾಚಾರ

ತೆಗೆದುಕೊಳ್ಳಬೇಕೆಂದು ಕೋಣೆಗೆ ಹೋದ. ಬಿಸಿನೀರಿನಿಂದ ಸ್ನಾನಮಾಡಿ ಮಡಿ ಬಟ್ಟೆ ಧರಿಸಿದಾಗ ಎಷ್ಟೋ ಹಿತವೆನಿಸಿತು. ಕ್ರಾಪು ಹಿಕ್ಕಿಕೊಳ್ಳುತ್ತಿದ್ದಂತೆ ಊಟ ಸಿದ್ಧವಾದ ಸಮಾಚಾರವೂ ಬಂದಿತು. ಊಟದ ಮನೆಗೆ ಹೋಗಿ, ಹಾಯಾಗಿ ಊಟ ಮುಗಿಸಿದ, ಆಯ್ಸ್‌ಕ್ರೀಮ್ ಬಂದಿತು. ಆಯ್ಸ್‌ಕ್ರೀಮ್ ನೋಡಿದ ಕೂಡಲೇ ಮತ್ತೆ ಆಶಾಳ ನೆನಪು. ಅವಳನ್ನು ಮರೆಯಲು ಯತ್ನಿಸಿದಷ್ಟೂ ಹೆಚ್ಚೆಚ್ಚು ಆಳವಾಗಿ ಬೇರೂರಿ ಬಿಟ್ಟಿದ್ದಾಳೆ. ಇವಳಿಂದ ತನಗೆ ಯಾವಾಗ ಮುಕ್ತಿ? ಎಂದು ಯೋಚಿಸುತ್ತ ಆಯ್ಸ್‌ಕ್ರೀಮ್ ಹಾಗೆಯೇ ಬಿಟ್ಟು ತಿರುಗಿ ಕೋಣೆಯನ್ನು ಸೇರಿದ.

೪

"ಅರುಣ, ಮಿಸ್ಟರ ಅರುಣ ಏಳ್ರಿ; ಇದೇನು ಚೇಷ್ಟೆ ಅನ್ನುತ್ತೇನೆ. ಏಳ್ರಿ. ನಿಮಗಾಗಿ ಆಯ್ಸ್‌ಕ್ರೀಮ್ ತಂದಿದ್ದೇನೆ. ಮೆತ್ತಗಿನ ಆಯ್ಸ್‌ಕ್ರೀಮ್ ನನ್ನ ಸೀರೆಗೆ ಮೀಸಲಿರಲಿ....!! ಎಂದು ಅತಿ ಪರಿಚಯದ ಧ್ವನಿ ನಕ್ಕಿತು. ಅದೇ ಚಿರಪರಿಚಯದ ಹೆಣ್ಣು ಕೈ-ಕೂದಲನ್ನು ಸವರಿತು. ಆಹಾ! ಏನು ಮೃದು ಮಧುರ ಸುಖ! ಅದನ್ನು ಕಳೆದುಕೊಳ್ಳುವ ಮನಸ್ಸಿಲ್ಲದೇ ಎಚ್ಚರವಾದರೂ ಕಣ್ತೆರೆಯದೇ ಮಲಗಿದ್ದ. ಕಣ್ತೆರೆಯದೇ ನೇವರಿಸುವ ಮೃದು ಕೈಯನ್ನು ಹಿಡಿಯಬೇಕೆಂದರೆ ಎಲ್ಲೂ ಸಿಗದು. ಫಕ್ಕನೆ ಕಣ್ತೆರೆದೆ. ಹಡಗದ ಮೇಲಿನ ಅದೇ ಕೆಬಿನ್, ಅದೇ ನಿರುತ್ಸಾಹದ ವಾತಾವರಣ. ತಾನು ನಸುಕಿನ ನಿದ್ರೆಯ ಸುಖಸ್ವಪ್ನ ಕಾಣುತ್ತಿದ್ದೆ ಎಂಬುದು ಅರಿವಾಯಿತು. ಹೌದು. ಕಂಡ ಕನಸಿನಂತಹ ದಿನಗಳಿದ್ದವು, ಬಯಸಿದ್ದೆಲ್ಲ ಕೈಗೂಡುವ ದಿನಗಳಿದ್ದವು. ಆದರೆ ಇಂದು ಮಾತ್ರ ಅವು ಕೇವಲ ಕನಸಿನಲ್ಲೆ ಮತ್ತೆ ಕಾಣಬೇಕು. ಇದರಲ್ಲಿ ತಪ್ಪುಗಾರನಾರು? ಆಶಾ ಮತ್ತೆ ಮತ್ತೆ ಬಂದು ಪ್ರಯೋಗಶಾಲೆಯಲ್ಲಿ ಕದ್ದು ಕದ್ದು ಮಾತನಾಡಿಸುವದು ಸಾಧ್ಯವೇ? ಮಾತನಾಡುವದು ಅಸಾಧ್ಯವಾದಾಗ ಪ್ರಯೋಗ ಪುಸ್ತಕದಲ್ಲಿ ಬರೆದ ಪತ್ರ ಚೀಟಿಗಳು ಬರುತ್ತಿದ್ದವು. ವಿಹಾರಲೋಕಕ್ಕೆ ಹೋಗಿಬಂದನಂತರ ಒಂದು ದಿನ ಮಾತನಾಡಲು ಅವಕಾಶ ದೊರೆಯದಾಗ ಪ್ರಯೋಗದ ಟಿಪ್ಪಣೆಯ ಪುಸ್ತಕ ತಂದು ಬರೆದಿದ್ದಂತೆ ನಟಿಸಿ ಪತ್ರ ಬರೆದು, "ಪ್ರಯೋಗದ ಟಿಪ್ಪಣೆ ಸರಿಯಾಗಿದೆಯೋ ನೋಡಿ" ಎಂದು ನನಗೆ ಕೊಟ್ಟಿರಲಿಲ್ಲವೇ?

ಟಿಪ್ಪಣೆಯ ಸಾರಾಂಶ ಕನ್ನಡದಲ್ಲಿ ಹೀಗಿತ್ತು :

ಪ್ರಿಯ ಅರುಣ,

ಅಂದು ನಾವು ಬೀಳ್ಕೊಂಡ ನಂತರ ನಡೆದ ಘಟನೆಯನ್ನು ನಿಮಗೆ ವಿವರಿಸಬೇಕೆಂಬ ಚಪಲ. ಆದರೆ ಈ ಸಹಪಾಠಿಗಳು ಒಂದೇಸವನೆ ಕಾವಲಿಟ್ಟಿದ್ದಾರೆ.

ಸ್ವಲ್ಪ ಅಲುಗಾಡಿದರೆ ಸಾಕು. ಅವರ ಕಣ್ಣುಕಿವಿ ನೇರವಾಗುತ್ತಿವೆ! ನಿನ್ನೆ ನಮ್ಮ ಮನೆಯವರೆಲ್ಲ ಬಂದಾಗ ರಾತ್ರಿ ಹತ್ತುಗಂಟೆಯಾಗಿತ್ತು. ಆದ್ದರಿಂದ ಅಡಿಗೆ ಮಾಡಿ ಇಡಲು ಸಾಕಷ್ಟು ವೇಳೆಯಿತ್ತು. (ನಮ್ಮ ತಂದೆಯವರು ಹೆಚ್ಚು ಆಳುಗಳನ್ನು ಇಟ್ಟಿಲ್ಲ. ಹೀಗಾಗಿ ಮನೆಗೆಲಸದ ಪರಿಪಾಠ ನನಗಿದೆ!) ತಂದೆಗೆ ಸೇರುವ ಪಲ್ಯ, ಹುಳಿಗಳನ್ನು ಮಾಡಿದೆ. ಎಲ್ಲ ಮುಗಿದ ಮೇಲೆ ಬಾಲ್ಕನಿಯಲ್ಲಿ ಬಂದು ನಿಂತಿದ್ದೆ. ಅಂದಿನ ಮಧ್ಯಾಹ್ನ ಎಷ್ಟು ಮೋಜಾಗಿ ಕಳೆಯಿತು! ಅವರಿಗೆಲ್ಲ ಲೋಣಾವಳ ಪ್ರವಾಸ ಹಿತಕರವಾಯಿತಂತೆ. ಆದರೆ ಮುದ್ದು ಆಶಾ ಇಲ್ಲದಿದ್ದರಿಂದ ಬೇಸರವೂ ಆಯಿತಂತೆ. ಹೆಚ್ಚಿನ ಕ್ಲಾಸು ಇಟ್ಟ ಬಗ್ಗೆ ಪ್ರಾಧ್ಯಾಪಕರನ್ನು ಬೈದರು! ಸಾಲದ್ದಕ್ಕೆ ಮನೆಯಲ್ಲಿ ಒಬ್ಬಳೆ ಇದ್ದು ತಮಗಾಗಿ ಒಳ್ಳೆಯ ಅಡಿಗೆ ಸಿದ್ಧಮಾಡಿ ಇಟ್ಟಿದ್ದರಿಂದ ಅವರಿಗೆ ಕನಿಕರ, ಅಭಿಮಾನ! ಮುಂದಿನ ತಿಂಗಳು ಮತ್ತೆ ಲೋಣಾವಳಕ್ಕೆ ಹೋಗಲಿರುವರು-ನನ್ನನ್ನು ಕರೆದುಕೊಂಡು ಆ ದಿನವೂ ಪ್ರಾಧ್ಯಾಪಕರು (ಭಾವಿ ಪ್ರೊ. ಅರುಣರಾಯರು) ಕ್ಲಾಸು ಇಡುವರೇ? ಎಂದು ಕೇಳಲು ಈ ಪತ್ರ.

ಇತಿ ತಮ್ಮ,
ಆಶಾ

ಕನ್ನಡ ಅಲ್ಲಲ್ಲಿ ತಪ್ಪಿದ್ದರೂ ನನಗಾಗಿ ಕಷ್ಟಪಟ್ಟು ಕನ್ನಡದಲ್ಲೆ ಬರೆದಿದ್ದಳು; ನಾನು ಕನ್ನಡದ ಅಭಿಮಾನಿಯೆಂದು ಅರಿತಿದ್ದಳಾಕೆ.

"ಪ್ರಯೋಗದ ಟಿಪ್ಪಣಿ ಕೊನೆಯಲ್ಲಿ ತಪ್ಪಿದೆ" ಎಂದು ಉಳಿದ ವಿದ್ಯಾರ್ಥಿಗಳು ಕೇಳುವಂತೆ ಹೇಳಿ ಅವಳ ಟಿಪ್ಪಣಿಗೆ ಹೀಗೆ ಉತ್ತರ ಬರೆದಿದ್ದೆ;

ಪ್ರಿಯ ಆಶಾ,

ನಮ್ಮ ಹಾಸ್ಟೆಲಿನಲ್ಲಿಯೂ ಮೋಜಾಯಿತಂತೆ. ನನ್ನ ಸಂಬಂಧಿಕರಿಗೆ ಭೆಟ್ಟಿಯಾಗಲು ಪೂನಾಕ್ಕೆ ಹೋಗುವವನಿದ್ದೆನಲ್ಲವೇ? ದುರ್ದೈವದಿಂದ ಅವರೇ ನಿನ್ನೆ ಪೂನಾದಿಂದ ಇಲ್ಲಿಗೆ ಬಂದಿದ್ದರಂತೆ ಹಾಸ್ಟೆಲ್ಲಿಗೆ ಬಂದಿದ್ದರಂತೆ. ಸಹಪಾಠಿಗಳೆಲ್ಲ ಆಕಾಶ-ಪಾತಾಳ ಒಂದು ಮಾಡಿ ತನ್ನನ್ನು ಹುಡುಕಿದರಂತೆ. ಬಂದ ಆಪ್ತರಿಗೆ ಸಹಾಯ ಮಾಡುವ ಉದ್ದೇಶದಿಂದಲ್ಲ ಮತ್ತೆ! ಎಲ್ಲಿ ತಮ್ಮ ಕಣ್ಣು ತಪ್ಪಿಸಿ ಆಶಾಳನ್ನು ಭೆಟ್ಟಿಯಾಗುತ್ತಾನೋ ಎಂಬ ಕುತೂಹಲ-ಕಳವಳ ಅವರಿಗೆ. ನನ್ನ ಮೇಲೆ ಸರ್ಪಕಾವಲು ಇಟ್ಟಿದ್ದಾರೆ. ಆಶಾಳನ್ನು ಭೆಟ್ಟಿಯಾಗುವದು ಅಷ್ಟು ಸುಲಭವಲ್ಲವೆಂದು ಪ್ರಯತ್ನಿಸಿ ವಿಫಲರಾದ ಅವರಿಗೆಲ್ಲ ಗೊತ್ತು. ಅಂದು ಅವರಿಗೆಲ್ಲ ಮಂಕು ಎರಚಿದೆವಲ್ಲವೇ ನಾವಿಬ್ಬರೂ! ಕ್ಲಾಸು ತೆಗೆದುಕೊಳ್ಳಲು ಸಿದ್ಧ. ಆದರೆ ನಿನ್ನ ಹಿತದ ದೃಷ್ಟಿಯಿಂದ

ಬೇಡವೆಂದು ನಿರ್ಧರಿಸಿದ್ದೇನೆ. ನಿನ್ನನ್ನು ತೊಡಕಿನಲ್ಲಿ ಸಿಕ್ಕಿಸುವ ಮನಸ್ಸಿಲ್ಲ. ಇಬ್ಬರ ಸ್ನೇಹ ಸರಾಗವಾಗ ನಡೆಯಬೇಕೆಂದು ನನ್ನ ಹಿರಿಯಾಸೆ.

ಇತಿ

ಅರುಣ

ಬರಬರುತ್ತ ಅವಳು ತಪ್ಪು ಪ್ರಯೋಗ ಬರೆಯುವದು ಮತ್ತು ನಾನು ಅದನ್ನು ತಿದ್ದಿ ಬರೆಯುವದು ಸಾಮಾನ್ಯವಾಯಿತು! ಈ ಪ್ರಯೋಗಗಳನ್ನು ಉಳಿದವರು ನಕಲು ಮಾಡಬಾರದೆಂಬ ಸದುದ್ದೇಶದಿಂದ ಆಶಾ ಆದಷ್ಟು ಬೇಗ ಅವನ್ನು ಹರಿದು ಹಾಕಿ ಬಿಡುತ್ತಿದ್ದಳು! ಆಗೊಮ್ಮೆ ಈಗೊಮ್ಮೆ ಮನೆಯಲ್ಲಿ ಮಾಡಿದ ವಿಶೇಷ ತಿಂಡಿಗಳನ್ನು ನನಗಾಗಿ ಕಟ್ಟಿಕೊಂಡು ಬಂದು ಹಾಸ್ಟೇಲಿನ ಆಳಿನ ಕೈಯಲ್ಲಿ ದುಡ್ಡು ಹಾಕಿ ಅವನಿಂದ ನನ್ನ ಕೋಣೆಯಲ್ಲಿ ಇರಿಸುತ್ತಿದ್ದಳು. ಜೊತೆಗೆ "ಟಿಪ್ಪಣಿ" ಇರುತ್ತಿತ್ತು. ನನ್ನ ಮಾಸಿದ ಕರವಸ್ತ್ರಗಳನ್ನು ಟಿಪ್ಪಣಿಯಿಂದ ತಿಳಿಸಿ ತಾನೇ ಒಗೆದು ಕೊಡುತ್ತಿದ್ದಳು. ಒಮ್ಮೆಯಂತೂ ತಾನು ರೇಡಿಯೋಗ್ರಾಮ ತಯಾರಿಸುತ್ತಿದ್ದುದಾಗಿ ಹೇಳಿದಳು. ಕೆಲವೊಂದು ಕಡೆ ಹೇಗೆ ಮುಂದುವರಿಯುವದೆಂದು ತಿಳಿಯದೇ ಕೆಲಸ ನಿಂತು ಬಿಟ್ಟಿದೆಯೆಂದೂ ಅದಕ್ಕಾಗಿ ತಂದೆಯವರ ಸಲಹೆಯ ಮೇರೆಗೆ ನನ್ನನ್ನು ಕರೆದೊಯ್ಯುವ ಜವಾಬ್ದಾರಿ ಹೊತ್ತಿದ್ದಾಗಿ ತಿಳಿಸಿದಳು. ಅಂದೇ ಸಂಜೆ ಕಾಲೇಜು ಮುಗಿದ ಕೂಡಲೇ ತಪ್ಪದೇ ತನ್ನ ಕೂಡ ಹೊರಡಬೇಕೆಂದು ವಿನಂತಿಸಿಕೊಂಡಳು. ಒಂದು ನಿಮಿಷ ಯೋಚಿಸಿ, ತಲೆ ಕೆರೆದುಕೊಂಡು, ಅದರಲ್ಲೇನಿದೆ ಎಂದು ಹೊರಟೇಬಿಟ್ಟೆ. ಆಶಾ ಕಾರಿನ ಹಿಂದಿನ ಸೀಟಿನಲ್ಲಿ ನನ್ನ ಪಕ್ಕದಲ್ಲೇ ಬಂದು ಕುಳಿತಳು. ಕಾಲೇಜಿನಲ್ಲಿ ಎಷ್ಟು ಜನ ವಿದ್ಯಾರ್ಥಿಗಳು ಅಂದು ನಮ್ಮನ್ನು ಕಂಡು ಅಸೂಯೆಪಟ್ಟರೋ ಏನೋ! ಹೆಚ್ಚೆಚ್ಚು ಅಸೂಯೆ ಪಟ್ಟಂತೆ ಆಶಾಳಿಗೆ ಹೆಚ್ಚೆಚ್ಚು ಅಭಿಮಾನವಂತೆ!

ಮನೆ ಮುಟ್ಟಿದ ಕೂಡಲೇ ಡ್ರೈವರನೇ ಕಾರಿನ ಬಾಗಿಲು ತೆಗೆದ. ದಾದರದ ತಕ್ಕಷ್ಟು ಶಾಂತವಾದ ಹಿಂದೂ ಕೊಲೊನಿಯಲ್ಲಿ ಅವರ ಮನೆಯಿತ್ತು. ಪುಟ್ಟ ಹೂದೋಟ. ಗೇಟಿಗೆ ಹಂದರ ಮಲ್ಲಿಗೆಯ ತೋರಣ. ಅದನ್ನು ದಾಟಿದ ಕೂಡಲೇ ಪೋರ್ಟಿಕೊ. ಒಳಗೆ ಸುಸಜ್ಜಿತ ಡ್ರಾಯಿಂಗ್ ರೂಮ್, ಸುಂದರವಾದ ಆಸನಗಳು, ಪರಿವಾರದ ಸಿರಿವಂತಿಕೆಯನ್ನು ಸಾರುತ್ತಿದ್ದವು. ನನ್ನನ್ನು ಆಸನವೊಂದರಲ್ಲಿ ಕೂಡ್ರಿಸಿ, 'ಈಗ ಬಂದೆ' ಎಂದು ಒಳಗೆ ಓಡಿದಳು. ಆಶಾ ಎರಡೇ ನಿಮಿಷಗಳಲ್ಲಿ ತಂದೆಯೊಡನೆ ತಿರುಗಿ ಬಂದಳು. ಎದ್ದು ನಮಸ್ಕರಿಸಿದಾಗ ಪ್ರಸನ್ನರಾಗಿ ಅವಳ ತಂದೆ ದೇಶಪಾಂಡೆಯವರು ಕೂಡ್ರಲು ಹೇಳಿ ತಾವೊಂದು ದೊಡ್ಡ ಕುರ್ಚಿಯಲ್ಲಿ ಕುಳಿತರು. ಕೊಂಕಣಿಯಲ್ಲೇ ಮಾತು ಪ್ರಾರಂಭಿಸಿದರು.

"ನೀವು ಆಶಾಳ ಕ್ಲಾಸಿನಲ್ಲಿ ಬ್ರಿಲಿಯಂಟ್ ವಿದ್ಯಾರ್ಥಿಯೆಂದು ತಿಳಿದು ಆನಂದವಾಯಿತು. ಜಾಣ್ಮೆಯೊಂದಿಗೆ ನಮ್ರತೆ-ಸರಳತೆಗಳೂ ನಿಮ್ಮಲ್ಲಿವೆಯೆಂದು ತಿಳಿಯಿತು. ಬಹಳ ದಿನಗಳಿಂದ ಆಶಾಳಿಗೆ ರೇಡಿಯೋಗ್ರಾಮ ಒಂದನ್ನು ತಯಾರಿಸಬೇಕೆಂದು ಹಂಬಲ. ಅಷ್ಟೊಂದು ಆಸಕ್ತಿಯಿದೆಯಲ್ಲ ಎಂದು ನಾನೂ ಪ್ರೋತ್ಸಾಹಿಸಿದೆ. ಆದರೆ ಈಗ ಮುಂದುವರಿಯಲು ತಿಳಿಯದೇ ದಿಗ್ಮೂಢಳಾಗಿದ್ದಾಳೆ. ಕೊಲೆ-ಸುಲಿಗೆ- ಜಗಳ-ದಂಗೆಗಳ ವಿಚಾರಣೆ ನಡೆಸುವ ನನಗೆ ರೇಡಿಯೋಗ್ರಾಮದ ಸಂಬಂಧ ಹೇಗೆ ಬಂದೀತು? ಅಂತೆಯೇ ನಿಮಗೆ ಇಲ್ಲಿ ಬರುವ ತೊಂದರೆ ಕೊಟ್ಟಂತಾಯಿತು. ಇನ್ನು ನಾನು ಸಂಜೆಯ ತಿರುಗಾಟಕ್ಕೆ ಹೊರಡಲೇ? ಎನ್ನುತ್ತ, "ಆಶಾ ಬಂದ ಅತಿಥಿಗೆ ಚಹಾ-ತಿಂಡಿ ಕೊಡಮ್ಮಾ" ಎಂದು ಮಗಳಿಗೆ ಆಜ್ಞೆಕೊಟ್ಟು "ದಾಕ್ಷಿಣ್ಯ ಪಡಬೇಡಿ, ನಿಮ್ಮ ಮನೆಯೆಂದೇ ತಿಳಿದುಕೊಳ್ಳಿ" ಎಂದು ಉಪಚರಿಸಿ ಹೊರಟುಹೋದರು.

ಆಶಾ., ಚಹ ತಿಂಡಿಯ ವ್ಯವಸ್ಥೆ ಮಾಡಲು ಒಳಗೆ ಹೋದಳು. ಮೂಲೆಯ ಮೇಜೊಂದರ ಮೇಲೆ ರೇಡಿಯೋಗ್ರಾಮದ ಭಾಗಗಳಿದ್ದವು. ಹೋಗಿ ಪರೀಕ್ಷಿಸಿದೆ. ಕೆಲವು ತಂತಿಗಳನ್ನು ಜೋಡಿಸುವುದಲ್ಲದೇ ಆಶಾ ಇನ್ನೇನೂ ಮಾಡಿರಲಿಲ್ಲ! ಸರಿ; ಕುಳಿತೇನು ಮಾಡುವದೆಂದು ಕೆಲಸದಲ್ಲಿ ತೊಡಗಿದೆ. ಕೆಲವು ಸಲಕರಣೆಗಳು ಬೇಕಾಗಿದ್ದರಿಂದ ಹೊರಗೆ ಕುಳಿತಿದ್ದ ಡ್ರೈವರನಿಗೆ ಹೇಳಿದೆ. ಅವನು ಒಳಗೆ ಹೋದ. ಆಶಾಳೇ ಬಂದು, "ಇಷ್ಟರಲ್ಲಿ ಕೆಲಸ ಪ್ರಾರಂಭ ಮಾಡಿಯೇ ಬಿಟ್ಟಿರಾ? ಸಲಕರಣೆಗಳೆಲ್ಲ ನನ್ನ ಕೋಣೆಯಲ್ಲೇ ಇವೆ. ನಿಮಗೆ ಬೇಕಾದವನ್ನು ತೆಗೆದುಕೊಳ್ಳಿ" ಎಂದು ತನ್ನ ಕೋಣೆಗೆ ಕರೆದೊಯ್ದಳು. ತಕ್ಕ ಮಟ್ಟಿಗೆ ದೊಡ್ಡದಾಗಿತ್ತು ಆಶಾಳ ಕೋಣೆ. ಒಂದು ಕಡೆ ಬಹಳಷ್ಟು ಪುಸ್ತಕಗಳನ್ನು ಶೆಲ್ಫಗಳ ಮೇಲೆ ಜೋಡಿಸಲಾಗಿತ್ತು. ಇನ್ನೊಂದು ಪಕ್ಕದಲ್ಲಿ 'ಉಷಾ'ಮಶೀನು. ಚಿಕ್ಕ ಸ್ಟ್ಯಾಂಡೊಂದರ ಮೇಲೆ ದಿನನಿತ್ಯದ ಬಟ್ಟೆಬರೆಗಳು."

ಆಶಾ ದೊಡ್ಡ ಗೋಡ್ರೆಜ್ ಕಪಾಟೊಂದರ ಬಾಗಿಲು ತೆರೆದು, ನಿಮಗೆ ಯಾವ ಸಲಕರಣೆ ಬೇಕೋ ಆಯ್ದುಕೊಳ್ಳಿ ಎಂದು ತೋರಿಸಿದಳು. ನೋಡಿದರೆ ಒಳಗೆಲ್ಲ ನೂರಾರು ಸೀರೆಗಳು. ಅವುಗಳನ್ನು ಸರಿಸಿ ಹಿಂದೆ ಅಡಗಿಸಿಟ್ಟ ನನ್ನದೊಂದು ರೇಖಾಚಿತ್ರವನ್ನು ತೋರಿಸಿ ನಸುನಗುತ್ತ ನಿಂತಿದ್ದಳು. ನನಗೆ ದಿಗ್ಭ್ರಮೆಯಾಯಿತು! ಆದರೂ ಅಳುಕದೆ ನನಗೆ ಬೇಕಾದ ಸಲಕರಣೆಗಳನ್ನೆಲ್ಲ ಹೇಳಿದೆ. ಟೇಬಲ್ಲಿನ ಡ್ರಾಯರ ಎಳೆದು, ಕೇಳಿದ ಸಲಕರಣೆಗಳನ್ನೆಲ್ಲ ಕೊಟ್ಟಳು. ತಿರುಗಿ ಡ್ರಾಯಿಂಗ ರೂಮಿಗೆ ಬಂದೆವು ರೇಡಿಯೋ ಗ್ರಾಮ ಇದ್ದಲ್ಲಿ ಖುರ್ಚಿ ಸರಿಸಿ ಕೆಲಸ ಪ್ರಾರಂಭಿಸಿದೆ. ಕೈಗಳು ಕೆಲಸ

ಮಾಡುತ್ತಿದ್ದಂತೆ ಮನಸ್ಸು ಆಶಾ ಬಿಡಿಸಿದ ರೇಖಾ ಚಿತ್ರವನ್ನೆ ನೆನೆಯುತ್ತಿತ್ತು. ಅವಳು ರೇಖಾ ಚಿತ್ರದಲ್ಲಿ ಇಷ್ಟು ನಿಪುಣೆಯೆಂಬುದು ಗೊತ್ತಿರಲಿಲ್ಲ. ಸಾಲದ್ದಕ್ಕೆ ಆಶಾಳಿಗೆ ನಾನು ಇಷ್ಟೊಂದು ಮನಸ್ಸಿಗೆ ಬಂದೆನೇ? ಎಂದು ತಿರುಗಿ ನನ್ನನ್ನು ನಾನೇ ಪ್ರಶ್ನಿಸಿದ್ದೆ.

೫

ಹದಿನೈದು ಇಪ್ಪತ್ತು ನಿಮಿಷ ಕಳೆದಿರಬಹುದು ಆಶಾ ಮೂರು ನಾಲ್ಕು ತಿಂಡಿಗಳ ಪ್ಲೇಟು-ಚಹದ ಕಪ್ಪು, ಬಿಸಿ, ಕಿಟ್ಲಿಗಳನ್ನು ಇರಿಸಿದ ಟ್ರೇ ತಂದಳು. ತಿಂಡಿಯತ್ತ ಲಕ್ಷ್ಯ ಹಾಕದೇ ತಿನ್ನುತ್ತಿದ್ದುದರಿಂದ ಆಶಾಳಿಗೆ ಅಸಮಾಧಾನವಾಯಿತು. "ನಿಮ್ಮನ್ನು ನಮ್ಮ ಮನೆಯನ್ನು ತೋರಿಸಲು, ಮನೆಯ ಜನರ ಪರಿಚಯ ಮಾಡಿಕೊಡಲು ಕರೆತಂದಿದ್ದೇನೆ. ರೇಡಿಯೋಗ್ರಾಮ ತಯಾರಿಸಲಿಕ್ಕೆ ಅಲ್ಲ. ತಿಂಡಿಗಳನ್ನು ಮುಗಿಸಲೇಬೇಕು" ಎಂದು ಅಸಮಾಧಾನದ ಧ್ವನಿಯಲ್ಲಿ ಹೇಳಿದಳು. ನಾನು ನಕ್ಕು ಬೇಗ ಉಪಹಾರ ಮುಗಿಸಿ ತಿರುಗಿ ಕಾರ್ಯೋನ್ಮುಖನಾದೆ. ಆಶಾಳಿಗೆ ನನಗೆ ಅನುಕೂಲವಾಗುವಂತೆ ದೀಪ ಹಿಡಿಯುವ ಕೆಲಸ ಕೊಟ್ಟೆ. ನಡುವೆ ದೃಢ ಕಾಯಕದ ಯುವಕನೊಬ್ಬ ಖಟ್! ಖಟ್! ಬೂಟಿನ ಸಪ್ಪಳ ಮಾಡುತ್ತ ಸಿಳ್ಳು ಹಾಕುತ್ತಾಬಂದಾಗ ಆಶಾ ಅಣ್ಣ ಮಾಧವನ ಪರಿಚಯ ಮಾಡಿಕೊಟ್ಟಳು. ಆತ ಹಲೊ, ಹಲೋ ಎಂದು ಹಾಗೆಯೇ ಹೋಗಿಬಿಟ್ಟ.

ತಿರುಗಾಟದಿಂದ ಮರಳಿ ಬಂದ ದೇಶಪಾಂಡೆಯವರಿಗೆ ನಾನು ಏಕಾಗ್ರತೆಯಿಂದ ಕೆಲಸ ಮಾಡುತ್ತಿರುವದು, ಮಗಳು ಅಸಿಸ್ಟಂಟಳಂತೆ ದೀಪ ಹಿಡಿದುಕೊಂಡು ಸಹಾಯಮಾಡುತ್ತಿರುವದು ನೋಡಿ ಸಮಾಧಾನವಾಗಿರಬೇಕು! "ಒಂದೇ ದಿನದಲ್ಲಿ ಎಲ್ಲವನ್ನೂ ಮುಗಿಸಬೇಕೆಂದಿಲ್ಲ. ಉಳಿದ ಕೆಲಸ ನಾಳೆ ಮಾಡಿದರಾಗದೇ?" ಎಂದು ರಾಗ ಎಳೆದರು. ಅವರ ಮಾತು ಕೇಳಿಸಿದರೂ ಉತ್ತರ ಕೊಡದೇ ಸುಮ್ಮನಿದ್ದೆ. ನಂತರ ಅಲ್ಲಿಯೇ ಒಂದು ಕಡೆ ಕುಳಿತು ಪತ್ರಿಕೆಯನ್ನು ಓದಲಾರಂಭಿಸಿದರು, ದೇಶಪಾಂಡೆಯವರು. ಮುಂದೊಂದು ಘಂಟೆಯ ತನಕ ಕೆಲಸ ಮುಂದುವರಿಸಿ, ಅಂದಿನ ದಿನಕ್ಕೆ ಕೆಲಸ ಮುಗಿಸಿ ಹಾಸ್ಟೇಲಿಗೆ ಹೊರಟುನಿಂತೆ.

ಮರುದಿನವೂ, ಮೂರನೆ ದಿನ ಸಂಜೆಯೂ ಕೆಲಸ ಮುಂದರಿಯಿತು. ಚಹ ತಿಂಡಿಗಳಾದವು. ಆಶಾ ಸಹಾಯಕಳಾಗಿ ನಿಂತಿದ್ದಳು. ದೇಶಪಾಂಡೆಯವರು ವಾಡಿಕೆಯಂತೆ ದಿನಪತ್ರಿಕೆಯಲ್ಲಿ ಮಗ್ನರಾಗಿದ್ದರು. ಮೆಲ್ಲನೆ ತಕ್ಕಮಟ್ಟಿಗೆ ತಯಾರಾದ ರೇಡಿಯೋಗ್ರಾಮದ ತಂತಿಯನ್ನು ವಿದ್ಯುತ್ ಶಕ್ತಿಗೆ ಜೋಡಿಸಿ ರೇಡಿಯೋಗ್ರಾಮ್ ಪ್ರಾರಂಭಿಸಿಯೇ ಬಿಟ್ಟೆ! ಥಕ್ಕನೆ ತಲೆಯೆತ್ತಿ ನೋಡಿ ದೇಶಪಾಂಡೆಯವರು ಬಹಳ ಸಂತುಷ್ಟರಾದರು. ವಾಹಾ ವಾಹ! ಎನ್ನುತ್ತ ಒಳಗೆ ಹೋಗಿ ಹೆಂಡತಿಯನ್ನು

ಕರೆದುಕೊಂಡು ಬಂದರು. ರೇಡಿಯೋಗ್ರಾಮನ್ನು ಹೆಮ್ಮೆಯಿಂದ ತೋರಿಸಿ ನನ್ನನ್ನು ಮುಕ್ತಕಂಠರಾಗಿ ಹೊಗಳಿ ನನ್ನ ಬೆನ್ನನ್ನು ಮತ್ತೆ ಮತ್ತೆ ಚಪ್ಪರಿಸಿ 'ಇಂದಿನ ನವಯುವಕರು ಯಾವ ಕೆಲಸಕ್ಕೂ ಬಾರದವರು! ಎಂದು ನಾನು ಆಗಾಗ ಭಾಷಣ ಮಾಡುತ್ತಿರುತ್ತೇನೆ ಅಂಥ ಸಮಯದಲ್ಲಿ ನಿನ್ನಂತಹ ಯುವಕರೂ ಇರುತ್ತಾರೆ, ಎಂಬುದನ್ನು ಮರೆತು ಬಿಡುತ್ತೇನೆ. ಇಂದು ಭಾರತಕ್ಕೆ ನಿನ್ನಂತಹ ಅಸಂಖ್ಯ ತರುಣರು ಬೇಕಾಗಿದ್ದಾರೆ' ಎಂದು ಇನ್ನೊಮ್ಮೆ ಬೆನ್ನು ಚಪ್ಪರಿಸಿ "ಇಂದು ಬಹಳ ದಣಿದಿದ್ದೀಯಾ? ಇನ್ನೊಂದು ದಿನ, ಸಾಧ್ಯವಾದರೆ ಈ ರವಿವಾರ ಊಟಕ್ಕೆ ನಮ್ಮಲ್ಲಿ ಬಂದುಬಿಡು. ಊಟ ಮಾಡಿದಂತಾಯಿತು, ಕುಳಿತು ಮಾತನಾಡಿದಂತೆಯೂ ಆಯಿತು. ಇದ್ದಬಿದ್ದ ಉಳಿದ ಕೆಲಸ ಮುಗಿಸಿದಂತೆಯೂ ಆಯಿತು" ಎಂದರು. ತಂದೆಯ ಮಾತು ಕೇಳಿ ಆಶಾ ಹಿರಿಹಿರಿ ಹಿಗ್ಗಿದಳೆಂಬುದು ಅವಳ ಮುಖದಿಂದಲೇ ವ್ಯಕ್ತವಾಗುತಿತ್ತು. ತಂದೆಯವರ ಮೆಚ್ಚುಗೆಗೂ ನಾನು ಪಾತ್ರನಾದೆನಲ್ಲ ಎಂದು ಹೆಮ್ಮೆ ಪಟ್ಟಿರಬೇಕು.

ದೇಶಪಾಂಡೆಯವರ ಕಾರು ನನ್ನನ್ನು ರಾತ್ರಿ ಹತ್ತು ಗಂಟೆಗೆ ಹಾಸ್ಟೇಲಿನ ಇದುರಿಗೆ ತಂದು ಬಿಟ್ಟಾಗ ಅನೇಕ ಹುಡುಗರು ಓಡಿಬಂದರು. ಆಶಾಳ ದರ್ಶನ ಪಡೆಯಲು ಕಾರನ್ನು ಮುತ್ತಿದರು. ಆದರೆ ನಾನೊಬ್ಬನೇ ಇಳಿದದ್ದನ್ನು ನೋಡಿ ಅವರಿಗೆ ನಿರಾಶೆಯಾಗಿರಬೇಕು. "ಏನಯ್ಯ ಹೊಡೆದೇ ಬಿಟ್ಟೆಯಲ್ಲ ಚಾನ್ಸ!" ಒಬ್ಬನೆಂದ. "ಈಗ ದೊಡ್ಡ ಮನುಷ್ಯರ ಸಹವಾಸ ಲಭಿಸಿದೆಯಪ್ಪಾ! ನಮ್ಮ ಹತ್ತಿರ ಮಾತನಾಡಲು ಅವನಿಗೆ ಪುರುಸೊತ್ತು ಎಲ್ಲಿ?" ಇನ್ನೊಬ್ಬ ಕೊಂಕು ನುಡಿದ ಅವರ ಮಾತನ್ನು ಗಮನಿಸದೆ, ಕೋಣೆಗೆ ಹೋದೆ. ಬಟ್ಟೆಗಳನ್ನು ಬದಲಿಸಿ ಕೈಕಾಲು ಮುಖ ತೊಳೆದುಕೊಂಡು ಬಂದೆ. ಸಾಕಷ್ಟು ದಣಿವಾಗಿತ್ತು. ಮನದಣಿ ಉಪಹಾರ ಮಾಡಿದ್ದರಿಂದ ಊಟದ ಚಿಂತೆಯಿರಲಿಲ್ಲ. ಹಾಸಿಗೆಯಲ್ಲಿ ಮಲಗಿದ್ದೇ ಗೊತ್ತು. ನಿದ್ದೆ ಬಂದು ಬಿಟ್ಟಿತ್ತು. ಮುಂಜಾನೆ ಧಡಧಡ ಬಾಗಿಲು ಬಿಡಿದಾಗಲೇ ಎಚ್ಚರ ಕಣ್ಣು ತಿಕ್ಕಿಕೊಳ್ಳುತ್ತ ಬಾಗಿಲು ತೆರೆದಾಗ ಕೆಂಗಣ್ಣಿನ ವಾರ್ಡೆನ್ ನಿಂತಿದ್ದರು! ನನ್ನ ವಂದನೆಯನ್ನು ಅಲಕ್ಷಿಸಿ ಮಾತಿಗೆ ಪ್ರಾರಂಭಿಸಿದರು. "ಇಷ್ಟು ದಿನ ನಿಮ್ಮ ಬಗ್ಗೆ ಅನೇಕ ದೂರುಗಳು ಬಂದರೂ ನಾನು ಕಿವಿಯ ಮೇಲೆ ಹಾಕಿಕೊಂಡಿರಲಿಲ್ಲ. ಆದರೆ ನಿನ್ನೆ ನಿಮ್ಮ ಚಟುವಚಿಕೆ.ನ್ನು ಕಣ್ಣಾರೆ ಕಂಡಿದ್ದೇನೆ. ಈಗ ನನ್ನ ಕಣ್ಣಲ್ಲಿ ಮಣ್ಣು ಹಾಕಲಾರಿರಿ! (ಹೌದು ನಿಮ್ಮ ಸೋಡಾಗ್ಲಾಸಿನ ಚಶ್ಮದೊಳಗಿಂದ ಮಣ್ಣು ಕಣ್ಣಲ್ಲಿ ಹೇಗೆ ಹೋಗಬೇಕು? ಎಂದು ಕೇಳಬೇಕೆಂದಿದ್ದೆ). ಹೂಂ, ನಿನ್ನೆ, ಮೊನ್ನೆ ಕುಮಾರಿ ದೇಶಪಾಂಡೆಯೊಡನೆ ತೀರ ಹತ್ತಿರ ಕುಳಿತು ಕಾರಿನಲ್ಲಿ ಹೋದದ್ದು ನಿಜವೇ? ನಾನು ರಾತ್ರಿ ೯-೩೦ ಗಂಟೆಗೆ ಹಾಸ್ಟೆಲಿನ ರೌಂಡ ತೆಗೆದಾಗ ನೀವು ನಿಮ್ಮ ಕೋಣೆಯಲ್ಲಿದ್ದಿರಾ? ರಾತ್ರಿ ಹತ್ತರ ನಂತರ ಕಳ್ಳನಂತೆ ನುಸುಳಿ ಬಂದು ಕೋಣೆ ಸೇರಿದ್ದು ಸುಳ್ಳೇ?" ಎಂದು ಗರ್ಜಿಸಿದರು.

ಅದಾಗಲೇ ವಿದ್ಯಾರ್ಥಿಗಳೆಲ್ಲ ಸೇರಿ ಮೋಜು ನೋಡುತ್ತಿದ್ದರು. ನಾನು ನಿಜ ಸಂಗತಿಯನ್ನು ತಿಳಿಸಲು ಯತ್ನಿಸಿದರೆ ಮಾತನಾಡಗೊಡದೇ. "ಮುಚ್ಚು ಬಾಯಿ! ನಾನು ಕೇಳಿದ್ದಕ್ಕೆಲ್ಲ ಹೌದೊ ಅಲ್ಲವೊ ಹೇಳಿದರೆ ಸಾಕು" ಎಂದು ಕೂಗಿದರು. ಅದಕ್ಕೆ ಏನೂ ಉತ್ತರಿಸದೇ ಕೋಣೆಯ ಬಾಗಿಲು ಮುಚ್ಚಿ ತಿರುಗಿ ಮಲಗಿದೆ.

ದಿನದಂತೆ ಸ್ನಾನ, ಊಟ ತೀರಿಸಿ ಕಾಲೇಜಿಗೆ ಹೋದದ್ದಾಯಿತು. ಕಾಲೇಜಿನ ಮೆಟ್ಟಲೇರುತ್ತಿದ್ದಂತೆ ಸಾಹೇಬರು ಕರೆದಿದ್ದಾರೆಂದು ಪ್ರಿನ್ಸಿಪಾಲರ ಆಳು ಬಂದು ಹೇಳಿದ. ಅವನನ್ನು ಹಿಂಬಾಲಿಸಿ ಪ್ರಿನ್ಸಿಪಾಲರ ಆಫೀಸಿನೊಳಗೆ ಕಾಲಿಟ್ಟಾಗ, ಅವರ ಸದಾ ನಗುಮುಖ, ಗಂಟಿಕ್ಕಿಕೊಂಡಿತ್ತು. "ಮಿ. ಅರುಣ, ನಿಮ್ಮ ಬೇಶಿಸ್ತಿನ ನಡಾವಳಿಕೆಯ ಬಗ್ಗೆ ವಿವರ ರಿಪೋರ್ಟು ನನಗೆ ತಲುಪಿದೆ. ನಿಮಗೆ ನೌಕರಿಯ ಸವಲತ್ತಿನೊಂದಿಗೆ ಹಾಸ್ಟೆಲಿನ ವಾಸ ವಿಶೇಷ ಪರಿಶ್ರಮ ವಹಿಸಿ ಕೊಡಲಾಗಿತ್ತು. ಆದರೆ ಅದರ ಸದುಪಯೋಗ ನೀವು ಮಾಡಿಕೊಂಡಿಲ್ಲ. ಕಾಲೇಜಿನ ಉತ್ತಮ ವಿದ್ಯಾರ್ಥಿಗಳಲ್ಲಿ ಒಬ್ಬರಾದ ನಿಮ್ಮಿಂದ ಈ ವರ್ತನೆ ಅಪೇಕ್ಷಿಸಿರಲಿಲ್ಲ. ಇಂದು ಸಾಯಂಕಾಲದೊಳಗಾಗಿ ಹಾಸ್ಟೇಲ ಬಿಟ್ಟು ಹೋಗಬೇಕು" ಎಂದು ಅಪ್ಪಣೆ ವಿಧಿಸಿದರು.

ನಾನು ಸುಮ್ಮನೆ ನಿಂತಿದ್ದೆ.

ಮತ್ತೆ ಕಣ್ಣೆತ್ತಿ ನೋಡಿ, "ಹೋಗಬಹುದು" ಎಂದರು.

"ಸರ್ ನನಗೂ ಒಂದು ಮಾತನಾಡಲು ಅವಕಾಶ ಕೊಡಿರಿ."

"ಹೇಳಬೇಕಾದ್ದನ್ನು ಹೇಳಬಹುದು."

"ಇಷ್ಟು ವಾಕ್ ಸ್ವಾತಂತ್ರ್ಯ ಇಂದು ಬೆಳಿಗ್ಗೆ ವಾರ್ಡನ್ ಸಾಹೇಬರು ಕೊಡಮಾಡಿದರೆ ಮಾತು ಇಷ್ಟು ಮುಂದುವರಿಯುತ್ತಿರಲಿಲ್ಲ.....ನಿನ್ನೆ ನ್ಯಾಯಾಧೀಶ ಶ್ರೀ ಎಸ್.ಆರ್. ದೇಶಪಾಂಡೆಯವರು ರೇಡಿಯೋಗ್ರಾಮದ ಕೆಲಸಕ್ಕ ತಮ್ಮ ಮನೆಗೆ ಕರೆಸಿಕೊಂಡಿದ್ದರು. ಹೋಗುವಾಗ ಅವರ ಕಾರಿನಲ್ಲೇ ಹೋಗಿದ್ದೆ. ಹಿಡಿದ ಕೆಲಸ ಮುಗಿಸಲು ರಾತ್ರಿಯಾಯಿತು. ಉಳಿದ ಕೆಲಸ ಮುಗಿಸಲು ಮರುದಿನವೂ ಹೋಗಬೇಕಾಯಿತು. ತಿರುಗಿ ಕಾರಿನಲ್ಲೇ ಕಳಿಸಿಕೊಟ್ಟರು. ಇದರಲ್ಲಿ ನನ್ನ ಅಪರಾಧವೇನು? ಮುಂಚಿತವಾಗಿಯೇ ಇಷ್ಟು ತಡವಾಗುವ ಕಲ್ಪನೆಯಿದ್ದರೆ ವಾರ್ಡನ್ನರ ಪರವಾನಗಿಯನ್ನು ಖಂಡಿತ ಪಡೆಯುತ್ತಿದ್ದೆ" ಎಂದೆ.

"ನೀವು ಸತ್ಯವನ್ನು ಹೇಳುತ್ತಿದ್ದೀರಾ?"

"ನನ್ನಲ್ಲಿ ನಂಬಿಕೆಯಿಲ್ಲದಿದ್ದರೆ ಹಾಯಕೋರ್ಟಿಗೆ ಫೋನ ಮಾಡಿ ಕೇಳಬಹುದು" ಎಂದೆ. ತಕ್ಷಣ ಪ್ರಿನ್ಸಿಪಾಲರು ಫೋನೆತ್ತಿದ್ದರು. ಏಕವಚನದಲ್ಲಿ

ದೇಶಪಾಂಡೆಯವರೊಡನ ನಡೆದ ಅವರ ಸಂಭಾಷಣೆ ಕೇಳಿ ಆಶ್ಚರ್ಯವಾಯಿತು. ಒಂದೆರಡು ನಿಮಿಷಗಳಲ್ಲಿ ಪ್ರಿನ್ಸಿಪಾಲರ ಗಂಟಿಕ್ಕಿದ ಮುಖ ತಿಳಿಯಾಗಿತ್ತು. ಫೋನನ್ನು ಕೆಳಗಿಟ್ಟು "ದೇಶಪಾಂಡೆಯವರು ನನ್ನ ಸಹಪಾಠಿ" ಎಂದು ಆಶ್ಚರ್ಯಚಕಿತನಾದ ನನಗೆ ತಿಳಿಸಿ, "ನಿಮ್ಮನ್ನು ನಿಜಕ್ಕೂ ಅಭಿನಂದಿಸಬೇಕಾಗಿತ್ತು. ಬದಲಾಗಿ ಹಾಸ್ಟೆಲ್ ಬಿಟ್ಟು ಹೋಗಲು ತಿಳಿಸಿದೆ. ಒಂದೇ ಪಕ್ಷವನ್ನು ಕೇಳಿದ್ದರೆ ನಿಮಗೆ ಅನ್ಯಾಯವಾಗುತ್ತಿತ್ತು" ಎನ್ನುತ್ತ ಕರೆಗಂಟೆಯನ್ನು ಒತ್ತಿದರು. ಬಂದ ಸಿಪಾಯಿಗೆ ವಾರ್ಡನ್ನರನ್ನು ಕರೆಯುವಂತೆ ಹೇಳಿ ನನಗೆ ಕುಳಿತುಕೊಳ್ಳಲು ಹೇಳಿದರು.

ಲಗುಬಗೆಯಿಂದ ಒಳಗೆ ಹೊಕ್ಕ ವಾರ್ಡನ್ನರು ನನ್ನನ್ನು ನೋಡಿ ಪೆಚ್ಚಾದರು. ಪ್ರಿನ್ಸಿಪಾಲರ ಗಂಭೀರ ಮುಖ ನೋಡಿ ಏನೋ ಅನಾಹುತವಾಗಿದೆಯೆಂದು ಅವರಿಗೆ ತಿಳಿದಿರಬೇಕು.

"ನೀವು ರಿಪೋರ್ಟಿನಲ್ಲಿ ಕಾಣಿಸಿದ ಘಟನೆಗಳು ನೀವು ಕಣ್ಣಾರೆ ಕಂಡವೋ ಅಥವಾ ಇನ್ನೊಬ್ಬರಿಂದ ಕೇಳಿ ಸಮೂದಿಸಿದವೋ?" ಪ್ರಿನ್ಸಿಪಾಲರ ಗುಡುಗು.

"ಹಾಗಲ್ಲ ಸರ್" ಹಾಸ್ಟೆಲಿನ ವಿದ್ಯಾರ್ಥಿಗಳೇ ಕಣ್ಣಾರೆ ಕಂಡು ನನಗೆ ದೂರು ಕೊಟ್ಟರು. ಬೇಕಾದರೆ ಅವರನ್ನೇ ಇಲ್ಲಿ ಕರೆಸುತ್ತೇನೆ. ತಮಗೇಕೋ ನನ್ನಲ್ಲಿ ಅಪನಂಬಿಕೆಯಾದಂತಿದೆ. ಆದರೆ ದಯವಿಟ್ಟು ಈ ಖಿಲಾಡಿಯನ್ನು, ನಂಬಬೇಡಿರಿ! ಎಂದರು.

"ನೋಡಿ ನಿಮ್ಮ ವಯಸ್ಸಿಗೆ ನಾನು ಗೌರವ ಕೊಡುತ್ತೇನೆ. ಅದರರ್ಥ ನಿಮ್ಮ ಕೃತಿಗಳನ್ನೆಲ್ಲ ನಾನು ಅನುಮೋದಿಸುತ್ತೇನೆಂದಲ್ಲ ಇದೀಗ ದೇಶಪಾಂಡೆಯವರೊಡನೆ ಫೋನಿನ ಮೇಲೆ ವಿಚಾರಿಸಿದೆ. ನಿಜ ಸಂಗತಿ ನನಗೆ ತಿಳದಿದೆ. ಅರುಣ ಬುದ್ಧಿವಂತನಷ್ಟೆ ಹುಡುಗನಲ್ಲ. ಹೊಣೆಗಾರ ವಿದ್ಯಾರ್ಥಿಯೂ ಹೌದು. ಅವನಂತಹ ವಿದ್ಯಾರ್ಥಿಯನ್ನು ತರಬೇತುಗೊಳಿಸಿದ್ದಕ್ಕೆ ದೇಶಪಾಂಡೆಯವರು ನನ್ನನ್ನು, ನಿಮ್ಮನ್ನೂ ಕೂಡಿಯೇ ಅಭಿನಂದಿಸಿದ್ದಾರೆ! ನಿಮ್ಮಿಂದ ಅರುಣನಿಗೆ ಅನ್ಯಾಯವಾಗಿದೆ. ಆದ್ದರಿಂದ ನೀವು ಅವನ ಕ್ಷಮೆ ಕೇಳುವದು ಒಳ್ಳೆಯದು" ಎಂದು ಹೇಳುತ್ತಿದ್ದಾಗಲೇ ನಾನು ಮುಖ ತಗ್ಗಿಸಿ ಅಲ್ಲಿಂದ ಹೊರಟೆ. ವಾರ್ಡನ್ನರಿಗೆ ಬಿಕ್ಕಟ್ಟಿನ ಪ್ರಸಂಗ ತಪ್ಪಿಸಿದ್ದರಿಂದ ಅವರಿಗೂ ನನ್ನ ಬಗ್ಗೆ ಅಭಿಮಾನವೆನಿಸಿರಬೇಕು. ಅಂದಿನಿಂದ ಅವರು ನನ್ನ ಹಿತಚಿಂತಕರಲ್ಲಿ ಒಬ್ಬರಾದರು ವಿದ್ಯಾರ್ಥಿಗಳೂ ನಮ್ಮ ಪಕ್ಷಕ್ಕೆ ನಮ್ಮನ್ನು ಇರಗೊಡುವಂತಾಯಿತು. ಒಬ್ಬಿಬ್ಬರು "ನಮ್ಮ ಪ್ರಿನ್ಸಿಪಾಲರೇ ಆಶಾ-ಅರುಣರಿಗೆ ಆತ್ಮೀಯತೆಯ ಲಾಯಸೆನ್ಸ ಕೊಟ್ಟಾಗ ನಾವೇನು ಮಾಡಲಾಗುತ್ತಿದೆ?" ಎಂದು ತೆಪ್ಪಗಾದರು. ನಾವಿಬ್ಬರೂ

ಅಂದಿನಿಂದ ನಿಶ್ಚಿಂತರಾಗಿ ಸಾಕಷ್ಟು ಮಾತುಕತೆಯಾಡಿ ಓಡಾಡಿಕೊಂಡಿರುವಂತಾಯಿತು.

ಒಮ್ಮೆ ಕಾಲೇಜ ಮುಗಿದ ನಂತರ ಇಬ್ಬರೂ ನಡೆಯುತ್ತ ಹೋಗಿ ಹೋಟೇಲೊಂದರಲ್ಲಿ ಕುಳಿತಿದ್ದೆವು. ಬಿಸಿಬಿಸಿ ಸಾಮೋಸ, ಚಹಗಳೊಂದಿಗೆ ಹರಟೆ ನಿರಾತಂಕವಾಗಿ ಸಾಗಿತ್ತು. ಆಶಾ ರೇಡಿಯೋಗ್ರಾಮದ ತಮಾಷೆ ನೆನೆಯುತ್ತ ಇದ್ದಕ್ಕಿದ್ದ ಹಾಗೆ, "ಅಂದ ಹಾಗೆ ಮರೆತೇ ಹೋಯಿತು. ನಿಮ್ಮೊಡನೆ ಇದ್ದಾಗ, ಎಲ್ಲವನ್ನು ಮರೆಯುತ್ತೇನೆ. ತಂದೆಯವರು ನಿಮಗೆ ನಾಳೆ ರವಿವಾರ ಊಟಕ್ಕೆ ಆಮಂತ್ರಣ ಕೊಟ್ಟಿದ್ದರಲ್ಲವೇ? ಅಕಸ್ಮತ್ತಾಗಿ ಅವರ ಸಹೋದ್ಯೋಗಿಗಳೊಬ್ಬರು ವರ್ಗವಾಗಿ ಹೋಗುತ್ತಾರಂತೆ, ಹೀಗಾಗಿ ನಾಳೆ ಅವರಿಗೆ ಮನೆಯಲ್ಲಿ ಔತಣವಿದೆ. ನಿಮ್ಮನ್ನು ಮುಂದಿನ ರವಿವಾರ ಬರುವಂತೆ ಬಾಬಾ ತಿಳಿಸಿದ್ದಾರೆ. ಬಾಬಾರ ಮೇಲೆ ಒಳ್ಳೇ ಛಾಪ ಹಾಕಿರುವಿರಿ. ಮರುದಿನವೆಲ್ಲ ನಿಮ್ಮ ಪ್ರಶಂಸೆ ನಡೆದಿತ್ತು. ಮನೆಯಲ್ಲಿ, ಮಾತಿನ ನಡುವೆ ನೀವು ಯಾವ ಜಾತಿಗೆ ಸೇರಿದವರು ಎಂದು ಬಾಬಾ ಕೇಳಿದರು" ಎಂದಳು.

ನಡುವೆಯೇ ಬಾಯಿಹಾಕಿ "ನೀನೇನು ಹೇಳಿದೆ?" ಎಂದೆ.

"ನನಗೆ ತಿಳಿಯದು. ಹೆಚ್ಚಾಗಿ ಬ್ರಾಹ್ಮಣನಿರಬೇಕು" ಎಂದೆ. ಅದಕ್ಕೆ ಅವರು "ನನಗೂ ಅದೇ ಅನುಮಾನ ಬಂದಿತ್ತು. ಅವನ ಮಾತಿನ ಮೇಲಿನಿಂದ ಸಾರಸ್ವತ ಬ್ರಾಹ್ಮಣನಿರಬೇಕು ಅನಿಸಿತ್ತು" ಅಂದರು. ಅದಕ್ಕೆ ನಾನು ನಮಗೂ ಅವರಿಗೂ ಏನು ಭೇದ? ಎಂದು ಕೇಳಿದೆ. ಮುಖ್ಯ ಭೇದವೆಂದರೆ ನಾವು ವಿಷ್ಣುಭಕ್ತರು. ಅವರು ಸ್ಮಾರ್ತರು. ಹಿಂದಿನ ಕಾಲಕ್ಕೆ ಒಬ್ಬರೊಬ್ಬರಲ್ಲಿ ಜಲಸೇವನೆ ಕೂಡ ನಡೆಯುತ್ತಿರಲಿಲ್ಲ. ಈಗ ಭೇದಗಳೆಲ್ಲ ಮಾಯವಾಗತೊಡಗಿವೆ. ಈಗ ನಮ್ಮ ಅವರ ಮಠಾಧೀಶರು ಕೂಡಿ ಒಂದು ಹೇಳಿಕೆ ಹೊರಡಿಸಿ, ಈ ಒಳಭೇದಗಳೆಲ್ಲ ಹೋಗಬೇಕು; ಕೊಂಕಣೀ ಬ್ರಾಹ್ಮಣರೆಲ್ಲ ಒಂದೇ ಎಂದು ಪರಿಗಣನೆಯಾಗಬೇಕು. ಮದುವೆಗಳೂ ಕೂಡ ನಡೆಯಬೇಕು ಎಂದು ಅಪ್ಪಣೆ ಕೊಡಿಸಿದ್ದಾರೆ ಎಂದು ನನ್ನ ಕಡೆಗೆ ನೋಡಿ ಅರ್ಥಪೂರ್ಣವಾಗಿ ನಕ್ಕರು.

"ಆಶಾ, ನಾನು ಬ್ರಾಹ್ಮಣನೆಂದು ನೀನು ನಂಬಿದ್ದೀಯಾ?"

"ಅಲ್ಲವೇ ಮತ್ತೆ? ಯಾವ ಜಾತಿಯಾದರೇನು? ನನಗೆ ಜಾತಿಯಲ್ಲಿ ವಿಶ್ವಾಸವಿಲ್ಲ."

"ನನ್ನ ಪರಿಚಯದವರೆಲ್ಲ ನಾನು ಬ್ರಾಹ್ಮಣನೆಂದೇ ಮೋಸ ಹೋಗುತ್ತಾರೆ. ನಾನು ಚಿಕ್ಕಂದಿನಲ್ಲಿ ಸಾರಸ್ವತ, ಗೌಡಸಾರಸ್ವತ ಹುಡುಗರೊಂದಿಗೇ ಓದಿ, ಆಟವಾಡಿ

ಬೆಳೆದೆ. ಅವರ ಆಚಾರ, ವಿಚಾರ, ಮಾತು ತಾನಾಗಿಯೇ ಕೈಗೂಡಿದವು. ನಾನು ವೈಶ್ಯರ ಸಮಾಜಕ್ಕೆ ಸೇರಿದವನೆಂದರೆ ನಂಬುತ್ತೀಯಷ್ಟೆ? ಸೇತರ ಸಮಾಜಕ್ಕೆ ಸೇರಿದರೂ ಕೈಯಲ್ಲಿ ಕಿವುಡು ಕಾಸಿಲ್ಲ ಅಷ್ಟೇ" ಎಂದು ಹೇಳಿ ಪ್ರತಿಕ್ರಿಯೆಗಾಗಿ ಕಾದೆ.

ಆಶಾ ಮೌನವಾಗಿದ್ದಳು.

"ಏನು ಆಶಾ? ಸುಮ್ಮನಾದೆ? ನನ್ನ ಜಾತಿಯ ಬಗ್ಗೆ ಹೇಳಿ ಬೇಸರವಾಯಿತೇ?"

"ಇಲ್ಲರೀ. ನನಗೆಲ್ಲ ಈ ಜಾತಿಯ ವಿಚಾರ ತಲೆಗ ಹೋಗುವದೇ ಇಲ್ಲ. ಅಂದ ಮೇಲೆ ಬೇಸರದ ಮಾತೇಕೆ ಬಂದೀತು" ಎಂದು ಮಾಣಿಗೆ ಬಿಲ್ ಮತ್ತು ಟಿಪ್ಸ ತಾನೇ ಕೊಟ್ಟಳು. ಇಬ್ಬರೂ ಹೋಟೆಲಿನಿಂದ ಹೊರಬಿದ್ದೆವು. ಈ ಮಾತು ಅವಳ ತಂದೆಗೆ ಮುಟ್ಟಿರಲು ಸಾಕು. ಅನಂತರ ಊಟದ ಆಮಂತ್ರಣ ತಿರುಗಿ ಬರಲೇ ಇಲ್ಲ.

* * *

ಇಷ್ಟೆಲ್ಲ ಹಿಂದಿನ ನೆನಪುಗಳು ಕ್ರಮವಾಗಿ ಅರುಣನ ಕಣ್ಣೆದುರು ಸುಳಿದು ಹೋದವು. ದಣಿದ ಮೈ-ಮನಸ್ಸುಗಳು ನಿದ್ರಾಧೀನವಾದವು. ಮರುದಿನ ಬೆಳಿಗ್ಗೆ ಮಾಣಿ ಕೋಣೆಯ ಕದ ತಟ್ಟಿದಾಗಲೇ ಎಚ್ಚರ. ಎರಡು ದಿನಗಳಾಗಲೇ ಕಳೆದು ಹೋಗಿದ್ದರಿಂದ ಅವನಿಗೆ ಆನಂದವಾಗಿತ್ತು. ಆದರೆ ಲಂಡನ ಮುಟ್ಟಲು ಇನ್ನೂ ಹನ್ನೆರಡು ದಿನಗಳಿವೆ! ಎಂದು ಯೋಚಿಸಿದಾಗ ಇಷ್ಟೆಲ್ಲ ದಿನಗಳನ್ನು ಹೇಗೆ ಕಳೆಯುವದೆಂದು ತೋಚದಾಯಿತು.

೩

ಮಾಣಿ ತಂದುಕೊಟ್ಟ ಟೋಸ್ಟ್ ತಿಂದು ಕಾಫಿ ಕುಡಿದಾಯಿತು. ನಿರುದ್ಯೋಗಿ ಮನಸ್ಸು ಮತ್ತೆ ಮತ್ತೆ ಹಿಂದಕ್ಕೆ ಓಡುತ್ತದೆಂದು ಏನಾದರೂ ಕೆಲಸದಲ್ಲಿ ತೊಡಗಲು ನಿರ್ಧರಿಸಿದ ಅರುಣ. ಸೂಟಕೇಸ ಒಂದನ್ನೆಳೆದು ಕ್ಷೌರದ ಸಾಮಾನು ಹೊರತೆಗೆದ. ಸಂಗಡ ಎಲ್ಲಿಂದಲೋ ಒಂದು ಪೆನ್ಸಿಲ್ ಹೊರಬಂದಿತು. ಇದೆಲ್ಲಿಯ ಪೀಡೆ ಎಂದು ಗೊಣಗುತ್ತ ತಿರುಗಿ ಒಗೆದಾಗ ಅದರ ಮೇಲೆ ಸ್ಪಷ್ಟವಾಗಿ ಬರೆದ 'ಆಶಾಳ ನೆನಪಿಗೆ' ಎಂಬ ಅಕ್ಷರಗಳು ಕಾಣಿಸಿದವು. "ಕಳೆದ ನಾಲ್ಕು ವರ್ಷಗಳಿಂದ ಆಶಾಳ ನೆನಪಿಗೆ ಹೋದಲ್ಲೆಲ್ಲ ತೆಗೆದುಕೊಂಡು ಹೋಗಿ ಅಕ್ಕರೆಯಿಂದ ಕಾಯ್ದಿಟ್ಟಿದ್ದೆ. ಇಂದು ಅದೇ ಪೆನ್ಸಿಲ್ ಅಣಕವಾಡುತ್ತಿದೆ. ಅಂದು ವಿದೇಶಕ್ಕೆ ಹೊರಟು ನಿಂತಾಗ ಎಲ್ಲವನ್ನು ಬಿಟ್ಟು ಆಶಾ ಪೆನ್ಸಿಲ್ ಕೊಡುವದರಲ್ಲೂ ವಿಶೇಷ ಸಂಕೇತವಿತ್ತು; ಒಮ್ಮೆ ಪ್ರಯೋಗದ ನಕ್ಷೆ

ತೆಗೆಯಲು ಅವಳಿಂದ ಪೆನ್ಸಿಲ್ ತೆಗೆದುಕೊಹಡಿದ್ದೆ. ಅದರ ಮೇಲೆ "ಆಶಾ ದೇಶಪಾಂಡೆ" ಎಂದು ಸುಂದರವಾಗಿ ಕೊರೆದಿತ್ತು. ಹೀಗೇಕೆ ಎಂದು ಕೇಳಲಾಗಿ 'ಪೆನ್ಸಿಲ್ ಎಷ್ಟೊಂದು ಕಳಕೊಳ್ಳುತ್ತೇನೆ ಎನ್ನುವದು ನನಗೇ ತಿಳಿಯದು. ಇದಕ್ಕೆ ಕಾರಣ ನನ್ನ ಮರೆವು ಅಲ್ಲ ಮತ್ತೆ! ಆದರೆ ಅದನ್ನು ತೆಗೆದುಕೊಂಡವರು ಜಾಗ್ರತೆಯಿಂದ ತಮ್ಮ ಕಿಸೆಯಲ್ಲೊ, ಪರ್ಸಿನಲ್ಲೊ ಇಳಿ ಬಿಡುವಷ್ಟು ಚತುರರರು! ಕೊಟ್ಟ ಪೆನ್ಸಿಲ್ ತಿರುಗಿ ಬಂದದ್ದು ನನಗೆ ಈವರೆಗೆ ನೆನಪಿಲ್ಲ; ಆದ್ದರಿಂದ ದೊಡ್ಡದಾಗಿ ಹೆಸರು ಕೊರೆದರೆ ಯಾರೂ ಇಟ್ಟುಕೊಳ್ಳುವುದಿಲ್ಲವೆಂದು ಈ ಉಪಾಯ ಕೈಕೊಂಡಿದ್ದೇನೆ' ಎಂದಳು. ಈ ಪೆನಸಿಲ್ ನಾನು ಇಟ್ಟುಕೊಳ್ಳಬಹುದೇ ಎಂದಾಗ 'ಊಹೂಂ! ಹುಡುಗರು ಹುಡುಗಿಯ ಹೆಸರು ಇದ್ದ ಪೆನ್ಸಿಲ್ ಇಟ್ಟುಕೊಳ್ಳುತ್ತಾರೆಯೇ? ಎಂದು ಪರೋಕ್ಷವಾಗಿ ಕೊಡುವದನ್ನು ನಿರಾಕರಿಸಿದ್ದಳು. ನಮ್ಮ ಸ್ನೇಹ ಬೆಳೆದಂತೆ ಆಗಾಗ ಈ ಪೆನ್ಸಿಲ್ನ ಸುದ್ದಿ ಬರುತ್ತಿತ್ತು. ಆದರೆ ತಪ್ಪಿ ಕೂಡಾ ನಾನು ಮತ್ತೆ ಆ ಪೆನ್ಸಿಲ್ ಮುಟ್ಟಿರಲಿಲ್ಲ.'

"ಹೋ! ಕ್ಷೌರ ಮಾಡಿಕೊಳ್ಳುವುದನ್ನು ಮರೆತು ಆಶಾಳ ಧ್ಯಾನದಲ್ಲಿ ಮಗ್ನನಾಗಿ ಬಿಟ್ಟೆನಲ್ಲ" ಎಂದು ನಿದ್ರೆಯಿಂದ ಎಚ್ಚತ್ತವನಂತೆ ಕನ್ನಡಿಯೆದುರು ನಿಂತು ಕ್ಷೌರಕ್ಕೆ ಆರಂಭಿಸಿದ. ಹಡಗದ ಕೆಬಿನ್ನಿನ ಕನ್ನಡಿ ದೊಡ್ಡದಾಗಿ ಶುಭ್ರವಾಗಿ ಅಂದವಾಗಿತ್ತು. ಕನ್ನಡಿಯಲ್ಲಿ ತನ್ನನ್ನು ನೋಡಿಕೊಳ್ಳುತ್ತಿದ್ದಂತೆ ಇನ್ನೊಂದು ದೃಶ್ಯ ನೆನಪಾಯಿತು...... ಅಂದು ಪ್ರಾಧ್ಯಾಪಕರು ಕ್ಲಾಸು ತೆಗೆದುಕೊಳ್ಳುವುದಿಲ್ಲವೆಂದು ತಿಳಿಸಿದ್ದರು. ಸರಿ ಹೊರಟೆವು. ಇಬ್ಬರೂ ಮದ್ರಾಸ ಹೋಟಲಿಗೆ. ಅಲ್ಲಿ ಇಬ್ಬರೂ ಕುಳಿತ ಮೇಜಿನ ಎದುರಿಗೇ ದೊಡ್ಡ ಕನ್ನಡಿಯಿತ್ತು. ನಾನು ಅದನ್ನು ತೋರಿಸಿ ನಿನ್ನ ಸೀರೆ ನಿನಗೆ ಎಷ್ಟು ಚೆನ್ನಾಗಿ ಒಪ್ಪುತ್ತದೆ ನೋಡು! ಎಂದಾಗ ತನ್ನನ್ನು ಕನ್ನಡಿಯಲ್ಲಿ ನೋಡಿಕೊಂಡು ಸಂತೋಷಪಟ್ಟುಕೊಂಡಿದ್ದಳು ಆಶಾ. ಇಡ್ಲಿ, ಕಾಫಿ ಮುಗಿಸಿ ಹೊರಡಲು ನಿಂತಾಗ, 'ಅಲ್ಲರ್ರಿ ನೀವು ನನಗಿಂತ ಎಷ್ಟು ಉದ್ದ ಇದ್ದೀರಿ!' ಎಂದಳು. "ಕಡಿಮೆಯೆಂದರೆ ಒಂದು ಫೂಟು ಎಂದಾಗ ಆರು ಇಂಚಿಗಿಂತ ಹೆಚ್ಚು ಇಲ್ಲವೇ ಇಲ್ಲವೆಂದು ಹಟ ತೊಟ್ಟಳು. ಮಾಣಿ ಬಿಲ್ ಪಡೆದು ಹೊರಟುಹೋದ ಮೇಲೆ ನನ್ನ ಕೈಹಿಡಿದು ಕನ್ನಡಿ ಎದುರು ನಿಲ್ಲಿಸಿ ಪಕ್ಕದಲ್ಲಿ ನಿಂತುಕೊಂಡು ನೋಡೆಂದಳು. ನಾನು, "ಹಾಗೆ ನಿಂತರೆ ತಿಳಿಯದು ಎಂದು ನನ್ನ ತಲೆಯನ್ನು ಅವಳ ತಲೆಗೆ ಮೆಲ್ಲಗೆ ಅಪ್ಪಳಿಸಿದ್ದೆ. ಅವಳು ಸಂಕೋಚದಿಂದ ಸರಿದು ನಿಂತು "ನೀವೊಂದು! ಎಲ್ಲ ಹೊತ್ತಿನಲ್ಲಿಯೂ ತಮಾಷೆ ಮಾಡುತ್ತೀರಿ! ಯಾರಾದರೂ ನೋಡಿದರೆ" ಎಂದು ರಾಗ ಎಳೆದಿದ್ದಳು.

ಕಾಫಿ ಕುಡಿಯುತ್ತಿದ್ದಂತೆ ಆಶಾ ಕೇಳಿದ್ದಳು.

"ದೀಪಾವಳಿ ಸೂಟಿಗೆ ಊರಿಗೆ ಹೋಗುತ್ತೀರಾ?" ಹೋಗುವದು ಬೇಡ ಎಂಬ ಭಾವವಿತ್ತು. "ತಂದೆಯವರು ಬಹಳ ದಿನಗಳಿಂದ ಈ ರಜೆಗಾಗಿ ಕಾಯುತ್ತಿದ್ದಾರೆ

ಹೋಗಲೇಬೇಕು" ಎಂದಾಗ ಅವಳಿಗೆ ನಿರಾಶೆಯಾಯಾಗಿತ್ತು. 'ಹೋದರೂ ಬೇಗ ಬರಬಹುದಲ್ಲ? ಮೂರು ವಾರಗಳನ್ನು ಹೇಗೆ ಕಳೆಯುವದು?' ಎಂದಳು. "ನೀವಿಲ್ಲದೇ" ಎನ್ನುವ ಶಬ್ದ ಆಕೆ ಸೇರಿಸಿರಲಿಲ್ಲ. ಆದರೆ ಅದು ಸ್ಪಷ್ಟವಿತ್ತು. ನಗುತ್ತ ನಾನೆಂದಿದ್ದೆ. "ಸದಾಕಾಲ ನಿನ್ನೊಟ್ಟಿಗೇ ಇರುತ್ತೇನೆಂದು ನಿಮ್ಮ ತಂದೆಯವರಿಗೆ ಕರಾರು ಬರೆದು ಕೊಟ್ಟಿದ್ದೇನೆಯೇ? ನಿನಗೆ ಅಷ್ಟೊಂದು ಬೇಸರ ಬರುವಂತಿದ್ದರೆ ನೀನೂ ಹೊರಡು ನಿಮ್ಮ ಹಿರಿಯರ ಊರು, ನಮ್ಮ ಊರು ಎಲ್ಲ ತೋರಿಸಿಕೊಂಡು ಬರುತ್ತೇನೆ."

"ಹೊರಡುವದು ಅಷ್ಟು ಸುಲಭವಾಗಿದ್ದರೆ ನೀವು ಹೇಳುವ ಮೊದಲೇ ಹೊರಟು ಬಿಡುತ್ತಿದ್ದೆ. ಹೆಣ್ಣು ಜನ್ಮ ಎಷ್ಟೊಂದು ಪರಾಧೀನವಾಗಿದೆ....! ಹೋಗಲಿ ನಾನು ಪತ್ರ ಬರೆದರೆ ಉತ್ತರವನ್ನಾದರೂ ಬರೆಯುತ್ತೀರಾ?"

"ನನ್ನ ಪತ್ರ ನಿಮ್ಮ ತಂದೆಯವರ ಕೈಯಲ್ಲಿ ಸಿಕ್ಕರೆ ನನಗೂ-ನಿನಗೂ ಕೂಡಿಯೇ ಜೈಲುವಾಸವಾದೀತು!"

"ಹಾಗಾದರೆ ಹೀಗೆ ಮಾಡಿ. ನಿಮ್ಮ ಗೆಳೆಯ, ಸುಂದರ ನಾಡಕರ್ಣಿ ರೇಲ್ವೆಯಲ್ಲಿ ಇದ್ದಾನಲ್ಲವೇ? ಅವನ ಅಡ್ರೆಸ್ಸಿಗೆ ಪತ್ರ ಬರೆಯಿರಿ. ಅವನು ಅದೇ ಆಫೀಸಿನಲ್ಲಿರುವ ನನ್ನ ಗೆಳತಿ ಪ್ರಭಾಳಿಗೆ ಕೊಡುತ್ತಾನೆ. ಅವಳು ನನಗೆ ತಪ್ಪದೇ ಮುಟ್ಟಿಸುತ್ತಾಳೆ" ಎಂದು ಮೊದಲೇ ಯೋಚಿಸಿಬಿಟ್ಟ ಏರ್ಪಾಡಿನ ಬಗ್ಗೆ ಹೇಳಿದಳು.

"ಹತ್ತಾರು ಕೈಗಳಿಂದ ಪತ್ರ ಹಾದು ಹೋಗುವ ಈ ಏರ್ಪಾಡು ಕೇಳಿದರೆ ಪತ್ರ ಬರೆಯುವುದಕ್ಕಿಂತ ಸುಮ್ಮನಿರುವುದೇ ವಾಸಿಯೆಂದು ತೋರುತ್ತದೆ."

"ದಮ್ಮಯ್ಯ! ಹಾಗೆ ಮಾಡಬೇಡಿ" ಎಂದು ಬಲವಂತವಾಗಿ ನನ್ನನ್ನು ಒಪ್ಪಿಸಿದ್ದಳು.

ಆಶಾ ಮಾತಿಗಿಂತ, ಪತ್ರಗಳನ್ನು ಹೆಚ್ಚು ಸ್ವಾರಸ್ಯವಾಗಿ ಬರೆಯುತ್ತಾಳೆಂದು ದೀಪಾವಳಿ ರಜೆಗೆ ಊರಿಗೆ ಹೋದಾಗ ಗೊತ್ತಾಯಿತು. ಪತ್ರಗಳು ಹೆಚ್ಚಿನ ಆತ್ಮೀಯತೆ, ಕಳಕಳಿಯಿಂದ ತುಂಬಿರುತ್ತಿದ್ದವು. ಏನೂ ಮುಚ್ಚು ಮರೆಯಿಲ್ಲದೇ ತನ್ನ ಭಾವನೆಗಳನ್ನು ಬರೆಯುತ್ತಿದ್ದಳು. ಪತ್ರಗಳಿಂದ ಕ್ರಮೇಣ ಆಶಾ ನನ್ನನ್ನು ಗೆಲ್ಲುತ್ತ ಬಂದಳು. ನನ್ನ ಮಾರುದ್ದ ಪತ್ರ ಅವಳಿಗೆ ಮುಟ್ಟಲು ಐದು ನಿಮಿಷ ತಡವಾದರೂ ಚಡಪಡಿಸುತ್ತಿದ್ದಳಂತೆ. ಅಂತೆಯೇ ಪ್ರಭಾ ಪ್ರತಿ ಸಾರೆಯೂ ನನ್ನ ಪತ್ರಗಳನ್ನು ಬಹಳ ಕಾಡಿಸಿ ಕಾಡಿಸಿ ಕೊಡುತ್ತಿದ್ದಳಂತೆ!

ತನಗಿಲ್ಲದ ಸುಖವನ್ನು ಆಶಾ ಪಡೆಯುತ್ತಿದ್ದಾಳಲ್ಲ! ಎಂದು ಆಕೆ ಅಸೂಯೆ ಪಟ್ಟದ್ದೂ ಉಂಟೆಂತೆ. ದೀಪಾವಳಿ ಸೂಟಿಯ ಕೊನೆಯ ಪತ್ರದಲ್ಲಿ ಒಂದು

ದಿನವಾದರೂ ಮೊದಲು ಬರುವಂತೆ ಪ್ರಾರ್ಥಿಸಿ ಆಶಾ ಬರೆದಿದ್ದಳು. ತನ್ನ ಕಾಲೇಜು ಪ್ರಾರಂಭವಾಗುವ ಮೊದಲೇ ಬಾಬಾ-ಆಯಿ ಕಲ್ಯಾಣಕ್ಕೆ ಹೋಗುವವರಿದ್ದಾರೆ ಸುನಂದಕ್ಕಳ ಮನೆಗೆ. ರವಿವಾರ ಬೆಳಿಗ್ಗೆ ಹೋಗಿ ರಾತ್ರಿ ಬರಬಹುದು. ಆದ್ದರಿಂದ ನೀವು ಶನಿವಾರ ಇಲ್ಲಿ ಬಂದು ಮುಟ್ಟಿದರೆ ರವಿವಾರ ಜೊತೆಯಾಗಿ ಕಳೆಯುಬಹದೆಂದೂ ತಿಳಿಸಿದ್ದಳು. ನನಗಾವ ಅಡ್ಡಿಯಿಲ್ಲದ್ದರಿಂದ ಒಂದು ದಿನ ಮುಂಚಿತವಾಗಿಯೇ ಊರನ್ನು ಬಿಟ್ಟಿದ್ದೆ. ಸಂಗಡ ನೆರಮನೆಯ ಯುಮುನಕ್ಕಳ ಮೊಮ್ಮಗಳು, ತಾರಾಳನ್ನು ಮುಂಬೈಗೆ ಕರೆದೊಯ್ಯಬೇಕಾಗಿತ್ತು. ಮುಂಬೈ ತಲುಪಿದ ಮೇಲೆ ಆಶಾಳನ್ನು ಭೆಟ್ಟಿಯಾಗಿದ್ದೆ. ಪ್ರವಾಸದ ಬಗ್ಗೆ ಆಕೆ ಕೇಳಿದಾಗ ನನ್ನೊಟ್ಟಿಗೆ ತಾರಾ ಇದ್ದಳೆಂದಿದ್ದೆ. ತಾರಾಳ ಬಗ್ಗೆ ನೂರಾರು ಪ್ರಶ್ನೆಗಳ ಬಿರು ಗಾಳಿಯನ್ನೇ ಬೀಸಿದ್ದಾಳು ಆಶಾ.

"ಆಶಾ, ಹೆಣ್ಣಿನ ಅಸೂಯೆಯೇ! ತಾರಾ ಎಂದ ಕೂಡಲೇ ಯಾರೋ ಮದುವೆಗೆ ಬೆಳೆದ ಹುಡುಗಿಯೆಂದುಕೊಂಡಿರಬೇಕು ನೀನು. ಆದರೆ ಈಕೆ ಇಲ್ಲಿಯ ಶ್ರೀನಿವಾಸ ಪ್ರಭುಗಳ ಮಗಳ ಮನೆಯಲ್ಲಿ ಮಗುವನ್ನು ಆಡಿಸುವ ಹುಡುಗಿ" ಎಂದಾಗ ಬಿದ್ದು ಬಿದ್ದು ನಕ್ಕಿದ್ದಳು.

ಅಂದು ಆಶಾ ಮೊದಲೇ ತಿಳಿಸಿದಂತೆ ಊಟ ಕಟ್ಟಿಕೊಂಡು ಬಂದಿದ್ದಳು. ಇಬ್ಬರೂ ಕೂಡಿ ಮಲಬಾರಹಿಲ್ಲಿಗೆ ಹೋದೆವು. ಅಲ್ಲಿ ಇಲ್ಲಿ ಓಡಾಡಿ ಸಾಕಷ್ಟು ದಣಿದ ಮೇಲೆ ಶಾಂತವಾದ ಸ್ಥಳವನ್ನು ಹುಡುಕಿ ಮರೀನ ಡ್ರಾಯವ್ಹದ ಕಡಲು ಭಾಗ ಕಾಣುವಲ್ಲಿ ಹೋಗಿ ಕುಳಿತಿದ್ದೆವು.

"ನಾನು ಎಷ್ಟು ಸಲ ಇಲ್ಲಿ ಬಂದಿದ್ದೇನೋ ಏನೋ! ಆದರೆ ನಿಮ್ಮೊಡನೆ ಇಲ್ಲಿ ಬಂದಾಗ ಪ್ರತಿಯೊಂದೂ ಜೀವಕಳೆಯಿಂದ ತುಂಬಿದಂತೆ ಕಾಣುತ್ತದೆ. ನಿಮ್ಮ ಮಾತು-ನಗೆಯಿಂದ ಹೂ, ಗಿಡ, ಈ ಬಂಡೆ, ಮರ, ಈ ಚರಾಚರ ವಸ್ತುಗಳೂ ಸಚೇತವಾಗುವವೆಂದು ತೋರುತ್ತದೆ" ಎಂದಳು.

"ಆಶಾ ಬರಬರುತ್ತ ಕವಿಯಾಗತೊಡಗಿದೆ! ಒಮ್ಮೆ ನನಗೂ ಕವಿ-ಕಲಾಕಾರನಾಗುವ ಹಂಬಲವಿತ್ತು, ಆದರೆ ನಮ್ಮ ದೇಶದಲ್ಲಿ ಕವಿ-ಕಲಾಕಾರರು ನಡೆಸುವ ಜೀವನ ನೋಡಿ ಹಿಂಜರಿದೆ!"

"ನಮ್ಮ ಬಿ.ಎಸ್.ಸಿ. ಪರೀಕ್ಷೆ ಹತ್ತಿರ ಬರುತ್ತಿದೆ. ಅದಾದನಂತರ ಮುಂದೇನೆಂಬ" ವಿಚಾರ ಇಷ್ಟರಲ್ಲಿ ನೀವು ಮಾಡಿರಬೇಕು. ಎಂ.ಎಸ್‌ಸಿ. ಮಾಡುವಿರಾ?

"ಯಾಕೆ? ನಾನು ಎಂ.ಎಸ್.ಸಿ. ಮಾಡುವುದಾದರೆ ನಿಮ್ಮ ತಂದೆ ನಿನಗೆ ಎಂ.ಎಸ್.ಸಿ. ಮಾಡಲು ಬಿಡುವದಿಲ್ಲವೇನು?"

"ಯಾಕೆ ಸುಮ್ಮನೆ ನಮ್ಮಪ್ಪನ್ನ ನಡುವೆ ತರುತ್ತೀರಿ?"

"ನೋಡು ನಿಜವನ್ನು ಹೇಳಬೇಕೆಂದರೆ-ನಾನಿನ್ನೂ ನಿರ್ಧರಿಸಿಲ್ಲ. ಆದರೆ ಉತ್ತಮ ನಂಬರ ಬಂದು ಪಾಸಾದರೆ ವಿದೇಶಕ್ಕೆ ಹೋಗುವುದೆಂಬುದು ಇತ್ತೀಚಿನ ವಿಚಾರ. ಇಲ್ಲಿಯೇ ಎಂ.ಎಸ್.ಸಿ. ಮಾಡಿದರೆ ನಮ್ಮ ದೇಶದಲ್ಲಿ ಯಾವ ಮಹತ್ವವೂ ಇಲ್ಲ. ಪ್ರತಿಯೊಂದಕ್ಕೂ ವಿದೇಶದ "ಛಾಪ್" ಬಿದ್ದಾಗಲೇ ವ್ಯಕ್ತಿಗೂ-ವಸ್ತುವಿಗೂ ಕಿಮ್ಮತ್ತು."

"ನಿಜಕ್ಕೂ ವಿದೇಶಕ್ಕೆ ಹೋಗುವಿರಾ?"

"ಯಾಕೆ ಅಷ್ಟೊಂದು ಕಣ್ಣು ಅರಳಿಸಿ ಕೇಳುತ್ತಿರುವಿ? ನಾನು ವಿದೇಶಕ್ಕೆ ಹೋದರೇನೇ ಹೆಚ್ಚು ಬೆಲೆಯಲ್ಲವೇ?"

"ನೀವು ಎಲ್ಲೇ ಹೋದರೂ, ಏನೇ ಮಾಡಿದರೂ ನನಗೆ ದೊಡ್ಡವರೇ! ಮನುಷ್ಯನ ಯೋಗ್ಯತೆಯನ್ನು ಡಿಗ್ರಿಯಿಂದ ಅಳೆಯುವ ಮುರ್ಖಳು ನಾನಲ್ಲ."

"ಹಾಗಾದರೆ ನಾನು ಕಾಲೇಜ ಶಿಕ್ಷಣ ಮುಂದುವರಿಸದೇ ಇದ್ದರೆ ನನ್ನೊಂದಿಗೆ ಇಷ್ಟು ಆತ್ಮೀಯತೆಯಿಂದ ಇರುತ್ತೀಯಾ?"

"ಅದರಲ್ಲಿ ಸಂಶಯವೇನು? ನಾವಿಬ್ಬರೂ ಕಾಲೇಜ ಸೇರುತ್ತಿರದಿದ್ದರೆ, ನಮ್ಮ ಪರಿಚಯ-ಸ್ನೇಹಗಳೇ ಆಗುತ್ತಿರಲಿಲ್ಲ ಆ ಮಾತು ಬಿಡಿ. ಆದರೆ ನೀವು ಕಾಲೇಜ ಸೇರಿದ್ದರಿಂದಲೇ ನಿಮ್ಮ ಯೋಗ್ಯತೆ ಹೆಚ್ಚಾಗಿದೆ ಎಂದು ನಾನು ತಪ್ಪಿ ಕೂಡಾ ಭಾವಿಸಿಲ್ಲ" ಎಂದು ಅಭಿಮಾನದಿಂದ ನನ್ನ ಕಡೆಗೆ ನೋಡಿದ್ದಳು.

"ನಿನ್ನ ನಗುಮುಖ ನೋಡಿ ನೋಡಿ ನನ್ನ ಹೊಟ್ಟೆತುಂಬದು. ತಂದ ಬುತ್ತಿಗಂಟನ್ನು ಬಿಚ್ಚಲ್ಲ" ಎಂದಾಗ ಆಶಾ ಕೂಡಲೇ ಊಟದ ವ್ಯವಸ್ಥೆ ಮಾಡಿದ್ದಳು. ಪಕ್ಕದ ನಲ್ಲಿಯಿಂದ ನೀರು ತರಲು ಹೇಳಿದಳು. ನಾನು ನೀರು ತರುವ ಹೊತ್ತಿಗೆ ನಾಲ್ಕೈದು ಪೇಪರ ಪ್ಲೇಟುಗಳ ಮೇಲೆ ತಂದ ಅಡಿಗೆಯನ್ನು ಮಾಟವಾಗಿ ಬಡಿಸಿಟ್ಟಿದ್ದಳು. ಘಮಘಮಿಸುವ ವಾಂಗಿಭಾತ್, ಬಟಾಟೆ ಪಲ್ಯ. ನನ್ನ ಪ್ರೀತಿಯ ಶ್ರೀಖಂಡ, ಪೂರಿ. ಜೊತೆಗೆ ಕರಾವಳಿಯ ತಿಂಡಿಯಾದ ಹಸಿಕೊಬರಿಯ "ನೆವರಿ"ಗಳು. (ಕರಚೀಕಾಯಿ) ಉಪ್ಪಿನಕಾಯಿ, ಚಟ್ನಿಗಳನ್ನು ತರಲು ಆಶಾ ಮರೆತಿರಲಿಲ್ಲ. ಎಲ್ಲ ಅಡಿಗೆಯನ್ನು ಆಶಾ ತಾನೇ ಮಾಡಿದ್ದಳೆಂಬುದು ಸ್ಪಷ್ಟವಿತ್ತು. ಇಬ್ಬರೂ ಊಟಕ್ಕೆ ಕುಳಿತೆವು. ಹಸಿವಾಗಿದ್ದರಿಂದ ನಾನು ಚೆನ್ನಾಗಿಯೇ ಊಟ

ಮಾಡುತ್ತಲಿದ್ದೆ. ಆದರೆ ಆಶಾಳಿಗೆ ಊಟದ ಕಡೆಗೆ ಲಕ್ಷ್ಯವಿರಲಿಲ್ಲ. ಹಕ್ಕಿಯಂತೆ ಹೆಕ್ಕಿ ಹೆಕ್ಕಿ ತಿನ್ನುತ್ತಿದ್ದಳು. ಅವಳನ್ನು ಮಾತಿಗೆ ಎಳೆಯುವ ಉದ್ದೇಶದಿಂದ ಹೇಳಿದೆ.

"ಆಶಾ, ಏನೋ ವಿಚಿತ್ರ ಕಲ್ಪನೆ ತಲೆಯೆತ್ತಿದೆ. ನಿನಗೆ ಹೇಳಲೋ ಬೇಡವೋ? ಎಂದು ಯೋಚಿಸುತ್ತಿದ್ದೇನೆ."

"ಹೇಳಿ ಬೇಗ. ಹೇಳದಿದ್ದರೆ ನನ್ನಾಣೆಯಿದೆ."

"ನೋಡು ನಾವಿಬ್ಬರೂ ಎಷ್ಟು ಆತ್ಮೀಯತೆಯಿಂದ ಊಟ ಮಾಡುತ್ತ ಕುಳಿತಿದ್ದೇವೆ. ಅನಿರೀಕ್ಷಿತವಾಗಿ ನಿಮ್ಮ ತಂದೆಯವರು ಬಂದು ಬಿಟ್ಟರೆ ಅವರಿಗೆ ಏನೆಂದು ಉತ್ತರ ಕೊಡುವದು?"

ಏನೆಂದು ಹೇಳಬೇಕೆಂದು ಆಶಾಳಿಗೆ ತೋಚಲಿಲ್ಲ. ಕೆಲ ಹೊತ್ತು ಅತ್ತ ಇತ್ತ ನೋಡಿ "ನೀವೇ ಅವರಿಗೆ ಉತ್ತರ ಕೊಡುತ್ತಿದ್ದರಲ್ಲವೇ?" ಎಂದಳು.

"ಅಂದರೆ ನಾನೇ ನಿನ್ನನ್ನು ಮನೆಯಿಂದ ಕರೆದುಕೊಂಡು ಪಂತಿಗೆಂದು ಇಲ್ಲಿ ಬಂದಿದ್ದೇನೆ ಎನ್ನಬೇಕೇ?"

"ಹಾಗಲ್ಲ. ಇದ್ದ ಸಂಗತಿಯನ್ನು ಇದ್ದ ಹಾಗೆ ಹೇಳುವದು."

"ಇದ್ದ ಸಂಗತಿಯಾದರೂ ಏನು ಹೇಳಬಾರದೇ ನೀನು?"

"ನನಗೆ ಗೊತ್ತದ್ದ ಯಾವ ಸಂಗತಿ ತಾನೇ ನಿಮಗೆ ತಿಳಿದಿಲ್ಲ."

"ಖಂಡಿತವಾಗಿ ಒಂದು ವಿಷಯ ಮಾತ್ರ ತಿಳಿದಿಲ್ಲ."

"ಏನೆಂದು ಕೇಳಿ ತಿಳಿದುಕೊಳ್ಳಬಹುದೇ?"

"ನೀನು ನನ್ನ ಸ್ನೇಹಕ್ಕೆ ಇಷ್ಟೊಂದು ಆತುರತೆ ಏಕೆ ತೋರಿಸುತ್ತಿ?"

"ಏಕೆ ಎಂದರೆ? ಗಂಡಸರೆಂದರೆ ಹೀಗೇ ಎಂದು ತೋರುತ್ತದೆ. ಎಲ್ಲ ಗೊತ್ತಿದ್ದರೂ ಗೊತ್ತಿಲ್ಲದಂತೆ ನಟಿಸುತ್ತಾರೆ."

"ಹಾಗಾದರೆ ಇದರ ಅರ್ಥವೇನು?"

"ನಾನೇ ಬಾಯಿಬಿಚ್ಚಿ ಹೇಳಬೇಕೆ?" ಎಂದು ನನ್ನ ಕೈಗೆ ಚಿವುಟಿದಳು.

"ಈಗ ನನಗೆ ಅರ್ಥವಾಯಿತು. ಹೇಳಲೇ?"

"ಹೇಳಿ, ನಿಮಗೆ ತಿಳಿದಿಲ್ಲ! ತಿಳಿದರೆ ಹೇಳಿ ನೋಡೋಣ."

"ಪ್ರಿಯತಮಾ, ನಾನು ನಿನ್ನ ಪ್ರೇಮಪಾಶದಲ್ಲಿ ಬಂಧಿತಳಾಗಿದ್ದೇನೆ..."

"ಸಾಕು, ಸಾಕು" ಎಂದು ನನ್ನ ಬಾಯಿ ಮುಚ್ಚಿದಳು.

"ಏನು! ನನ್ನ ಪ್ರಶ್ನೆಗೆ ಉತ್ತರ ದೊರೆಯಲೇ ಇಲ್ಲವಲ್ಲ?"

"ನಿಮ್ಮ ಪ್ರಶ್ನೆಯನ್ನು ನಮ್ಮ ದರ್ಬಾರದಲ್ಲಿ ಇಡಲಾಗುವದು. ನಾನು ನನ್ನ ಮಂತ್ರಿಮಂಡಲದೊಂದಿಗೆ ತೆಗೆದುಕೊಂಡ ನಿರ್ಣಯವನ್ನು ನಿಮಗೆ ಕಾಲಕ್ರಮೇಣ ತಿಳಿಸಲಾಗುವದು......ಹೋಗಲಿ. ನೀವನ್ನುವದೇನು?" ಆಶಾ ನನ್ನ ಪ್ರತಿಕ್ರಿಯೆಗಾಗಿ ಕಾದಳು.

ನಾನು ಗಂಭೀರನಾದೆ. ವಸ್ತುಸ್ಥಿತಿಯ ಅರಿವು ಆಶಾಳಿಗಿಂತ ನನಗೆ ಚೆನ್ನಾಗಿತ್ತು. ಊಟ ಮುಗಿಯುತ್ತ ಬಂದಿತ್ತು. ಆಶಾಳ ಪ್ರಶ್ನೆಗೆ ಉತ್ತರ ಕೊಡದೆ ಎದ್ದು ಕೈ ತೊಳೆದುಕೊಂಡು ಬಂದೆ. ಆಶಾಳೂ ಹಿಂಬಾಲಿಸಿದಳು. ಊಟದ ಪಾತ್ರೆಗಳನ್ನೆಲ್ಲ ತೊಳೆದು ಅರಲೆಂದು ಇಟ್ಟಳು. ತಿರುಗಿ ಬಂದು ಪಕ್ಕದಲ್ಲಿ ಕುಳಿತಳು. ಮುಖದಲ್ಲಿ ಇನ್ನೂ ಪ್ರಶ್ನಾರ್ಥಕ ಚಿಹೆವಿತ್ತು.

"ಆಶಾ, ನೀನು ನನ್ನ ಪಾಲಿಗೆ ಕನ್ನಡಿಯೊಳಗಿನ ಗಂಟು. ಹಿಡಿಯ ಹೋದರೆ ಕೈ ಜಪ್ಪಿಕೊಳ್ಳಬೇಕಾದೀತು. ನಿಮ್ಮ ತಂದೆಯವರ ಕುಟುಂಬದ ಸ್ಥಾನಮಾನ, ಆರ್ಥಿಕ ಮಟ್ಟ, ಜಾತಿ ಕುಲಗಳನ್ನೆಲ್ಲ ತಿಳಿದೂ ತಿಳಿದೂ ಇಲ್ಲದ ಆಶಾಗೋಪುರಗಳನ್ನು ಕಟ್ಟಿಕೊಳ್ಳುವುದು ನನಗೆ ಬೇಕಿಲ್ಲ. ನಿನಗೆ ಅನುರೂಪನಾದ ವರನನ್ನು ನಿಮ್ಮ ತಂದೆಯವರು ಹುಡುಕುವದರಲ್ಲಿ ಯಾವ ಸಂದೇಹವೂ ಇಲ್ಲ. ನಮ್ಮ ಸ್ನೇಹ ಬೇರಾವ ಪಥವನ್ನೂ ಹಿಡಿಯದಿರಲಿ." ಬಹಳ ದಿನಗಳವರೆಗೆ ಯೋಚಿಸಿ ಯೋಚಿಸಿ ಹೊಳೆವ ನಿರ್ಣಯವನ್ನು ಆಶಾಳಿಗೆ ಹೇಳಿದೆ. ಇಷ್ಟು ಹೊರಬಂದ ಮಾತುಗಳು. ಮಾತುಗಳು ಸೂಸಲಾರದ ನೋವನ್ನು ಕಣ್ಣುಗಳು ಸೂಸಿದವು. ಮನಸ್ಸು ಮಾತ್ರ ಆಶಾ! ಆಶಾ! ನೀನು ಎಂದೆಂದಿಗೂ ನನ್ನವಳೇ ಎಂದು ಕೂಗುತ್ತಿತ್ತು.

ಆಶಾಳ ಕಂಬನಿ ನನ್ನ ಕಣ್ಣುಗಳನ್ನು ಅನುಸರಿಸಿತು. ಇಬ್ಬರು ಕೆಲಹೊತ್ತು ಭಾವಾವೇಶದಲ್ಲಿದ್ದೆವು.

"ನನಗೆ ನಿಮ್ಮ ಹೊರತು ಇನ್ನಾವ ವರನೂ ಬೇಕಾಗಿಲ್ಲ. ನೀವು ಒಪ್ಪದಿದ್ದರೆ ಒಬ್ಬಂಟಿಗಳಾಗಿಯೇ ಉಳಿಯುವೆ."

ಹಠಾತ್ತಾಗಿ ಆಶಾ ತನ್ನ ನಿರ್ಧಾರವನ್ನು ತಿಳಿಸಿದಳು.

"ಬರೇ ಪುಸ್ತಕೀಯ, ಅಥವಾ ಚಲನಚಿತ್ರದ ಮಾದರಿ. ಪ್ರೇಮದಿಂದ ಏನೂ ಆಗಲಾರದು ಆಶಾ! ಜಗತ್ತಿನ ಆಗು-ಹೋಗುಗಳೊಂದಿಗೆ ನಾವು ಒಂದಾಗ

ಬೇಡವೋ? ತಮ್ಮ ಯೋಗ್ಯತೆಗೆ ಯಾವ ದೃಷ್ಟಿಯಲ್ಲಿಯೂ ಯೋಗ್ಯನಲ್ಲದ ಹುಡುಗನಿಗೆ ನಿಮ್ಮ ತಂದೆ, ಮಗಳನ್ನು ಕೊಟ್ಟಾರೇ?"

"ತಂದೆಯವರನ್ನು ಮನೆಯ ಇತರರನ್ನು ಒಪ್ಪಿಸುವುದು ನನಗಿರಲಿ. ಈಗ ಒಪ್ಪಿಗೆಯೇ?"

"ಆಶಾ, ನೀನು ಆವೇಶ ಭರದಲ್ಲಿ ಮಾಡಿದ ವಾಗ್ದಾನವನ್ನು ಪಾಲಿಸುವದು ಅಷ್ಟು ಸುಲಭವಲ್ಲ. ಒಂದು ಘಟನೆ....ಕೇಳಲ್ಲ. ನನ್ನ ಆತ್ಮೀಯನ ಅಕ್ಕ, ಶರಾವತಿಯಲ್ಲಿ ಬ್ರಾಹ್ಮಣ ಹುಡುಗನೊಬ್ಬ ಅನುರಕ್ತನಾಗಿದ್ದ. ಮದುವೆಗೆ ಜಾತಿ ಅಡ್ಡವಾಗುವದೆಂದೂ ಗೆಳೆಯನ ಮನೆಯವರೆಲ್ಲ ಹೇಳಿದರೂ ತಾನು ಹಾಗೆ ಮಾಡುತ್ತೇನೆ, ಹೀಗೆ ಮಾಡುತ್ತೇನೆ ಎಂದು ಹೇಳುತ್ತಿದ್ದನಂತೆ. ಮಾತು ಆತನ ತಂದೆಯ ಕಿವಿಯವರೆಗೂ ಹೋಗಿ, ತಂದೆ ಹೊರಗೆ ಹಾಕುವದಾಗಿ ಹೆದರಿಸಿದನಂತೆ. ಅಷ್ಟೆ ಅಲ್ಲ ಆಸ್ತಿಯ ಪಾಲಿನಲ್ಲಿ ಕಿವುಡು ಕಾಸೂ ಸಿಗಲಿಕ್ಕಿಲ್ಲ ಎಂದಾಗ ಮಗನ ಪ್ರಣಯಾವೇಶವೆಲ್ಲ ಇಳಿಯಿತು. ಕೊನೆಗೂ ತಮ್ಮ ಜಾತಿಯ ಹುಡುಗಿಯನ್ನೆ ಮದುವೆಯಾದನಂತೆ." ಈ ಅನ್ಯಾಯ ಸಹಿಸಲಾರದೇ ಆತ ಪ್ರೀತಿಸಿದ ಹುಡುಗಿ ಆತ್ಮಹತ್ಯೆ ಮಾಡಿಕೊಂಡಳು. ಅಂದಿನಿಂದ ಆ ಮನೆತನದವರೆಲ್ಲ ಬ್ರಾಹ್ಮಣನೆಂದರೆ ಧಿಕ್ಕಾರ!ವೆನ್ನುತ್ತಾರೆ.

"ಎಲ್ಲ ಬ್ರಾಹ್ಮಣರೂ ಒಂದೇ ತೆರನಾಗಿರುವುದಿಲ್ಲ, ಅರುಣ, ನಾನೆಂದೂ ಕೊಟ್ಟ ಮಾತನ್ನು ಹಿಂದೆ ತೆಗೆದುಕೊಂಡವಳಲ್ಲ. ನನ್ನಲ್ಲಿ ಅಷ್ಟೊಂದು ಅಪನಂಬಿಕೆ ಇದ್ದರೆ ನಡೀರಿ ಈಗಲೇ ರಿಜಿಸ್ಟರ ಮದುವೆಯಾಗಿ ಬಿಡೋಣ. ಹೇಗಿದ್ದರೂ ನಾವಿಬ್ಬರೂ ಪ್ರಾಯಸ್ಥರು."

"ಮದುವೆಯಾಗುವುದೇನು ಅಂಥ ದೊಡ್ಡ ಮಾತಲ್ಲ. ಕುಟುಂಬದವರೆಲ್ಲ ಒಬ್ಬರೊಡನೊಬ್ಬರು ಪ್ರೀತಿ-ವಿಶ್ವಾಸಗಳಿಂದ ಇರಬೇಕು. ಮನೆಯ ಜನರಿಂದ ನಾವು ಪ್ರತ್ಯೇಕವಾಗಿದ್ದರೆ ಏನು ಪ್ರಯೋಜನ? ಅಲ್ಲದೇ ನೀನು ದೊಡ್ಡವರ ಮಗಳು. ನಮ್ಮ ಮನೆಯತ್ತ ಸಂಪನ್ನತೆ ತಪ್ಪಿ ಕೂಡ ಹಾಯ್ದಿಲ್ಲ. ನೀನು ಹೇಗೆ ಸುಖಿಯಾಗಬಲ್ಲೆ?"

"ಅರುಣ ನಾನು ಸುಖ-ಐಶ್ವರ್ಯಗಳಿಗೆ ಮಾರುಹೋದವಳಲ್ಲ. ಬಡತನದ ಅನುಭವವಿಲ್ಲದಿದ್ದರೂ ನೋಡಿ, ಬಲ್ಲೆ. ಬಡತನದಲ್ಲಿಯೂ ಮನುಷ್ಯ ಸುಖಿಯಾಗಿ ಇರಬಹುದೆಂಬ ಆತ್ಮವಿಶ್ವಾಸ ನನಗಿದೆ. ನೀನು ನನ್ನವನಾದರೆ ನಾನು ಎಂತಹ ಬಾಳಿನಲ್ಲಿಯೂ ನಿನ್ನ ಸಂಗಡ ನಡೆಯಲು ಸಿದ್ಧಳಿದ್ದೇನೆ."

"ಹೀಗೆ ದುಡುಕಿ ಪ್ರಯೋಜನವಿಲ್ಲ. ಸಾರಾಸಾರ ವಿಚಾರ ಮಾಡಿ ನೋಡು. ಮತ್ತು ನಾಳೆ ನಿನ್ನ ಕೊನೆಯ ನಿರ್ಧಾರವನ್ನು ತಿಳಿಸು. ಆಗ ನಾನು ವಿಚಾರಿಸಿ ಉತ್ತರ

ಕೊಡುತ್ತೇನೆ" ಎಂದಾಗ ಸ್ವಲ್ಪ ನಿರಾಶೆಯಾಯಿತು ಅವಳಿಗೆ. ಮತ್ತೆ ಲೋಕಾಭಿರಾಮವಾಗಿ ಮಾತನಾಡುವುದರಲ್ಲಿ ಅಂದಿನ ದಿನ ಕಳೆದುಹೋಯಿತು.

ಮರುದಿನ ಕಾಲೇಜಿಗೆ ಬರುತ್ತಲೇ "ನಾನು ದೀಪಾವಳಿ ರಜೆಯಲ್ಲಿ ಎಲ್ಲ ಪ್ರಯೋಗದ ಟಿಪ್ಪಣಿಗಳನ್ನು ಮುಗಿಸಿದ್ದೇನೆ. ಸರಿಯಾಗಿದೆಯೇ ನೋಡಿ ಎಂದು ಟಿಪ್ಪಣಿ ಪುಸ್ತಕವನ್ನು ಎಲ್ಲರೆದುರಿಗೇ ನನ್ನ ಕೈಯಲ್ಲಿ ಕೊಟ್ಟಳು. ಸಮಯ ನೋಡಿ ನಿಧಾನವಾಗಿ ಟಿಪ್ಪಣಿ ಪುಸ್ತಕ ತೆರೆದೆ."

ಪ್ರಿಯತಮಾ,

ನಿನ್ನೆ ರಾತ್ರಿಯೆಲ್ಲ ನಿದ್ರೆಯೇ ಬರಲಿಲ್ಲ. ನೀವು ಹೇಳಿದ ಸಮಸ್ಯೆಗಳಿಗೆ ತಿರುತಿರುಗಿ ಉತ್ತರವನ್ನು ಹುಡುಕುತ್ತಲಿದ್ದೆ. ಹೆಚ್ಚೆಚ್ಚು ಹುಡುಕಿದಂತೆ ಒಂದೇ ಉತ್ತರ ಹೊರಡಿತು. ಮದುವೆಯಾದರೆ ಅರುಣನೊಂದಿಗೆ ಇಲ್ಲವಾದರೆ ಆಜನ್ಮ ಬ್ರಹ್ಮಚಾರಿಣಿಯಾಗಿರುವದು. ಈ ನಿರ್ಣಯಕ್ಕೆ ಬಂದನಂತರ ಸುಖವಾಗಿ ನಿದ್ರೆ ಬಿತ್ತು. ಬೆಳಗಿನ ಕನಸಿನಲ್ಲಿ ನೀವು ಬಂದಿರಿ. ಇಬ್ಬರೂ ಕೈಯಲ್ಲಿ ಕೈ ಹಾಕಿ ಸಮುದ್ರದ ದಂಡೆಗುಂಟ ಅದೆತ್ತಲೋ ಸಾಗಿದ್ದೆವು. ಬೆಳದಿಂಗಳು ಹುಣ್ಣಿಮೆಯ ಚಂದ್ರ ನಗುತ್ತಲಿದ. ಚಂದ್ರನನ್ನು ನೋಡುತ್ತ ನಿಮ್ಮೆಡೆಗೆ ಬಗ್ಗಿದ್ದೆ. ಆಗಲೇ ಬಳೆಯ ಕೈಯೊಂದು ಮೃದುವಾಗಿ ನನ್ನ ತಲೆಯನ್ನು ನೇವರಿಸಿತು. ಕಣ್ತೆರೆದಾಗ ಬೆಳಗ್ಗಿನ ಕಾಫಿಗೆಂದು ಆಯಿಯವರು ಎಬ್ಬಿಸಿದರು. ಎಂದೂ ತಡಮಾಡಿ ಏಳದ ಹುಡುಗಿ ಇಂದೇಕೆ ಎಂಟು ಗಂಟೆಯಾದರೂ ಎದ್ದಿಲ್ಲವೆದು ಯೋಚಿಸಿ ಬಂದಿದ್ದರು.....ಈಗ ನಿಮ್ಮ ಉತ್ತರಕ್ಕೆ ಅತೀ ಕಾತುರಳಾಗಿದ್ದೇನೆ.

ಎಂದೆಂದಿಗೂ ನಿಮ್ಮವಳಾಗಲು ಬಯಸುವ
ಆಶಾ

ಆ ಪತ್ರದ ಕೆಳಗೇ ಉತ್ತರವನ್ನೂ ಬರೆದುಬಿಟ್ಟಿದ್ದೆ.

ಪ್ರಿಯ ಆಶಾ,

ನನ್ನವಳ ಇಚ್ಛೆಯ ವಿರುದ್ಧ ನಾನು ಏನೂ ಮಾಡುವದೇ ಇಲ್ಲ.

ನಿನ್ನವನೇ ಆದ
ಅರುಣ

* * *

ಹಿಂದಿನ ಸುಖಸ್ವಪ್ನ ನೆನಪಾಗುತ್ತಿದ್ದಂತೆ ಬ್ಲೇಡು ಮೃದುವಾದ ಚರ್ಮವನ್ನು ಒಂದು ಕಡೆಯಿಂದ ಕೊರೆದು ಬಿಟ್ಟಿತು. ಗಲ್ಲವೆಲ್ಲ ರಕ್ತವಾದಾಗ ಅರುಣನಿಗೆ ಇಹಲೋಕದ ಪ್ರಜ್ಞೆ ಬಂದಿತು. ಲಗುಬಗೆಯಿಂದ ಟ್ರಂಕಿನೊಳಗಿಂದ ಡೆಟ್ಟಾಲ ತೆಗೆದು ಗಲ್ಲಕ್ಕೆ ಸವರಿಕೊಂಡು ಸಾಬೂನು ಟಾವೆಲ್ಲನ್ನು ತೆಗೆದುಕೊಂಡು ಸ್ನಾನಗೃಹಕ್ಕೆ ಹೊರಟ.

೬

ಸ್ನಾನ ಮಾಡಿ ಮುಗಿಸುತ್ತಿದ್ದಂತೆ ಸ್ವಲ್ಪ ಹುರುಪು ಬಂದಿತು. ಅಂತೆಯೇ ಹಡಗವನ್ನಾದರೂ ಸುತ್ತುಹಾಕಿ ಬರೋಣವೆಂದು ಅರುಣ ಹೊರಟ. ಹಡಗದಲ್ಲಿ ತನಗೆ ತಿಳಿಯದ ಸಂಗತಿಯಾವುದೂ ಇರಲಿಲ್ಲ. ಅತ್ತಿತ್ತ ಅಲೆದಾಡುತ್ತ ಅರೆನಗ್ನ ಯುವಕ-ಯುವತಿಯರು ಮೀರಿದ ಉಲ್ಲಾಸದಿಂದ ಜಲಕ್ರೀಡೆ ನಡೆಸಿದ ಹಡಗದ ಈಜುಕೊಳಕ್ಕೆ ಬಂದು ತಲುಪಿದ. ತಾನು ಈಸದ ಕೆರೆ, ಹಳ್ಳ,ನದಿ, ಸಮುದ್ರ ತಮ್ಮೂರ ಸಮೀಪದಲ್ಲಿ ಒಂದೂ ಇರಲಿಲ್ಲ. ಈಗ ಮಾತ್ರ ಈಸುವ ಹುಮ್ಮಸು ಅದೆಲ್ಲಿ ಹೊರಟುಹೋಯಿತೋ! ಆಶಾ ಹಿಂದೊಮ್ಮೆ ತನಗೆ ಈಸು ಕಲಿಸು ಎಂದು ದುಂಬಾಲು ಬಿದ್ದಿದ್ದಳು. ಸ್ತ್ರೀ ಪುರುಷರು ಒಟ್ಟಿಯಾಗೇ ಈಸುವ ಪ್ರಸಿದ್ಧ ಸ್ಥಳಗಳು ಆಗ ದೊರೆಯದ್ದರಿಂದ ಆಶಾಳಿಗೆ ನಿರಾಶೆಯಾಗಿತ್ತು. ಆದರೂ ಸೋಲು ಒಪ್ಪಿಕೊಳ್ಳದೇ ಯಾವುದೋ ಈಸುವ ಕ್ಲಾಸಿಗೆ ಸೇರಿ ಈಸುವದನ್ನು ಚೆನ್ನಾಗಿ ಕಲಿತುಕೊಂಡು ಬಿಟ್ಟಿದ್ದಳು. ತಾವು ವಿವಾಹವಾದ ನಂತರ (ಇಬ್ಬರಿಗೂ ಈಸು ಬರುತ್ತಿದ್ದರಿಂದ) ಎಷ್ಟು ಮೋಜಾಗಿ ವೇಳೆ ಕಳೆಯಬಹುದೆಂದು ಸುಖ ಸ್ವಪ್ನ ಕಂಡಿದ್ದಳು. "ಆಶಾ ಈಗ ನನ್ನೊಟ್ಟಿಗಿದ್ದರೆ ತಾನು ಹೀಗೆ ಹುಚ್ಚನಂತೆ ಕೈ ಕಟ್ಟಿ ನಿಲ್ಲುವ ಪ್ರಸಂಗ ಬರುತ್ತಿರಲಿಲ್ಲ. ಆನೆಗಳಂತೆ ನೀರಿಗೆ ಸೇರಿ ಒಂದು ಕ್ಷಣದಲ್ಲಿ ಶಾಂತ ನೀರನ್ನು ಅಲ್ಲೋಲಕಲ್ಲೋಲ ಮಾಡಿ ಬಿಡುತ್ತಿದ್ದೆವು. ಎಂತಹ ರಸನಿಮಿಷವಾಗುತ್ತಿತ್ತು!"

* * *

................ ಅಂದು ಸಂಜೆ ಎರಡು ಪಿರಿಯಡ್ಸ್‌ಗಳ ಬಿಡುವಿದ್ದಾಗ ಚೌಪಾರ್ಟಿಗೆ ಧಾವಿಸಿರಲಿಲ್ಲವೇ? ಮರಳಿನಲ್ಲಿ ಕುಳಿತು ಬಿಸಿಲಿನ ಅರಿವನ್ನೂ ಮರೆತು, ಭೇಳಪುರಿ ತಿನ್ನುತ್ತ ಹರಟೆಯಲ್ಲಿ ಮಗ್ನರಾಗಿದ್ದೆವು. ನಿಮ್ಮ ಮನೆಯಲ್ಲಿ ಮೊದಲ ದಿನ ನಡೆದ ತಮಾಶೆಯನ್ನು ನೀನು ಹೇಳಿದ್ದೆ ಆಶಾ! ಅಂದು ನಿಮ್ಮ ಮನೆಯಲ್ಲಿ ಬೆಳಗಾಂವದಿಂದ ಯಾರೋ ಅತಿಥಿಗಳು ಬಂದಿದ್ದರಂತೆ. ಅವರು ಕೈ ನೋಡಿ (ಅದೂ ಹೆಚ್ಚಾಗಿ ಹುಡುಗಿಯರ) ಭವಿಷ್ಯ ಹೇಳುವ ಚಪಲ ಬೆಳೆಸಿಕೊಂಡಿದ್ದರಂತೆ! ನಿಮ್ಮ

ಮನೆಯ ಇತರರೆಲ್ಲ ತಮ್ಮ ತಮ್ಮ ಕೈ ತೋರಿಸಿ ಅವರು ಕೊಟ್ಟ ವಿವರಣೆಗೆ ಸಂತುಷ್ಟರಾದರು.

ನೀನು ಒಲ್ಲೆ ಎಂದರೂ, ನಿಮ್ಮ ತಂದೆಯವರು ಒತ್ತಾಯಿಸಿ ತೋರಿಸಲು ಹೇಳಿದರು. ಹಿಂಜರಿಯುತ್ತ ಕೈ ಚಾಚಿದಾಗ ನಿನ್ನ ಮನಸ್ಸಿನಲ್ಲಿ ದುಗುಡ ಪ್ರಾರಂಭವಾಗಿರಲಿಲ್ಲವೆ? ಬಂದ ಅತಿಥಿಗಳು ಕೈಯನ್ನು ನೋಡಿ, "ಹಸ್ತ ಉತ್ತಮವಾಗಿದೆ. ಆದರೆ ಕೆಲಕಾಲದವರೆಗೆ ಶನಿಯ ನೆರಳು ಶುಕ್ರನ ಮೇಲೆ ಬಿದ್ದುದರಿಂದ ತೊಂದರೆಯಿದೆ. ಕೈಕೊಂಡ ಕೆಲಸಗಳು ಸುಲಭದಲ್ಲಿ ನೆರವೇರಲಿಕ್ಕಿಲ್ಲ. ಲಗ್ನಫಲ ಒಂದೆರಡು ವರ್ಷಗಳಲ್ಲಿ ಒದಗಿ ಬರಲಿದೆ. ನಿಮ್ಮ ಆಪ್ತರಲ್ಲಿ, ಪರಿಚಯದವರಲ್ಲಿ ಅಥವಾ ಸಹಪಾಠಿ-ಸಹೋದ್ಯೋಗಿಗಳಲ್ಲಿ ಯಾರಾದರೂ ಒಬ್ಬರಲ್ಲಿ ನೀವು ಅನುರಕ್ತರಾಗಿ ಪ್ರೇಮ ವಿವಾಹ ಮಾಡಿಕೊಳ್ಳಲಿದ್ದೀರಿ. ನಿಮ್ಮ ಭಾವಿ ಪತಿ ಬಹಳ ಯೋಗ್ಯರೂ ವಿದ್ಯಾಬುದ್ಧಿ ಪಡೆದವರೂ ಇದ್ದರೂ ಧನವಂತರಲ್ಲ. ಇಷ್ಟಾದರೂ ನೀವಿಬ್ಬರೂ ಸುಖಿಸಂಸಾರ ಮಾಡುತ್ತೀರಿ" ಎಂದಾಗ ನಿನಗಷ್ಟು ನೆಮ್ಮದಿಯಾಗಿತ್ತು!

ತಮ್ಮ ಮಗಳು ಇನ್ನೂ ಏನೂ ಅರಿಯದ ಚಿಕ್ಕ ಹುಡುಗಿ ಎಂದು ತಿಳಿದುಕೊಂಡ ನಿಮ್ಮ ತಂದೆ "ಆಶಾ, ಪ್ರೇಮವಿವಾಹ ಮಾಡಿಕೊಂಡ ದಿನದಷ್ಟು ಆನಂದ ನನಗೆ ಬೇರಾವುದೂ ಇರಲಾರದು! ಗಂಡು ಹುಡುಗರ ಮುಖವನ್ನು ನೋಡಿ ಸರಿಯಾಗಿ ಮಾತನಾಡಲಾರದವಳು ಏನು ಪ್ರೇಮ ವಿವಾಹ ಮಾಡಿಕೊಳ್ಳುತ್ತಾಳೆ?" ಎಂದು ನಕ್ಕಿದ್ದರಂತೆ.

"ಬಾಬಾ, ಹಾಗೆಲ್ಲ ನಾನು ನಾಲಾಯಕ ಎಂದು ತಿಳಿದುಕೊಳ್ಳಬೇಡಿ. ಮನಸ್ಸು ಮಾಡಿದರೆ ಪ್ರೇಮವಿವಾಹವನ್ನು ಮಾಡಿಕೊಂಡು ತೋರಿಸಬಲ್ಲೆ" ಎಂದು ನೀನು ಹೆಚ್ಚಿನ ಧೈರ್ಯದಿಂದ ನುಡಿದಿದ್ದೆ. "ಪ್ರೇಮವಿವಾಹ ಮಾಡಿಕೊಂಡು ತೋರಿಸಿದರೆ ನೀವೇನು ಕೊಡುತ್ತೀರಾ?" ಎಂದೂ ಕೇಳಿದ ಪ್ರಶ್ನೆಗೆ "ಅಷ್ಟಪುತ್ರ ಸೌಭಾಗ್ಯವತಿ ಭವ! ಎಂದು ಆಶೀರ್ವಾದ ಕೊಡುತ್ತೇನೆಂದು" ಗಹಗಹಿಸಿ ನಕ್ಕಿದ್ದರಂತೆ ನಿನ್ನ ತಂದೆ ಈ ಘಟನೆಯಿಂದ ತಮ್ಮ ಮದುವೆ ಆಗಿಯೇ ಆಗುವದೆಂದು ಆಶಾ ನಂಬಿದ್ದಳು. ಹೊಸ ಹುರುಪಿನಿಂದ ಯಾವಾಗಲೂ ಭಾವೀ ದಾಂಪತ್ಯ ಸ್ವಪ್ನಲೋಕದಲ್ಲಿ ವಿಹರಿಸುತ್ತಿದ್ದಳು. ನಾನು ಆಗಾಗ ಈ ವಾಸ್ತವ ಲೋಕಕ್ಕೆ ಅವಳನ್ನು ತರಬೇಕಾಗುತ್ತಿತ್ತು.

ಅವಳ ನಿರೀಕ್ಷೆಯಂತೆ ಎಲ್ಲ ಆಗದಿದ್ದರೆ? ಎಂಬ ಪ್ರಶ್ನೆಗೆ ಅವಳ ಹತ್ತಿರ ಉತ್ತರವಿರಲಿಲ್ಲ. ತನ್ನ ನಿರೀಕ್ಷೆ ಮೀರಿದ ಘಟನೆ ಎಂದೂ ಜರುಗಲಾರದು! ಎಂಬ ದೃಢವಿಶ್ವಾಸ ಅವಳಲ್ಲಿತ್ತು. ನನ್ನಲ್ಲಿ ಆಸಕ್ತಿ ಹೆಚ್ಚಿದಂತೆ ವಿದ್ಯಾಭ್ಯಾಸದತ್ತ ಗಮನ

ಕಡಿಮೆಯಾಗುತ್ತ ನಡೆಯಿತು. ಮನೆಗೆಲಸದಲ್ಲಿ ಹೆಚ್ಚೆಚ್ಚು ಆಸಕ್ತಿ ವಹಿಸಲಾರಂಭಿಸಿದಳು. ತಾನೊಬ್ಬ ಉತ್ತಮ ಗೃಹಿಣಿಯಾಗಬೇಕೆಂಬ ಹಂಬಲ ಅವಳದು. ಇದು ಅವಳ ತಾಯಿಯವರ ಲಕ್ಷ್ಯಕ್ಕೆ ಬಾರದೇ ಇರಲಿಲ್ಲ. ಒಮ್ಮೆ ಅವರು, "ಆಶಾ, ಮೊದಲು ಹೇಳಿಕೊಟ್ಟ ಕೆಲಸಗಳನ್ನೇ ಸರಿಯಾಗಿ ಮಾಡುತ್ತಿರಲಿಲ್ಲ. ಈಗ ಬರಬರುತ್ತ ಅಡಿಗೆಯಯವರಲ್ಲಿ ಎಂಥವರನ್ನೂ ಹಿಂದೆ ಹಾಕುತ್ತಿ. ದಿನಕ್ಕೊಂದು ಹೊಸ ತಿಂಡಿ, ಊಟಕ್ಕೊಂದು ಹೊಸ ಪಕ್ವಾನ್ನ ನಮಗೆಲ್ಲ ದೊರೆಯುತ್ತಲಿವೆ. ನಿನ್ನ ಕೈ ಹಿಡಿಯುವಾತ ಭಾಗ್ಯಶಾಲಿ" ಎಂದಾಗ ಮೂಲತಃ ಅರುಣನಿಗಾಗಿ ತಯಾರಾಗುತ್ತಿದ್ದ ತಿಂಡಿಗಳಲ್ಲಿ ತಮಗೊಂದು ಪಾಲು ಎನ್ನುವದು ಅವರಿಗೆ ತಿಳಿದಿರಲಿಲ್ಲ. ಇಂಥ ಇನ್ನೊಂದು ಸಂದರ್ಭದಲ್ಲಿ "ಅಲ್ಲವೇ ಆಶಾ! ಮೊದಲು ಕನ್ನಡ-ಕೊಂಕಣಿ ಭಾಷೆಗಳೆಂದರೆ ಅನಾಗರಿಕ ಭಾಷೆಗಳೆಂದು ಮೂಗು ಮುರಿಯುತ್ತಿದ್ದವಳು ಈಗ ಕೊಂಕಣಿಯಲ್ಲೇ ಮಾತನಾಡುತ್ತಿಯಲ್ಲ? ಕನ್ನಡ ಮರೆತ ನೀನು ಕಷ್ಟವಾದರೂ ಎಲ್ಲೆಲ್ಲಿಂದಲೂ ಕನ್ನಡ ಪುಸ್ತಕ ತಂದು ಓದುತ್ತಿ. ನಾಳೆ ನಿನ್ನ ಕೈ ಹಿಡಿಯುವಾತ ಮೈಸೂರಿನಲ್ಲಿರುವಾತನಾದರೆ ನಿನಗೆ ಏನೇನೂ ತೊಂದರೆಯಾಗದಲಿಕ್ಕಿಲ್ಲ" ಎಂದು ಹೆಮ್ಮೆಯಿಂದ ನುಡಿದಿದ್ದರಂತೆ.

ಒಮ್ಮೆಯಂತೂ "ನನ್ನ ಈ ಮಗಳಿಗೆ ಕೊಟ್ಟ ವಿದ್ಯೆ-ಬುದ್ಧಿ, ವ್ಯವಹಾರ ಚಾತುರ್ಯ, ಕರ್ತವ್ಯ ಬುದ್ಧಿಗಳ ಒಂದಂಶವಾದರೂ ದೇವರು ಮಗನಿಗೆ ಕೊಟ್ಟಿದ್ದರೆ, ಧನ್ಯತೆಯಿಂದ ನಾವು ಕಣ್ಣು ಮುಚ್ಚುತ್ತಿದ್ದೆವು" ಎಂದರಂತೆ.

ಮನೆಯಲ್ಲಿ ನಡೆದ ಈ ಮಾತುಗಳನ್ನೆಲ್ಲ ಆಶಾ ತಾನು ನನಗೆ ಅನುರೂಪಳಾದ ಪತ್ನಿಯಾಗಬಲ್ಲೆ! ಎಂದು ಮನಗಾಣಿಸಲು ಆಗೊಮ್ಮೆ ಈಗೊಮ್ಮೆ ಹೇಳುತ್ತಿರಲು ಸಾಕು!

ಆದಷ್ಟು ಬೇಗ ತಮ್ಮ ಮದುವೆ ನೆರವೇರಬೇಕೆಂದು ಆಶಾಳ ತೀವ್ರ ಇಚ್ಛೆ. ಆದರೆ ಅಣ್ಣನ ಮದುವೆಯಾದ ಹೊರತು ತನ್ನದು ಆಗಲಾರದೆಂದು ಗೊತ್ತಿದ್ದರಿಂದ ತಮ್ಮಣ್ಣನ ಮದುವೆ ಬೇಗ ನಡೆದು ಹೋಗಲೆಂದು ದಿನವೂ ದೇವರಲ್ಲಿ ಪ್ರಾರ್ಥಿಸುತ್ತಿದ್ದಳು. ನಾನು ಮಾತ್ರ ಇವುಗಳತ್ತ ಅಷ್ಟು ಲಕ್ಷ್ಯ ಹಾಕಿರಲಿಲ್ಲ. ಅಂತೆಯೇ ಭವಿಷ್ಯದ ಬಗ್ಗೆ ಹೆಚ್ಚಿನ ಲಕ್ಷ್ಯವಿದ್ದ ನಾನು ಅಭ್ಯಾಸದತ್ತ ಮನಸ್ಸು ಹಾಕಿದೆ. ಆಶಾಳಾದರೂ ಇದನ್ನು ಅರಿತುಕೊಂಡು ಪರೀಕ್ಷೆ ಹತ್ತಿರವಾದಂತೆ ದೂರವಿರುತ್ತಿದ್ದಳು.

ನಮ್ಮ ಬಿ.ಎಸ್.ಸಿ. ಪರೀಕ್ಷೆ ಪ್ರಾರಂಭವಾಗಿ, ಕೊನೆಯ ಪೇಪರ ಮುಗಿದಾಗ ಆಶಾ ನಾನಿದ್ದಲ್ಲಿ ಬಂದಳು. ಎರಡು ಮೂರು ತಿಂಗಳು ಪರೀಕ್ಷೆಯ ಗದ್ದಲದಲ್ಲಿ ಆಕೆ ಹೀಗೆ ಭೆಟ್ಟಿಯಾಗಲು ಬಂದಿರಲಿಲ್ಲ. ಆಗೊಮ್ಮೆ ಈಗೊಮ್ಮೆ ಭೆಟ್ಟಿಯಾದರೂ ಕೆಲ

ನಿಮಿಷ ಮಾತನಾಡಿದರೂ ಅಭ್ಯಾಸ-ಪರೀಕ್ಷೆಗಳ ವಿಷಯವನ್ನು ಮಾತನಾಡಿದ್ದೆವು. ತನ್ನಿಂದ ನನ್ನ ಭವಿಷ್ಯ ಹಾಳಾಗಬಾರದೆಂದು ಅವಳ ನಿಶ್ಚಯ. ಅಲ್ಲದೇ ನಾನೊಬ್ಬ ದೊಡ್ಡ ವಿಜ್ಞಾನಿಯಾಗುವ ಕನಸನ್ನು ಆಕೆ ಕಾಣುತ್ತಿದ್ದಳು. ಆ ಕನಸು ನನಸಾಗಲು ಸದಾ ತಾನು ಸಹಕರಿಸುವದಾಗಿ ಹೇಳಿದ್ದಳು.

ಕ್ಯಾಂಟೀನದಲ್ಲಿ ಚಹಾ ಕುಡಿಯಲು ಕುಳಿತಾಗ ಅಂದು ಟಪಾಲಿಗೆ ಬಂದ ದಪ್ಪ ಲಕೋಟೆಯೊಂದನ್ನು ಅವಳ ಕೈಗೆ ಕೊಟ್ಟೆ. ಅದರ ಮೇಲೆ ಬರೆದ "ನ್ಯೂಯಾರ್ಕ ವಿಶ್ವವಿದ್ಯಾಲಯ" ಎಂಬ ಹೆಸರು ಓದಿಯೇ ಅವಳ ಕಣ್ಣುಗಳು ಅರಳಿದವು. ಅದರೊಳಗಿದ್ದ ಪ್ರವೇಶದ ಫಾರ್ಮುಗಳನ್ನು ಒಂದೊಂದಾಗಿ ಓದಿ, ನೀವು ಅರ್ಜಿ ಹಾಕಬೇಕೆಂದಿರುವಿರಾ? ಎಂದು ಕೇಳಿದಳು.

"ಇರಲೆಂದು ತರಿಸಿ ಇಟ್ಟೆ. ವಿದೇಶಕ್ಕೆ ಹೋಗುವದು ನನ್ನಂತಹ ಪರದೇಶಿಗೆ ಸಾಧ್ಯವಿಲ್ಲ. ನನ್ನ ಎದೆ ಇಬ್ಭಾಗ ಮಾಡಿದರೆ ಒಂದು ಚಿಕ್ಕಾಸೂ ದೊರೆಯದು.... ಹೋಗುವ ತಯಾರಿಗೆ-ಪ್ರಯಾಣದ ಖರ್ಚಿನ ಹಣವಾದರೂ ಬೇಡವೇ?"

"ಹಣದ ಅಭಾವದಿಂದ ನೀವು ಪರದೇಶಕ್ಕೆ ಹೋಗುವದು ನಿಲ್ಲಲಾರದು ಎಂಬ ಆತ್ಮ ವಿಶ್ವಾಸವಿದೆ. ಪ್ರವೇಶ ದೊರಕಿಸಲು ಪ್ರಯತ್ನಿಸಿರಿ. ಯಶಸ್ಸು ನಿಮಗೆ ಕಾದಿಟ್ಟದ್ದೇ."

"ಒಂದಾನುವೇಳೆ ನೀವು ಹೋಗುವಂತಾದರೆ .......ನಮ್ಮ ಮದುವೆಯ ಇಷ್ಟೆಲ್ಲ ದಿನಗಳನ್ನು ಮದುವೆಯಿಲ್ಲದೇ ಕಳೆದೆನಂತೆ. ಇನ್ನು ಎರಡು ವರ್ಷ ಕಾಯುವದು ನನ್ನಿಂದಾಗದೇ? ಅಲ್ಲದೇ ನಮ್ಮಣ್ಣನ ಮದುವೆಯಾಗದೇ ನನ್ನ ಮದುವೆಯಾಗುವಂತಿಲ್ಲ......ಅದಕ್ಕಾಗಿ ಎಷ್ಟು ಕಾಯಬೇಕೊ.........?" ಎಂದು ನಿಟ್ಟುಸಿರು ಬಿಟ್ಟಳು.

"ನಾನು ಹೇಳುತ್ತಿರುವದು ಆ ಮಾತಲ್ಲ. ನಾನೀಗ ಹೋಗುವ ದೇಶ, ಕುಮಾರಿಯರು ಹೇರಳವಾಗಿ ದೊರೆಯುವ ದೇಶ. ಒಬ್ಬ ಶ್ವೇತ ಕನ್ಯೆಯನ್ನು ಅಲ್ಲಿಂದಲೇ ವರಿಸಿ ಕರೆದುಕೊಂಡು ಬಂದರೆ ನೀನೇನು ಮಾಡುವಿ?"

"ನಿಮ್ಮಲ್ಲಿ ನನಗೆ ಪೂರ್ಣ ವಿಶ್ವಾಸವಿದೆ. ಮಾಡುವವರು ಹೀಗೆ ಎಂದೂ ಆಡುವುದಿಲ್ಲ. ಒಂದು ವೇಳೆ ನಿಮಗೆ ಹಾಗೆ ಮಾಡುವದು ಯೋಗ್ಯ ಎಂದು ಕಂಡರೆ ನನಗೆ ಅದು ತೃಪ್ತಿಯನ್ನೇ ನೀಡೀತು. ನಿಮ್ಮನ್ನು ಸುಖಿಯಾಗಿ ನೋಡುವುದಕ್ಕಿಂತ ಹೆಚ್ಚಿನ ಸುಖ ನನಗೆ ಇನ್ನೂ ಯಾವದಿದೆ?" ಎಂದು ನಗಲು ಯತ್ನಿಸಿದರೂ ಎರಡು ಕಂಬನಿಗಳು ಉದುರಿದವು.

"ಕ್ಷಮಿಸು ಆಶಾ ಸುಮ್ಮನೇ ನೀನು ಕೊರಗುವಂತೆ ಮಾಡಿದೆ" "ಅವು ದುಃಖಾಶ್ರುಗಳೆಂದು ತಿಳಿದಿರೇನು? ನಿಮ್ಮ ಬಗ್ಗೆ ಇದ್ದ ಅಭಿಮಾನದಿಂದ ಹರಿದ ಆನಂದಾಶ್ರುಗಳು ಅವು" ಎಂದು ಭಾವಮಯವಾಗಿ ಹೇಳಿ ನನ್ನ ಕೈಯನ್ನು ಮೆಲ್ಲನೇ ಅದುಮಿದ್ದಳು.

ಆಶಾ, ಪರೀಕ್ಷೆಯಲ್ಲಿ ಅಷ್ಟು ಚೆನ್ನಾಗಿ ಮಾಡಿರದಿದ್ದರೂ ನನ್ನ ಎಲ್ಲ ಪೇಪರುಗಳು ಚೆನ್ನಾಗಿಯೇ ಆಗಿದ್ದವು. ಫಲಿತಾಂಶ ನಿರೀಕ್ಷೆಗೆ ಮೀರಿತ್ತು. ವಿಶ್ವವಿದ್ಯಾಲಯಕ್ಕೇ ನಾನು ಪ್ರಥಮ ಬಂದಿದ್ದೆ. ಬಂದ ಅಭಿನಂದನೆಗಳಿಗೆ ಲೆಕ್ಕವಿರಲಿಲ್ಲ. ಪ್ರಿನ್ಸಿಪಾಲರು ಆದರದಿಂದ ತಮ್ಮ ಮನೆಗೆ ಬರಮಾಡಿಕೊಂಡು, ನನ್ನ ಮುಂದಿನ ಗೊತ್ತು ಗುರಿಗಳ ಬಗ್ಗೆ ಆಸ್ಥೆಯಿಂದ ವಿಚಾರಿಸಿದ್ದರು. ವಿದೇಶಕ್ಕೆ ಹೋಗುವ ವಿಚಾರವನ್ನೂ ಅನುಮೋದಿಸಿ ಅದು ಕೈಗೂಡುವ ತನಕ ತಮ್ಮ ಕಾಲೇಜಿನಲ್ಲಿ ಎಂ.ಎಸ್.ಸಿ. ಮುಂದುವರಿಸಬೇಕೆಂದು ಹೇಳಿದರು. ಧನಸಹಾಯಕ್ಕಾಗಿ ನನ್ನನ್ನು ಕಾಲೇಜಿನಲ್ಲೇ ಡಿಮಾನಸ್ಟ್ರೇಟರ ಎಂದು ನೇಮಿಸಲು ಪ್ರಯತ್ನಿಸುವೆನೆಂದಾಗ ನನಗಾದ ಆನಂದಕ್ಕೆ ಮಿತಿಯಿರಲಿಲ್ಲ.

ಪಾಪ! ಆಶಾಳಿಗೆ ಮಾತ್ರ ಕ್ಲಾಸು ಸಿಗಲಿಲ್ಲ. ನನ್ನನ್ನು ಬಹಳವಾಗಿ ಹಚ್ಚಿಕೊಂಡಿದ್ದರಿಂದ ಪುಸ್ತಕ ತೆರೆದರೆ ನನ್ನ ಮುಖ ಕಾಣಿಸುತ್ತಿತ್ತಂತೆ! ಆದರೆ ಅವಳು ಮಾತ್ರ ಸಂತೋಷದಲ್ಲೇ ಇದ್ದಳು. "ಪತ್ನಿಯಾಗುವವಳು ಎಲ್ಲ ದೃಷ್ಟಿಯಲ್ಲೂ ಸ್ವಲ್ಪ ಕೆಳದರ್ಜೆಯಲ್ಲೇ ಇರಬೇಕು" ಎಂದು ಹಾಸ್ಯವಾಗಿ ತನ್ನ ಪಾಸ ಕಲಾಸನ್ನು ಸಮರ್ಥಿಸಿಕೊಂಡಿದ್ದಳು!

ನಾನು ಶಿಕ್ಷಕ ವರ್ಗಕ್ಕೆ ಸೇರಿಕೊಂಡ ನಂತರ ಹಿಂದಿನಂತೆ ಆಶಾಳೊಡನೆ ಸಂಪರ್ಕ ಸಾಧ್ಯವಿರಲಿಲ್ಲ. ಶಿಷ್ಯಕೋಟಿಯ ಕುತೂಹಲ ಕೆರಳಬಾರದಲ್ಲ! ಭೆಟ್ಟಿಗಾಗಿ ಆಶಾ ಉಪಾಯ ಹುಡುಕುತ್ತಿದ್ದಳು. ತಾನು ಹೊಲಿಗೆ ಕ್ಲಾಸಿಗೆ ಸೇರಿಕೊಂಡಳು-ಮನೆಯ ಹೊರಗೆ ಬೀಳಲು ನೆಪ ಬೇಕಾಗಿತ್ತು. ಹೀಗಾಗಿ ಆಗೀಗ ಭೆಟ್ಟಿಯಾಗುತ್ತಿದ್ದೆವು. ಆಶಾಳ ಕ್ಲಾಸಿನ ವೇಳೆಗಳು ನನಗೆ ಚೆನ್ನಾಗಿ ಗೊತ್ತಿದ್ದವು. ಮಹತ್ವದ ವಿಷಯವೇನಾದರೂ ಇದ್ದರೆ ನಾನೇ ಆಶಾಳಿಗಾಗಿ ಕಾದಿರುತ್ತಿದ್ದೆ. ಉಳಿದ ದಿನಗಳಲ್ಲಿ ಪತ್ರವ್ಯವಹಾರ ನಡೆಯುತ್ತಿತ್ತು. ಪ್ರತಿಸಾರೆ ಭೆಟ್ಟಿಯಾಗಿ ಬೀಳ್ಕೊಡುವಾಗ ಆಶಾ ತಪ್ಪದೇ ಅನ್ನುತ್ತಿದ್ದಳು. "ಇನ್ನು ನಿಮ್ಮ ದರ್ಶನ ಯಾವಾಗಲೋ ಏನೋ" ಒಮ್ಮೆ ಹೀಗೆ ಬೀಳ್ಕೊಟ್ಟ ಮರುದಿನವೇ ನಾನು ಅವಳಿಗಾಗಿ ಕಾದೆ. ಕಡಿಮೆಯೆಂದರೆ ಒಂದು ತಾಸಾದರೂ ಕಾದಿರಬೇಕು. 'ಇಂದು ಕ್ಲಾಸಿಗೆ ಚಕ್ಕರ್ ಕೊಟ್ಟಿರಬೇಕು' ಎಂದು ಯೋಚಿಸಿ ತಿರುಗುವಷ್ಟರಲ್ಲಿ ಮಂದಗಮನೆಯಾಗಿ ಬರುತ್ತಿದ್ದ ಆಶಾಳ ಸವಾರಿ ಕಾಣಿಸಿತು. ನನ್ನನ್ನು ನೋಡಿ ಲಗುಬಗೆಯಿಂದ ಬಂದಳು. ಆನಂದದಿಂದ ಮುಖ ಇಷ್ಟಗಲವಾಗಿತ್ತು. ಹತ್ತಿರ

ಬಂದು. "ಇದೇನಿದು, ನಾನು ಕನಸು ಕಾಣುತ್ತಿಲ್ಲವಷ್ಟೆ? ಬಹಳ ಹೊತ್ತಿನಿಂದ ಕಾಯುತ್ತಿದ್ದಂತಿದೆ? ಇಂದು ನಿಮ್ಮ ನಿರೀಕ್ಷೆಯಿರಲಿಲ್ಲ. ಅದಕ್ಕೆ ನಿಧಾನವಾಗಿ ನಡೆದಿದ್ದೆ ನಿಮ್ಮ ಭೆಟ್ಟಿಯ ದಿನವಷ್ಟೆ ನನ್ನ ಕ್ಲಾಸಿನ ತರಾತುರಿಯಿರುತ್ತದೆ. ಉಳಿದ ದಿನ ಹಾಜರಿ ಹಾಕಲಿಕ್ಕೆ ಅಷ್ಟೇ ಕ್ಲಾಸು" ಎಂದು ನಕ್ಕು ತನಗೆ ತಡವಾದ ಕಾರಣ ವಿವರಿಸಿದಳು.

"ನನಗೇನಾದರೂ ಮಾತನಾಡಲು ಬಿಡುವಿಯಾ? ಇಲ್ಲವೇ ನೀನೇ ಮಾತಿನಲ್ಲಿ ಈ ಭೆಟ್ಟಿ ಮುಗಿಸುವಿಯಾ?"

"ಅರೇ! ಹೇಳಿ ಹೇಳಿ. ನೀವಾಗಿಯೇ ಬಂದಿರೆಂದ ಮೇಲೆ ವಿಶೇಷವೇನಾದರೂ ಇರಲಿಕ್ಕೆ ಬೇಕು."

ನಾನು ಮಾತನ್ನೇನೂ ಆಡದೇ ಕವರೊಂದನ್ನು ಅವಳ ಕೈಗೆ ಕೊಟ್ಟೆ. ಅದನ್ನು ಬಿಡಿಸಿ ಓದುತ್ತಿದ್ದಂತೆ ಅವಳ ಆನಂದ-ಉದ್ವೇಗಗಳು ಹೆಚ್ಚಾದದ್ದು ಮುಖದಿಂದಲೇ ಸ್ಪಷ್ಟವಿತ್ತು. ಒಂದು ಪೇಜು ಮುಗಿಸಿ, "ಇಂದು ನಾನು ಯಾರ ಮುಖ ನೋಡಿದ್ದೆನೊ! ಎಂಥ ಒಳ್ಳೇ ಸುದ್ದಿ. ಈ ಆನಂದದ ಸಮಾಚಾರ ತಂದದ್ದಕ್ಕೆ ನಿಮಗೆ ಏನು ಮಾಡಲಿ?".... ಇಬ್ಬರೇ ಇದ್ದಿದ್ದರೆ ಆಶಾ ಏನು ಮಾಡುತ್ತಿದ್ದಳೋ. ಕುಣಿಯುತ್ತ ನನ್ನ ಭುಜವನ್ನು ಗಟ್ಟಿಯಾಗಿ ಹಿಡಿದು ಪಕ್ಕದ ಹೋಟೆಲಿಗೆ ಕರೆದುಕೊಂಡು ಹೋದಳು. ಬಾಯಿ ಸಿಹಿ ಮಾಡುತ್ತೇನೆಂದು.

"ನೀವು ಎಷ್ಟೊಂದು ಸುದೈವಿಗಳೆಂದರೆ? ಇನ್ನು ಬಿ.ಎಸ್.ಸಿ. ಅಷ್ಟೆ ಮುಗಿಸಿದ್ದೀರಿ. ಎಂ.ಎಸ್.ಸಿ.ಗೇ ಶಿಷ್ಯವೇತನ ದೊರಕಿಸಿ ಅಮೇರಿಕೆಗೆ ಹೊರಟಿದ್ದೀರಿ. ಹೆಣ್ಣು ಗೊತ್ತಾಗಿದೆ: ವಿದೇಶದಿಂದ ಮರಳಿದ ನಂತರ ಮದುವೆ..... ದೊಡ್ಡ ನೌಕರಿಗಳೂ ಕಾದಿವೆ. ನಿಮಗೇನು ಕಡಿಮೆಯಾಗಿದೆ? ತಮ್ಮ ಭಾವೀ ಅಳಿಯದೇವ ಅಮೇರಿಕೆಗೆ ಹೊರಟಿದ್ದಾನೆಂದರೆ ನಿಮ್ಮ ಮಾವನವರಿಗೆಷ್ಟು ಸಂತೋಷವಾಗುತ್ತಿತ್ತೊ ಏನೋ. ಆದರೆ ಈಗಲೇ ಹೇಳಿದರೆ ಕೆಲಸ ಕೆಡುತ್ತದೆಂದು ಸುಮ್ಮನಿರಬೇಕಾಗದೆ.... ನೀವೇಕೆ ಮಾತನಾಡಲೊಲ್ಲಿರಿ? ಮಾತನಾಡಲು ಅವಕಾಶ ಕೊಟ್ಟರೂ ಮಾತನಾಡಲೊಲ್ಲಿರಿ? ಬಾಯಿಗೇಕೆ ಬೀಗ?" ಎಂದು ನನ್ನ ಮುಖದತ್ತ ನೋಡಿದಳು.

"ನಿನ್ನಷ್ಟು ಕಲ್ಪನಾಲೋಕದಲ್ಲಿ ನಾನು ವಿಹರಿಸಲಾರೆ. ಅಮೇರಿಕೆಗೆ ಹೋಗಬೇಕಾದರೆ ಎಷ್ಟು ಕಷ್ಟನಷ್ಟಗಳನ್ನು ಸಹಿಸಬೇಕೆಂದು ಆಲೋಚಿಸಿದಾಗ ಮೈ ಜುಮ್ಮೆನ್ನುತ್ತದೆ."

"ನಿಮಗೆ ಬಂದ ಅಂತಹ ತೊಂದರೆಯೇನು?" ಗಂಭೀರವಾಗಿ ನನ್ನ ಕಡೆಗೆ ನೋಡಿದಳು.

ನಾನು ಸುಮ್ಮನಿದ್ದೆ. ವಾತಾವರಣ ತಿಳಿಯಾಗಲೆಂದು "ಆಶಾ, ನನ್ನ ರಾಣಿಯಾಗಲು ೨-೩ ವರ್ಷ ಕಾಲ ಬೇಕಲ್ಲ?" ಎಂದಾಗ ಲಜ್ಜೆಯಿಂದ ಮುಖ ತಗ್ಗಿಸಿದಳು. "ನೋಡು ಆಶಾ, ನನ್ನ ತಂದೆಗೆ ಪ್ರಾಯವಾಗಿದೆ. ನನ್ನ ಮದುವೆ ನೋಡಿಯೇ ಸಾಯಬೇಕೆಂದು ಅವರ ಹಿರಿಯಾಸೆ. ಇನ್ನು ಅಮೇರಿಕೆಯ ಪ್ರಯಾಣ, ಅಲ್ಲಿ ಹೋದ ಮೇಲೆ ಶಿಷ್ಯವೇತನ ದೊರೆಯುವದಾದರೂ ಪ್ರಯಾಣಕ್ಕೆ ೩-೪ ಸಾವಿರವಾದರೂ ಹಣ ಬೇಕು. ನನ್ನನ್ನು ಮಾರಿಕೊಂಡರೆ ನೂರು ರೂಪಾಯಿ ಕೂಡ ಹುಟ್ಟದು. ಹಣಕ್ಕೇನು ಮಾಡುವದು? ಎಂದು ಯೋಚಿಸುತ್ತಿದ್ದೇನೆ."

"ನನ್ನ ಹತ್ತಿರ ಇದ್ದರೆ ನಾನೇ ತೆಗೆದುಕೊಟ್ಟು ಬಿಡುತ್ತಿದ್ದೆ. ತಂದೆಯವರ ಹತ್ತಿರ ಮಾತನಾಡಿ ನೋಡಲೇ?"

"ದಯವಿಟ್ಟು ಆ ಗೊಡವೆಗೆ ಹೋಗಬೇಡ ಮಹಾರಾಯತಿ......ಈ ಪತ್ರ ದೊರಕಿದ ಕೂಡಲೇ ಪ್ರಿನ್ಸಿಪಾಲರ ಹತ್ತಿರ ಧಾವಿಸಿದೆ. ಅವರಿಗಾದ ಆನಂದಕ್ಕೆ ಮಿತಿಯೇ ಇಲ್ಲ....."

"ಅವರಿಗೆ ಮದುವೆಗೆ ಬೆಳೆದ ಮಗಳೊಬ್ಬಳು ಇಲ್ಲವಲ್ಲ?" "ಇದ್ದರೆ ನನಗೇನು ಹಾನಿ? ಒಬ್ಬರ ಬದಲಿಗೆ ಇಬ್ಬರು." ಆಶಾ ನಕ್ಕಳು. ಹಣದ ಕೊರತೆಯ ಬಗ್ಗೆ ಅವರಿಗೆ ವಿವರಿಸಿದಾಗ, "ಏನೂ ಹೆದರುವ ಕಾರಣವಿಲ್ಲ"ವೆಂದು ಹೇಳಿ, "ಅರ್ಜಿಯೊಂದನ್ನು ಕೊಡಲು ತಿಳಿಸಿದರು. ಕಾಲೇಜಿನಿಂದ ನಿನಗೆ ಸಾಲ ಸಿಗುವಂತೆ ಮಾಡುತ್ತೇನೆ. ಈ ಸಾಲಕ್ಕಾಗಿ ಮರಳಿದ ನಂತರ ಕಾಲೇಜಿನಲ್ಲಿ ೩ ವರ್ಷ ನೌಕರಿ ಮಾಡುತ್ತೇನೆಂದು ಬರೆದುಕೊಡಬೇಕಾಗುವದು. ಹಾಗೆ ಕೊಡುವದರಿಂದ ಯಾವ ಹಾನಿಯೂ ಇಲ್ಲ. ಒಂದೊಮ್ಮೆ ಕಾಲೇಜಿನಿಂದ ಸಾಲ ಸಿಗದಿದ್ದರೆ ನಾನೇ ಅಷ್ಟೊಂದು ರೊಕ್ಕಕ್ಕಾಗಿ ವ್ಯವಸ್ಥೆ ಮಾಡಬಲ್ಲೆ. ಆದ್ದರಿಂದ ಹೋಗುವದು ಖಂಡಿತವೆಂದೇ ತಿಳಿದು ತಯಾರಿ ನಡೆಸು" ಎಂದರು.

"ನೋಡಿ, ನೀವು ಕೈಕೊಂಡ ಕೆಲಸಗಳೆಲ್ಲ ಸುಗಮವಾಗಿ ನಡೆದು ಹೋಗುತ್ತವೆ. ನೀವು ಎಲ್ಲರ ಮೇಲೆ ಮಾಯಾಜಾಲ ಬೀಸುವಂತೆ ತೋರುತ್ತದೆ. ನನ್ನ ಮೇಲೂ ಅದನ್ನು ಬೀಸಿದ್ದಿರೇನು ಮತ್ತೆ!"

"ಬಹುಶಃ ನೀನೇ ಅಂತಹ ಮಾಟಗಾರ್ತಿ ಇರಬೇಕು" ಎಂದಾಗ ಇಬ್ಬರೂ ನಕ್ಕಿದ್ದೆವು.

ಒಂದೆರಡು ವಾರಗಳು ಕಳೆದಿರಬೇಕು. ಅಂದು ಶಿವಾಜಿ ಪಾರ್ಕಿನಲ್ಲಿ ತೆಂಗಿನ ಮರವೊಂದಕ್ಕೆ ಒರಗಿ ಶೇಂಗಾ ಅಗಿಯುತ್ತಾ ಕುಳಿತಿದ್ದೆವು. "ನೀವು ಅಮೇರಿಕೆಗೆ

ಹೋಗುವದು ಗೊತ್ತಾದ ದಿನ ನಾನೇನುಮಾಡಿದೆ ಗೊತ್ತೆ? ನಮ್ಮ ಮನೆಯ ಹತ್ತಿರವೇ ಗಣೇಶನ ಗುಡಿಯಿದೆ ಅಂದು ಅಲ್ಲಿ ಹೋಗಿ ಅವನಿಗೆ ಅಭಿವಂದನೆ ಸಲ್ಲಿಸಿ ನಿಮ್ಮ ಮುಂದಿನ ಯೋಗಕ್ಷೇಮದ ಹೊಣೆಯನ್ನು ಅವನಿಗೆ ಅರ್ಪಿಸಿದೆ ಇದನ್ನು ಕೇಳಿ ನೀವು ನಗುತ್ತೀರೆಂದು ಗೊತ್ತು. ಆದರೆ ಅದೆಲ್ಲ ನನಗೆ ಎಷ್ಟೋ ಸಮಾಧಾನ ತಂದಿತು."

"ಅಯ್ಯೋ! ನೀನು ಆ ಗಣಪನಿಗೆ ಶರಣು ಹೋಗಬೇಕೇ? ಒಂದು ದಿನ ನನಗೂ ಅವನಿಗೂ ಬಹಳ ಚಕಮಕಿಯಾಯಿತು. ಸಿಟ್ಟಿನ ಭರದಲ್ಲಿ ನಾನು ಹೋಗೋ, ಆನೆಯ ಸೊಂಡಿಲು ಹಚ್ಚಿಕೊಂಡು ತಿರುಗುವವನು, ನೀನೆಂತಹ ದೇವರು? ಎಂದು ಕೇಳಿ ಬಿಟ್ಟೆ. ಅವನು ಬಿಡದೇ ಒಂದು ದಿನ ತನ್ನ ಪರಾಕ್ರಮವನ್ನು ತೋರಿಸಿ ನೀನು ಮಣಿಯುವಂತೆ ಮಾಡದಿದ್ದರೆ ತನ್ನ ಉಳಿದ ಒಂದು ಶೂಲದ ಹಲ್ಲನ್ನೂ ಮುರಿದು ಬಿಡುತ್ತೇನೆಂದು ಪಣ ತೊಟ್ಟಿದ್ದನು. ಅದಕ್ಕೇ ನನ್ನ ಬೆನ್ನು ಬಿಡದೇ ನಿನ್ನ ತಲೆಯಲ್ಲಿ ಹೊಕ್ಕು ನನಗೆ ಬುದ್ಧಿ ಕಲಿಸಿದನಲ್ಲ! ಎನ್ನುತ್ತೇನೆ. ನೀನಾದರೂ ಎಂತಹ ಮಂಕು!"

"ಸಾಕು ಬಿಡಿ ನಿಮ್ಮ ಚೇಷ್ಟೆ. ದೇವರೂ ನಿಮ್ಮ ಚೇಷ್ಟೆಯಿಂದ ಹೊರಗಾಗಲಿಲ್ಲವೇ? ಅಂದ ಹಾಗೆ ನಿಮ್ಮ ತಂದೆಯವರಿಗೆ ಪತ್ರ ಬರೆದು ತಿಳಿಸಿದಿರಾ? ಅವರ ಅಭಿಪ್ರಾಯವೇನು?"

"ಅಮೇರಿಕೆಯಿಂದ ಪತ್ರ ಬಂದ ದಿನವೇ ಬರೆದೆ. ಕೂಡಲೇ ಉತ್ತರವನ್ನೂ ಬರೆದಿದ್ದಾರೆ ನಮ್ಮ ತಂದೆಯವರು. ನಾನು ವಿದೇಶದಿಂದ ಡಿಗ್ರಿ ಪಡೆದು ಮರಳಿದ ಮೇಲೆ ಆಗಬಹುದಾದ ಲಾಭಗಳ ಯಾದಿಯನ್ನೇ ಬರೆದಿದ್ದೆ. ಅದಕ್ಕವರು ಇದೆಲ್ಲ ನನಗೆ ತಿಳಿಯದು. ಆದರೆ ನಿನ್ನ ಅಭ್ಯುದಯದಲ್ಲಿ ನಮ್ಮೆಲ್ಲರ ಆನಂದವಿದೆ. ಆದ್ದರಿಂದ ಹಿಂದೆ ಮುಂದೆ ನೋಡದೇ ಹೊರಡುವ ತಯಾರಿ ನಡೆಸು. ಹೊರಡುವ ಮೊದಲು ಮಾತ್ರ ಊರಿಗೆ ಬರದೇ ಇರಬೇಡ....." ಎಂದು ಬರೆದಿದ್ದಾರೆ :

"ವಿದ್ಯಾವಂತರಲ್ಲದಿದ್ದರೂ ಎಷ್ಟು ಸುಸಂಸ್ಕೃತರಾಗಿದ್ದಾರೆ ನನ್ನ ಮಾವನವರು. ಎಷ್ಟು ಭಾರತೀಯ ತರುಣರಿಗೆ ತಾನೇ ಇಂಥ ವಿಶಾಲ ದೃಷ್ಟಿಯ ತಂದೆಯವರು ದೊರಕುತ್ತಾರೆ" ಎಂದು ಅಭಿಮಾನದಿಂದ ನನ್ನತ್ತ ನೋಡಿದ್ದಳು.

"ಕಾಲೇಜಿನವರು ನನಗೆ ಸಾಲವನ್ನು ಮಂಜೂರ ಮಾಡಿದ್ದಾರೆ. ಮೂರು ವರ್ಷ ನೌಕರಿ ಮಾಡಲಾಗದಿದ್ದರೆ ಶೇಕಡಾ ೬ ರಂತೆ ಬಡ್ಡಿ ಹಿಡಿದು ಸಾಲವನ್ನು ವಾಪಸು ಮಾಡಬೇಕೆಂದು ತಿಳಿಸಿದ್ದಾರೆ. ಅದಕ್ಕೆ ಪ್ರಿನ್ಸಿಪಾಲರು ಒಂದು ಉಪಾಯವನ್ನು ಸೂಚಿಸಿದ್ದಾರೆ. ನನಗೆ ಅಲ್ಲಿ ಶಿಷ್ಯವೇತನ ದೊರೆಯಲು ಪ್ರಾರಂಭವಾದ ಕೂಡಲೇ ೪ ೫ ಕಂತಿನಲ್ಲಿ ಸಾಲ ಮುಟ್ಟಿಸಬಹುದು. ಬಡ್ಡಿಯೂ ಹೆಚ್ಚಾಗಲಾರದು. ಮತ್ತು ಯಾವ

ಬಂಧನವೂ ಇರಲಾರದು! ಎಂದು ಹೇಳಿದ್ದಾರೆ. ಅದೇ ನನಗೆ ಸೂಕ್ತ ಎಂದು ಕಾಣುತ್ತದೆ."

"ಪ್ರಿನ್ಸಿಪಾಲರೇಕೋ ನಿಮ್ಮ ವಿಷಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿದಂತೆ ತೋರುತ್ತದೆ" ಎಂದು ತನ್ನ ಮುಖವನ್ನು ನನ್ನ ಹತ್ತಿರ ತಂದು ಅರ್ಥಪೂರ್ಣವಾಗಿ ನಕ್ಕಳು. "ನಾನು ಇನ್ನೂ ಒಂದು ಕೆಲಸ ಮಾಡಿಬಿಟ್ಟಿದ್ದೇನೆ. ನೀವು ವಿದೇಶಕ್ಕೆ ಹೋಗಬಹುದಾದ ಸಂತೋಷದಲ್ಲಿ ನನ್ನ ಗೆಳತಿಯರಿಗೆಲ್ಲ ಪಾರ್ಟಿ ಕೊಟ್ಟಿದ್ದೇನೆ. ಆದರೆ ಕಾರಣ ಮಾತ್ರ ಯಾರಿಗೂ ಹೇಳಲಿಲ್ಲ ಆದ್ದರಿಂದ ಒಬ್ಬೊಬ್ಬರೂ ತಮ್ಮ ಬುದ್ಧಿಮತ್ತೆಗೆ ಅನುಸಾರವಾಗಿ ಕಾರಣವನ್ನು ಊಹಿಸಿಕೊಂಡಿದದಾರೆ. ಒಬ್ಬಳು ನನ್ನ ಮದುವೆ ನಿಶ್ಚಯವಾಗಿದೆ ಎಂದು ತಿಳಿದುಕೊಂಡರೆ, ಇನ್ನೊಬ್ಬಳು ನನ್ನ ಜನ್ಮದಿನವಿರಬೇಕೆಂದು ನಂಬಿದ್ದಾಳೆ"

"ಅಂದರೆ, ಅಮೇರಿಕೆಗೆ ಹೊರಟವನು ನಾನಾದರೂ ನೀನು ಮಾತ್ರ ಮೋಜಾಗಿದ್ದೀ ಎಂದು ಹೇಳಬಾರದೇ?"

"ಹೆಂಡತಿಯಾಗುವವಳಿಗೆ ಸುಖದುಃಖಗಳಲ್ಲಿ ಸಮಪಾಲು ಎಂದು ಗೊತ್ತಿಲ್ಲವೇ ನಿಮಗೆ?"

"ಆಶಾ, ನಿನಗೆ ನನ್ನ ಅಭ್ಯುದಯದಲ್ಲಿ ಎಷ್ಟೊಂದು ಅಭಿಮಾನ. ಮದುವೆಯಾದ ಹೆಂಡತಿಗೆ ಕೂಡ ಇಷ್ಟೊಂದು ಅಭಿಮಾನ ಇರುತ್ತದೋ ಇಲ್ಲವೋ!" ಎಂದಾಗ ಅವಳ ಕಣ್ಣು ತೇವವಾಗಿದ್ದವು.

"ದೇವರು ನಮ್ಮನ್ನು ಒಬ್ಬರಿಗಾಗಿ ಇನ್ನೊಬ್ಬರನ್ನು ನಿರ್ಮಿಸಿದ್ದಾನೆ, ದೊರೆ!" ಎಂದು ಮಾತು ಮುಗಿಸಿದ್ದಳು.

ವಿದೇಶಕ್ಕೆ ಹೊರಡುವ ದಿನಗಳು ಸಮೀಪಿಸಿದಂತೆ ಕೆಲಸಗಳು ಬೆಳೆಯುತ್ತಿದ್ದವು. ಪಾಸಪೋರ್ಟಿಗಾಗಿ ಸುತ್ತಾಡುವದು, ರಿಝರ್ವ ಬ್ಯಾಂಕಿಗೆ ಹೋಗುವದು, ಡಾಕ್ಟರರ ಹತ್ತಿರ ಹೋಗುವದು, ಅಮೇರಿಕೆಯ ರಾಯಭಾರಿ ಕಛೇರಿಗೆ ಎಡತಾಕುವದು. ಇದರಲ್ಲೇ ಹೆಚ್ಚಿನ ಸಮಯ ಕಳೆಯಿತು. ಭಾರತದಲ್ಲಿ ಎಷ್ಟು ಸಣ್ಣ ಕೆಲಸವಿದ್ದರೂ ವಿಘ್ನೇಶ್ವರನ ಕೃಪೆಯಿಲ್ಲದೇ ನಡೆಯುವುದಿಲ್ಲವೆಂದು ಶೀಘ್ರದಲ್ಲೇ ತಿಳಿದುಕೊಂಡೆ. ಒಂದು ದೃಷ್ಟಿಯಲ್ಲಿ ಭಾರತದಲ್ಲಿ ಪ್ರತಿಯೊಬ್ಬ ಅಧಿಕಾರಿಯೂ ಗಣಪನೇ. ಹಗಲಿರುಳು ಮೋದಕಗಳಿಗಾಗಿ ಸೊಂಡಿಲನ್ನು ಚಾಚಿಯೇ ಇರುತ್ತಾನೆ. ಮೋದಕ ಕೊಡದೇ ಕೆಲಸ ಮಾಡಿಸುವ ಹಠ ನನ್ನದಾದ್ದರಿಂದ ನಾನು ಇನ್ನೂ ಹೆಚ್ಚು ದುಡಿಯಬೇಕಾಯಿತು.

ವಿದೇಶಕ್ಕೆ ಹೊರಡುವ ಹತ್ತು ದಿನ ಮುಂಚಿತವಾಗಿ ಊರಿಗೆ ಹೋಗಿ ಬಂದಿದ್ದೆ. ಅದಕ್ಕೂ ಮೊದಲು ಪ್ರಿನ್ಸಿಪಾಲರು ತಮ್ಮಲ್ಲಿ ಚಹಕ್ಕೆ ಕರೆದರು. ಚಹ ಕುಡಿಯುತ್ತ ಲೋಕಾಭಿರಾಮವಾಗಿ ಮಾತನಾಡುತ್ತ ಭಾರತೀಯ ವಿದ್ಯಾರ್ಥಿಗಳು ವಿದೇಶಕ್ಕೆ ಹೋದಾಗ ಎಷ್ಟು ತಪಸ್ಸಿನ ಜೀವನ ನಡೆಸಬೇಕೆಂದು ಒಂದು ಚಿಕ್ಕ ಭಾಷಣವನ್ನೇ ಬಿಗಿದರು. ''ನಮ್ಮ ಸಂಸ್ಕೃತಿ ಬೇರೆ. ಅವರದು ಬೇರೆ. ನಮ್ಮ ಅವರ ಆಚಾರ-ವಿಚಾರಗಳು ಬಹಳ ಭಿನ್ನವಾಗಿವೆ. ಇದರಲ್ಲಿ ಯಾವದು ಶ್ರೇಷ್ಠ ಎಂದು ನಾನು ಹೇಳಲು ಹೊರಟಿಲ್ಲ.

ಆದರೆ ನಾವು ಎಲ್ಲಕ್ಕೂ ಮೊದಲು ಅವರನ್ನು ಸರಿಯಾಗಿ ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಇಲ್ಲಿ ಸಹಪಾಠಿಗಳು ಗೆಳೆಯರಾಗಿರುವಂತೆ, ಅಲ್ಲಿ, ಇಲ್ಲಿಗಿಂತ ಹೆಚ್ಚಿನ ಆತ್ಮೀಯತೆಯಿಂದ ಹುಡುಗ-ಹುಡುಗಿಯರು ಇರುತ್ತಾರೆ. ಈ ಆತ್ಮೀಯತೆಯನ್ನು ಭಾರತೀಯ ವಿದ್ಯಾರ್ಥಿಗಳು ಪ್ರೇಮವೆಂದು ಬಗೆದಿರುತ್ತಾರೆ. ಮತ್ತು ತಾವೂ ಇಂಥದರಲ್ಲಿ ಧುಮುಕುತ್ತಾರೆ. ನಮ್ಮ ಸಮಾಜದಲ್ಲಿ ಕಟ್ಟುನಿಟ್ಟುಗಳು ಇರುವಂತೆ ಅವರ ಸಮಾಜದಲ್ಲಿ ಇರುತ್ತವೆ. ಆದ್ದರಿಂದ ಹೆಚ್ಚು ಸ್ನೇಹ ಬೆಳೆಸಿದ ಕುಮಾರಿ ಮದುವೆಯ ಒತ್ತಾಯವನ್ನು ತರುತ್ತಾಳೆ. ಆ ಮೇಲೆ ಪ್ರೇಮದಲ್ಲಿ ಧುಮುಕಿದ ಯುವಕ ಬಲೆಯಲ್ಲಿ ಸಿಕ್ಕಿಬಿದ್ದ ಮೀನಿನಂತೆ ಚಡಪಡಿಸುತ್ತಲೇ ಮದುವೆಗೆ ಒಪ್ಪಿಗೆ ಕೊಡುತ್ತಾನೆ. ಒಮ್ಮೆ ಮದುವೆಯಾಯಿತು ಎಂದರೆ ತಾಪತ್ರಯಗಳು ಹೆಚ್ಚುತ್ತಲೇ ಹೋಗುತ್ತವೆ. ವಿದ್ಯಾಭ್ಯಾಸ ನಿಂತು ಹೋಗುತ್ತದೆ......... ಕೆಲವು ವಿದ್ಯಾರ್ಥಿಗಳು ಇದಕ್ಕೂ ಮುಂದೆ ಹೋಗಿರುತ್ತಾರೆ. ಅಮೇರಿಕೆ, ಇರುಳ ಜೀವನ (Night life)ಕ್ಕೆ ಪ್ರಖ್ಯಾತವಾದ ದೇಶ. ಹೆಂಡ, ಹೆಣ್ಣು, ಜೂಜುಗಳಿಗೆ ಏನೂ ಕಡಿಮೆಯಿಲ್ಲ. ಆ ದೇಶದಲ್ಲಿ ಒಮ್ಮೆ ಇವುಗಳ ಸವಿ ಹತ್ತಿತೆಂದರೆ ಅವುಗಳಲ್ಲಿಯೇ ಸ್ವರ್ಗ ಕಾಣುತ್ತಾರೆ. ನೀನು ಇಂತಹ ಸಲ್ಲದ ಗೊಡವೆಗಳಿಗೆ ಹೋಗುವವನಲ್ಲವೆಂದು ಗೊತ್ತು. ಆದರೂ ನಿನಗೆ ಗೊತ್ತಿರಲೆಂದು ಹೇಳಿದೆ. ನೀನು ಸುಸಂಸ್ಕೃತ ಭಾರತೀಯನಂತೆ ಅಲ್ಲಿ ನಡೆದುಕೊಂಡು, ನಮ್ಮ ದೇಶದ, ವಿಶ್ವವಿದ್ಯಾಲಯದ, ಕಾಲೇಜಿನ ಹೆಸರು ಮುಂದೆ ತರುವಿಯೆಂದು ಆತ್ಮವಿಶ್ವಾಸವಿದೆ" ಎಂದು ಹರಿಸಿ ಬೀಳ್ಕೊಟ್ಟರು. ನಾನಾದರೂ ಅವರಿಗೆ ವಿಶ್ವಾಸ ಪಾತ್ರನಾಗುವ ಅಭಿವಚನ ಕೊಟ್ಟು ಬಂದಿದ್ದೆ.

ಮರುದಿನ ಊರಿಗೆ ಹೋಗುವದಕ್ಕೆಂದು ಆಶಾಳನ್ನು ಭೆಟ್ಟಿಯಾಗಲು, ಹೋದಾಗ ಪ್ರಿನ್ಸಿಪಾಲರ ಬುದ್ಧಿ ಮಾತುಗಳನ್ನು ಅವಳಿಗೆ ಹೇಳಿದ್ದೆ. ಬಹುಶಃ ಈ ಬುದ್ಧಿಮಾತುಗಳನ್ನು ಅವರು ಟೇಪರಿಕಾರ್ಡ ಮಾಡಿಟ್ಟಿರಬೇಕೆಂದು ಆಶಾ ನಕ್ಕಿದ್ದಳು.

* * *

ಹಡಗವು ಒಮ್ಮೆಲೇ ವೇಗವನ್ನು ಕಡಿಮೆ ಮಾಡಿ ನಂತರ ಸ್ತಬ್ಧವಾಯಿತು. ಸುಯೇಝು ಕಾಲುವೆಗೆ ಬಂದು ತಲುಪಿದ್ದೇವೆ. ಆದರೆ ಕಾಲುವೆಯಲ್ಲಿ ಪ್ರವೇಶಿಸಲು ಇನ್ನೂ ಪರವಾನಗಿ ಸಿಗದ್ದರಿಂದ ಇಲ್ಲಿ ನಿಲ್ಲಬೇಕಾಯಿತು! ಎಂದು ಧ್ವನಿಮುದ್ರಿಕೆ ಹೇಳಿತು. ಹಡಗದ ಮಹಡಿಯನ್ನು ಹತ್ತಿಹೋಗಿ ಹೊರಗಿನ ದೃಶ್ಯವನ್ನು ನೋಡುತ್ತ ನಿಂತ ಅರುಣ.

೭

ಮರಳನ್ನು ಬ್ರೆಡ್ಡಿನಂತೆ ಕೊಯ್ದು, ಮಾನವ ನಿರ್ಮಿತ ಸುಯೇಝು ಕಾಲುವೆ ನೋಡುತ್ತಿದ್ದಂತೆ ಹಿಂದಿನ ಬಾರಿ ಇದೇ ಕಾಲುವೆ ನೋಡಿ ಉತ್ಸಾಹ ಭರದಲ್ಲಿ ಅದರ ಸಂಪೂರ್ಣ ವರ್ಣನೆಯನ್ನು ಆಶಾಳಿಗೆ ಬರೆದದ್ದು ನೆನಪಾಯಿತು. ಆಶಾಳ ಉತ್ತರರೂಪವಾಗಿ ಬಂದ (ತಾನು ಪ್ರವಾಸ ಕೈಕೊಂಡ ನಂತರ ಬಂದ ಮೊದಲ ಪತ್ರವಾಗಿತ್ತು ಅದು-) ಪತ್ರ ಪೋರ್ಟ ಸೈಯದದಲ್ಲಿ ಕೈ ಸೇರಿದಾಗ ಗಗನಕ್ಕೆ ನಾಲ್ಕೇ ಬೆರಳು ಉಳಿದಿದ್ದವು.

"ಪ್ರಾಣನಾಥ,

ನೀವಿಲ್ಲದ ಮುಂಬೈ ನನ್ನ ಪಾಲಿಗೆ ಶೂನ್ಯವಾಗಿದೆ. ಪ್ರತಿ ನಿಮಿಷ ನಿಮ್ಮನ್ನು ನೆನೆಯುತ್ತೇನೆ. ಏನಾದರೂ ಸ್ವಾರಸ್ಯ ಘಟನೆ ಜರುಗಿದರೆ ನಿಮಗೆ ಹೇಳುವ ಆತುರದಲ್ಲಿರುತ್ತೇನೆ. ಕೂಡಲೇ ನೀವು ವಿದೇಶಕ್ಕೊ ಹೊರಟದ್ದು ನೆನಪಾಗಿ ನಿರಾಶಳಾಗುತ್ತೇನೆ. ಆದರೆ ಡೈರಿಯಲ್ಲಿ ಅವನ್ನೆಲ್ಲ ಬರೆದಿಡುತ್ತೇನೆ. ನೀವು ಹೊರಟಾಗಿನಿಂದ ಡೈರಿ ಬರೆಯಲು ಪ್ರಾರಂಭಿಸಿದ್ದೇನೆ. ನನ್ನ ಬೇಸರ ಕಳೆಯಲು ನೀವೇಕೆ ಉದ್ದ, ಎಂದೂ ಮುಗಿಯದ ಪತ್ರ ಬರೆಯಬಾರದು? ನೀವು ಹಡಗದಿಂದ ಬರೆದ ಪತ್ರವನ್ನು ಓದಿ ನಾನೂ ನಿಮ್ಮೊಟ್ಟಿಗೆ ಹೊರಟಷ್ಟು ಸಂತೋಷವಾಯಿತು. ಆದರೆ ನಿಮ್ಮ ಪತ್ರ ನನ್ನ ಕೈ ಸೇರಲು ಸಾಕಷ್ಟು ವಿಳಂಬವಾಗುತ್ತದೆ. ಮುಂಬೈಗೆ ಅದು ಬಂದು ತಲುಪಿದನಂತರ ಅನೇಕರ ಕೈಗೆ ಹೋಗಿ ಆ ಮೇಲೆ ನನ್ನ ಕೈಗೆ ಬಂದಿರುತ್ತದೆ. ಪ್ರಭಾಳಿಗೆ ಆಫೀಸ ಇನ್ಸ್‌ಪೆಕ್ಶನ್ ಇದೆಯಂತೆ. ಹೀಗಾಗಿ ಬಿಡುವಾದಾಗ ಬಂದು ಪತ್ರ ಕೊಟ್ಟು ಹೋಗುತ್ತಾಳೆ. ಬೇಗ ನಿಮ್ಮ ಪತ್ರ ನನ್ನ ಕೈಸೇರಲು ಏನು ಮಾಡುವದು ಎಂದು ಯೋಚಿಸುತ್ತಿದ್ದೇನೆ. ದೊರೆ, ಬೇಗ ಪತ್ರ ಬರೆಯುವಿರಲ್ಲವೇ? ಸುಮ್ಮನೇ ನನ್ನನ್ನು ಕಾಯಿಸಬೇಡಿ."

ನಿಮ್ಮ ಆಶಾ

ಇದಕ್ಕೆ ಉತ್ತರವಾಗಿ ಮೋಜಾಗಿ ಪತ್ರ ಬರೆದಿದ್ದೆ. ಅದು ಪ್ರಸಿದ್ಧ ಕತೆ "ಹೆಂಡತಿಯ ಕಾಗದದ" ಮೇಲೆ ಆಧಾರಿತವಾಗಿತ್ತು.

ಆಶಾರಾಣಿ,

ನಿನ್ನ ಪತ್ರ ಮುಟ್ಟಿದೆ. ನಿಮ್ಮ ಆಜ್ಞೆಯಂತೆ ಎಂದೆಂದಿಗೂ ಮುಗಿಯಲಾರದ ಉದ್ದ ಪತ್ರ ಬರೆಯಲು ಯತ್ನಿಸುತ್ತೇನೆ. ಒಂದು ಊರಿನಲ್ಲಿ ಒಬ್ಬ ನವಯುವಕನಿದ್ದ. ಅವನು ಹೊಸದಾಗಿ ಮದುವೆಯಾಗಿದ್ದ. ಅವನ ಪತ್ನಿ ಸುಂದರಿಯೂ, ಚತುರಿಯೂ ಆಗಿದ್ದಳು. ಅವಳ ಸೌಂದರ್ಯಕ್ಕೆ ಅವನು ಮಾರು ಹೋಗಿದ್ದ. ಒಮ್ಮೆ ಕಾರಣವಶಾತ್ ಪತಿದೇವರಿಗೆ ಬೇರೊಂದು ಊರಿಗೆ ಕೆಲವು ದಿನಗಳ ಮಟ್ಟಿಗೆ ಹೋಗಬೇಕಾಗಿ ಬಂದಿತು. ಪತ್ನಿಯನ್ನು ಸಂಗಡ ಒಯ್ಯಲಾರದೇ, ಬಿಟ್ಟು ಹೋಗಲಾರದೇ ಬಹಳ ಚಡಪಡಿಸಿದ. ಕೊನೆಗೆ ಬಹಳಷ್ಟು ಆಲೋಚಿಸಿ ಹೆಂಡತಿಯೊಡನೆ ಪತ್ರ ಸಂಪರ್ಕವಿರಿಸಿಯಾದರೂ ಅವಳ ಸಾನ್ನಿಧ್ಯವನ್ನು ನೆನೆಸಲು ಉಪಾಯವೊಂದನ್ನು ಹುಡುಕಿದ. ಹೊರಡುವ ಮೊದಲು ಪತ್ನಿಗೆ ತಾನು ಅಲ್ಲಿರುವಷ್ಟು ದಿನ ಓದಿ ಮುಗಿಸಲಾರದಷ್ಟು ಉದ್ದ ಪತ್ರ ಬರೆಯಲು ಆದೇಶವಿತ್ತು ಹೊರಟುಹೋದ.

ಇತ್ತ ಪತ್ನಿ ಇಷ್ಟೊಂದು ಉದ್ದ ಪತ್ರ ಹೇಗೆ ಬರೆಯುವುದೆಂದು ಯೋಚಿಸಿ ಯೋಚಿಸಿ ದಣಿದಳು. ಕೊನೆಗೊಮ್ಮೆ ಏನೋ ಹೊಳೆದು ಹಾಳೆ ಮತ್ತು ಪೆನ್ ತೆಗೆದುಕೊಂಡು ಬರೆಯಲಾರಂಭಿಸಿದಳು. ನನ್ನ ಹೃದಯೇಶ್ವರಾ, ನೀವಿಲ್ಲದೇ ನಾನು ಬಹಳ ಚಡಪಡಿಸುತ್ತಿದ್ದೇನೆ. ಹಿಂದಿನ ರಾತ್ರಿಯೆಲ್ಲ ನೀವಿಲ್ಲದೇ ಒಂದು ಕ್ಷಣ ಕೂಡ ನಿದ್ರಿಸದಾದೆ" ಎಂದು ಏನೇನೋ ಬರೆದು ಪೇಜಿನ ಕೊನೆಯಲ್ಲಿ ಪುಟ ತಿರುವಿರಿ ಎಂದು ಬರೆದು ಎರಡನೇ ಪುಟದ ಕೊನೆಗೂ ಪುಟ ತಿರುವಿ ಓದಿರಿ ಎಂದು, ಇದೇ ವಾಕ್ಯವನ್ನು ಇನ್ನೂ ಕೆಲ ಪುಟಗಳಲ್ಲಿ ಬರೆದು ಕಳಿಸಿದಳು. ಅವನು ಪತ್ನಿಯಿಂದ ದೂರವಿದ್ದ ದಿನಗಳೆಲ್ಲವನ್ನೂ ಪುಟ ತಿರುವಿ ಓದುವದರಲ್ಲಿಯೇ ಕಳೆದನು. ಅವನು ಈ ಉದ್ದ ಪತ್ರವನ್ನು ಓದಿ ಮುಗಿಸಿದ ನಂತರ ಮುಂದಿನ ಕಥೆಯನ್ನು ಬರೆಯುತ್ತೇನೆ. ಅಲ್ಲಿಯ ತನಕ ಆಕೆಯ ಪತ್ರವನ್ನು ನೀನೂ ಓದುತ್ತ ಇರಬಾರದೇಕೆ?

ನಿನ್ನ ಇಂತೀ ಆಶೆಯನ್ನು ಪೂರ್ತಿಗೊಳಿಸಿದ
ಅರುಣ

ಇದಕ್ಕೆ ಉತ್ತರವಾಗಿ, ಪತ್ರ ಬರೆಯುವ ನಿಮ್ಮ ಚಾತುರ್ಯವನ್ನು ಮೆಚ್ಚಿದ್ದೇನೆ! ಎಂದು ಒಂದು ಮೊಟಕು ಪತ್ರ ಬಂದಿತ್ತು. ಮುಂದೆ ಮಾಲ್ಟಾದಿಂದ ಹಡಗ ಬರುವ ಮೊದಲೇ ಇನ್ನೊಂದು ಪತ್ರ ಹಾಕಿದ್ದೆ. ಅದಕ್ಕೆ ಉತ್ತರ ನೇಪಲ್ಸ್ ತಲುಪಿದಾಗ ಸಿಕ್ಕಿತ್ತು. ಆಗಿನ ದಿನಗಳೆಷ್ಟು ಉತ್ಸಾಹ ಪೂರ್ಣವಾಗಿದ್ದವು! ಆಶಾಳ ಪ್ರತಿಯೊಂದು ಪತ್ರವನ್ನೂ, ಅವಳ ಪ್ರತಿ ಪತ್ರಕ್ಕೆ ಬರೇ ಉತ್ತರರೂಪೀ ಪತ್ರಗಳ ಪ್ರತಿಯೊಂದು ಮಾಡಿ ಕೂಡಿಡುತ್ತಿದ್ದೆ. ಈ ವರ್ಷಗಳಲ್ಲೆಲ್ಲ ಎಷ್ಟೊಂದು ಜಾಗರೂಕತೆಯಿಂದ ಕಾಯ್ದು ಜೋಡಿಸಿ ಇಟ್ಟಿದ್ದೆ.

ನನ್ನ ಇಂತಹ ಶಿಸ್ತು ನೋಡಿದವರು, ಇವೆಲ್ಲ ದೊಡ್ಡ ಮನುಷ್ಯರಾಗುವವರ ಲಕ್ಷಣಗಳೆಂದು ನನ್ನ ಗೇಲಿ ಮಾಡುತ್ತಿದ್ದರು. ಆ ಪತ್ರಗಳನ್ನೆಲ್ಲ ಕಾಯ್ದಿಟ್ಟ ಲಾಭವಾದರೂ ಏನಾಯಿತು? ನನ್ನ-ಆಶಾಳ ಪ್ರೇಮದ ದ್ಯೋತಕವೆಂದು ಅವುಗಳನ್ನೆಲ್ಲ ಪುಸ್ತಕ ರೂಪದಲ್ಲಿ ಪ್ರಸಿದ್ಧಿಸುವ ಹಂಬಲ ಇಟ್ಟುಕೊಂಡಿದ್ದೆ. ಆದರೆ ಆಶಾಳೇ ಕೈ ಬಿಟ್ಟು ಹೋದಾಗ ಆ ಪತ್ರಗಳನ್ನು ಇಟ್ಟು ಪ್ರಯೋಜನವೇನು? ಅವನ್ನು ಕಾಯ್ದಿಟ್ಟು ಮತ್ತೆ ಮತ್ತೆ ಓದಿ ಬವಣೆಯಾಗುತ್ತಿದೆ. ಅದಕ್ಕಿಂತ ಅವು ಕಣ್ಣೆದುರು ಇರದಂತೆ ನಾಶ ಮಾಡಿದರೇ ಮನಃಶಾಂತಿ ದೊರಕೀತೆಂಬ ಭಾವನೆ ಅರುಣನಲ್ಲಿ ಮೂಡಿ ಬಂದಿತು. ದಿಗ್ಗನೆ ಎದ್ದು ತನ್ನ ಖೋಲಿಗೆ ಧಾವಿಸಿದ. ಟ್ರಂಕನ್ನು ಎಳೆದು ಸುಂದರವಾದ ಕರಿಯ ಫಾಯಲ್ ಒಂದನ್ನು ಹೊರಗೆಳೆದ. ಅದನ್ನು ತೆಗೆದುಕೊಂಡು ಮತ್ತೆ ಮಹಡಿಯನ್ನೇರಿ ಡೆಕ್ಕಿನ ಮೂಲೆಯ ತನ್ನ ಸ್ಥಳಕ್ಕೆ ಬಂದ. ಮಹಾಸಾಗರದ ಅಡಿಯಲ್ಲಿ ಚಿರಸಮಾಧಿ ಮಾಡಲೆಂದು ಫಾಯಲನ್ನು ಎತ್ತಿದ. ಅರೆಗಳಿಗೆ ವಿಚಾರ ಮಾಡಿದ. ನೀರಿಗೆ ಒಗೆಯುವ ಮೊದಲು ಈ ಹಿಂದೆ ಎಷ್ಟೊಂದು ಸಂತಸ ತಂದ ಈ ಪತ್ರಗಳನ್ನು ಇನ್ನೊಮ್ಮೆ ಓದಬಹುದಲ್ಲ! ಎಂದು ಮನಸ್ಸು ನುಡಿಯಿತು. ಕುರ್ಚಿಯೊಂದನ್ನು ಎಳೆದುಕೊಂಡು ಹಾಳೆಗಳನ್ನು ತಿರುವಲಾರಂಭಿಸಿದ. ಮೂರು ವರ್ಷಗಳ ತನ್ನ ಜೀವನವನ್ನು ಕನ್ನಡಿಯಂತೆ ಆ ಪತ್ರಗಳಲ್ಲಿ ಕಾಣಬಹುದಾಗಿತ್ತು. ಪುಟಗಳನ್ನು ಎಷ್ಟೊ ಹೊತ್ತು ತಿರುವಿದ. ಸಮಾಧಾನವಾಗಲಿಲ್ಲ. ಮೊದಲಿನಿಂದ ಪ್ರಾರಂಭಿಸಿದ.

* * *

ಒಂದೆರಡು ಸಾಲು ಓದುವದರಲ್ಲಿ ಗತನೆನಹುಗಳು ಓದನ್ನು ಹಿಂದೆ ಹಾಕಿ ಮುಂದೋಡಿದವು. ಪತ್ರವನ್ನು ಓದಲಾಗಲಿಲ್ಲ. ಮುಗಿಲತ್ತ ಕಣ್ಣೆತ್ತಿದಾಗ ಸ್ಮೃತಿಪಟಲ ತೋರುತ್ತಿದ್ದ ತನ್ನ ಜೀವನ ಚಿತ್ರವನ್ನು ಎವೆಯಿಕ್ಕದೇ ನೋಡತೊಡಗಿದ.

"ಅಂದು ಹಡಗು ನನ್ನನ್ನು ಆಶಾಳಿಂದ ದೂರ ದೂರ ಒಯ್ಯುತ್ತಿದ್ದರೂ ಆಶಾ ನನ್ನ ಸರ್ವಾಂಗವನ್ನು ವ್ಯಾಪಿಸಿದಂತೆ ಭಾಸವಾಗುತ್ತಿತ್ತು. ಆಶಾ ಮೀನಿನಂತೆ ಈಸಿ ನನ್ನನ್ನು ಸೇರಿಕೊಳ್ಳಬಾರದೇ? ಅವಳು ಹೆಣ್ಣಾದ್ದರಿಂದ ಬರಲಾಗದಿದ್ದರೆ ನಾನು ಗಂಡಾಗಿ ಅವಳ ಹತ್ತಿರ ಹೋಗುವಂತೆ ಆಗಬಾರದೇ? ಓ..... ಜೀವನದ ಪರಿಪೂರ್ಣತೆಗೆ ಪರದೇಶ ಪ್ರವಾಸ ಅಗತ್ಯವೇ? ಬಹುಸಂಖ್ಯಾತ ಭಾರತೀಯರು, ಜೀವನವಿಡೀ ತಮ್ಮ ಹುಟ್ಟೂರು ಬಿಟ್ಟು ಕದಲದಿರುವಾಗ ನಾನು ಅಮೇರಿಕೆಗೆ ಹೋಗದಿದ್ದರೆ ಆಕಾಶ ಭೂಮಿಗೆ ಇಳಿಯುತ್ತಿರಲಿಲ್ಲ.....ಹಾಗಾದರೆ ಮುಂದಿನ ಬಂದರದಲ್ಲಿ ಇಳಿದು ಆಶಾಳತ್ತ ಹೋಗಲೇ.... ಛೇ! ಛೇ! ಎಂಥ ವಿಚಾರ. ಆಶಾಳು ನನ್ನ ಬಗ್ಗೆ ಏನು ತಿಳಿದುಕೊಂಡಾಳು? ಅಯೋಗ್ಯ, ಉತ್ತರಕುಮಾರ! ಎಂದುಕೊಂಡಾಳು. ಇದರ

ಬದಲಾಗಿ ವಿದ್ಯಾಭ್ಯಾಸವನ್ನು ಆದಷ್ಟು ಬೇಗ ಮುಗಿಸಿ ಮರಳಿ ಬಂದು ಅವಳಿಗೆ ಯೋಗ್ಯ ವರನೆಂದು ಸಿದ್ಧ ಮಾಡಬೇಕು. ಅದೇ ಯೋಗ್ಯ! ಎಂಬ ತೀರ್ಮಾನಕ್ಕೆ ಬಂದಾಗ ನಿರಭ್ರ ಆಕಾಶದಂತೆ ಮನಸ್ಸು ತಿಳಿಯಾಗಿತ್ತು. ಡೆಕ್ಕಿನ ಮೇಲೆ ನಿಂತು ನನ್ನಿಂದ ದೂರ ದೂರ ತೇಲಿ ಹೋಗುತ್ತಿದ್ದ ಮುಂಬಯಿ ಮಹಾನಗರ ನೋಡಿದ್ದೆ. ನಗರದ ನೂರಾರು ಕಟ್ಟಡಗಳು, ಸಾವಿರಾರು ದೀಪಗಳು ಕೈಬೀಸಿ ನನ್ನನ್ನು ಬೀಳ್ಕೊಂಡಿದ್ದವು. ದೂರದಲ್ಲಿ ಭೂಮಿತಾಯಿ ಭಾರತಮಾತೆ, ಅನ್ಯಮನಸ್ಕಳಾಗಿ ನಿಂತಂತಿತ್ತು. "ಒಬ್ಬ ಕುಮಾರನು ಪರದೇಶ ಯಾತ್ರೆ ಬೆಳೆಸಿದರೇನಂತೆ. ಉಳಿದ ಐವತ್ತು ಕೋಟಿ ಮಕ್ಕಳು ಹೊಟ್ಟೆಗಿಲ್ಲದೇ ಬಳಲುವದು ಕಡಿಮೆಯಾದೀತೇ? ಇಂತಹ ಹಲವಾರು ಪುತ್ರರನ್ನು ನೋಡಿದ್ದೇನೆ. ಅವರು ಐಶ್ವರ್ಯ, ಸುಖಗಳಿಗೆ ಬಲಿಬಿದ್ದು ತಮ್ಮ ತಾಯಿಯನ್ನೇ ಮರೆತು ಬಂಧು ಬಳಗವನ್ನು ಅಲಕ್ಷಿಸಿ, ಅನ್ನಕ್ಕಾಗಿ ಬಾಲ ಬಡಿಯುವ ನಾಯಿಯಂತೆ ಬಿದ್ದಿರುತ್ತಾರೆ ಪರದೇಶದಲ್ಲಿ. ಇಂಥವರಿಗೆ ಧಿಕ್ಕಾರವಿರಲಿ!" ಎಂದು ಆಕೆ ಗುಡುಗಿದಂತೆ ಆಗಿತ್ತು. ಅಂತಯೇ "ತಾಯಿ, ನೀನು ಈ ಮಗನನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ನಾನು ಎಲ್ಲಿಯೇ ಇರಲಿ ಹೇಗೆಯೇ ಇರಲಿ, ಭಾರತೀಯನಂತೆ ಉಳಿಯುವೆ. ಯಾವ ಹೊತ್ತಿಗಾದರೂ, ಯಾವ ಕಾರಣಕ್ಕಾಗಿಯೇ ಆದರೂ ನಿನ್ನ ಕರೆ ಬಂದರೆ ಎಲ್ಲ ಬಂಧನಗಳನ್ನು ಹರಿದು ನಿನ್ನ ಹತ್ತಿರ ಧಾವಿಸುವೆ. ನನ್ನ ದೀನ ಬಾಂಧವರಿಗಾಗಿ, ಮೈಯಲ್ಲಿ ತ್ರಾಣವಿರುವ ತನಕ ಹೋರಾಡುವೆ ಈ ಕನಸುಗಳನ್ನೆಲ್ಲ ನನಸಾಗಿ ಮಾಡಲು ನಿನ್ನ ಅನುಗ್ರಹ ಸದಾ ನನ್ನ ಮೇಲೆ ಇರಬೇಕು" ಎಂದಾಗ ಯಾವದೋ ಕಾಣದ ಕೈ ನನ್ನ ತಲೆಯನ್ನು ನೇವರಿಸಿದಂತೆ ಭಾಸವಾಗಿ ಪ್ರಫುಲ್ಲಿತನಾಗಿದ್ದೆ.

ಹಡಗದಲ್ಲಿ ದಿನವಿಡೀ ಕಾರ್ಯಕ್ರಮಗಳಿದ್ದರೂ ಅವುಗಳಲ್ಲಿ ಆಸಕ್ತಿಯೆನಿಸುತ್ತಿರಲಿಲ್ಲ. ಹಡಗದತ್ತ ಧಾವಿಸಿ ಬರುತ್ತಿರುವ ತೆರೆಗಳು ಆಶಾಳಿಂದ ಯಾವದೋ ಸಂದೇಶ ಹೊತ್ತು ತಂದಂತೆ ಭಾಸವಾಗುತ್ತಿತ್ತು. ಅವಳೂ ನನ್ನೊಟ್ಟಿಗೆ ಇಲ್ಲಿ ಇರುವಂತಾಗಿದ್ದರೆ ಹಿಂದಿನ, ಇಂದಿನ, ಮುಂದಿನ ವಿಚಾರಗಳನ್ನೆಲ್ಲ ಚರ್ಚಿಸಬಹುದಾಗಿತ್ತು. ಆಕೆಯನ್ನು ಇನ್ನಾವ ವಿಧದಲ್ಲಿಯಾದರೂ ಕೆರಳಿಸಬಹುದಾಗಿತ್ತು.......ಈಗ ಆಕೆ ಏನು ಮಾಡುತ್ತಿರಬಹುದು? ಅಡಿಗೆ ಮಾಡುತ್ತಿರಬಹುದೇ? ಹಾಡುತ್ತಿರಬಹುದೇ? ನನಗೆ ಪತ್ರ ಬರೆಯುತ್ತಿರಬಹುದಲ್ಲವೇ? ಆಗೀಗ ನನ್ನನ್ನು ನೆನೆಯುತ್ತಿರಬಹುದೇ? ನನ್ನ ಆಶಾ ಎಂಥ ಮುಗ್ಧೆ!

ಒಂದೇ ಸವನೆ ನೀರು ನೋಡುತ್ತಿದ್ದವನಿಗೆ ಏಡನ್ ಬಂದರ ನೋಡಿ ಎಲ್ಲಿಲ್ಲದ ಆನಂದವಾಗಿತ್ತು. ಆಧುನಿಕ ಸುಖಸೌಂದರ್ಯದ ಸಾಮಗ್ರಿಗಳಿಗಾಗಿ ಹಾತೊರೆಯುವ ಭಾರತೀಯರ ಬಾಯಲ್ಲಿ ನೀರೂರುವಂತೆ ಇತ್ತು ಏಡನ್. ಅಗ್ಗದ ರೇಡಿಯೋ, ಟ್ರಾನ್ಸಿಸ್ಟರ, ಟೇಪರಿಕಾರ್ಡರ, ಟಾಯಿಪರಾಯಿಟರ್, ಕೆಮರಾ, ಪ್ರಾಜೆಕ್ಟರ,

ಬಾಯನಾಕ್ಯುಲರ ಇವುಗಳಲ್ಲಿ ಯಾವುದನ್ನು ಕೊಳ್ಳಲಿ ಯಾವುದನ್ನು ಬಿಡಲಿ! ಎಂದು ಗೊಂದಲವಾಗದೇ ಇರುತ್ತಿರಲಿಲ್ಲ. ರಸ್ತೆಯ ಅಂಚಿನಲ್ಲಿ ಹರಡಿಕೊಂಡ ಆಟಿಗೆಗಳಲ್ಲಿ ಯಾಂತ್ರಿಕವಾಗಿ ಚಲಿಸುವ ನಾಯಿಮರಿಯೊಂದನ್ನು ಬಹಳವಾಗಿ ಮೆಚ್ಚಿ, ಆಶಾಳ ಮಗುವಿಗಾಗಿ ಕೊಳ್ಳಬೇಕೆಂಬ ವಿಚಾರ ಮಂಚಿ ಮಾಯವಾಗಿತ್ತು. ಈ ವಿಚಾರವನ್ನು ಅವಳಿಗೆ ಬರೆದೂ ಇದ್ದೆ. ಆಕೆ ಈ ಮಾತು ತನಗೆ ಎಷ್ಟು ತೃಪ್ತಿಯನ್ನು ನೀಡಿತೆಂದು ಬರೆದಿದ್ದಳಲ್ಲವೇ? ಆದರೆ ಆಗ ನಾನು ಏನೂ ಖರಿದಿಸದೇ ಜಾಣನಾಗಿದ್ದೆ. ಉಳಿದವರು ಹಣ ತೆತ್ತು ಮೂರ್ಖರಾಗಿದ್ದರು. ಕರವಿಲ್ಲದ ಈ ಬಂದರದಲ್ಲಿ ಎಲ್ಲವೂ ಅಗ್ಗ ಬೆಲೆಗೆ ದೊರೆಯುವದೆಂಬ ಭ್ರಮೆಯಿಂದ ಪ್ರವಾಸಿಕರು ಸಾಮಾನು ಖರೀದಿಸುವದರಿಂದ ಮೋಸಗಾರರ ತಂಡ ತಂಡಗಳೇ ಬೆಳೆದಿವೆ. ಒಬ್ಬನು ಇನ್ನೂರು ರೂಪಾಯಿಗೆ ಆಟದ ಟಾಯಿಪರಾಯಿಟರ ಕೊಂಡರೆ, ಇನ್ನೊಬ್ಬನಿಗೆ ಪಾರ್‌ಕರ್ ಪೆನ್ನಿನ ಬೆಲೆಗೆ ನಕಲೀ ಮಾಲು ದೊರೆತಿತ್ತು. ಮಗದೊಬ್ಬನಿಗೆ ಕಳವಿನ ಬಂಗಾರವೆಂದು ಹಿತ್ತಾಳೆಯನ್ನು ಮಾರಿದ್ದರು!

ನಮ್ಮ ಹಡಗ ಪೋರ್ಟ್‌ಸೈಯದ ಬಂದರವನ್ನು ಸೇರುವ ಮೊದಲೇ ಸಾವಿರಾರು ಅರಬರು ಚಿಕ್ಕ ಚಿಕ್ಕ ನಾವೆಗಳಲ್ಲಿ ಬಂದು ಹಡಗನ್ನು ಮುತ್ತಿದ್ದರು. ಬೃಹದಾಕಾರದ ಹಡಗದೆದುರು ಆ ನಾವೆಗಳಲ್ಲಿ ಲಿಲಿಪುಟ್ ಜನರಿಂದ ಸುತ್ತುವರಿಯಲ್ಪಟ್ಟ ಗಲಿವರನನ್ನು ನೆನಪಿಗೆ ತಂದು ಕೊಡುತ್ತಿದ್ದವು. ತಮ್ಮ ನಾವೆಯಿಂದ ಉದ್ದ ಹಗ್ಗವನ್ನು ಹಡಗಕ್ಕೆ ಬೀಸಿ ಪ್ರಯಾಣಿಕರೊಂದಿಗೆ ಹಗ್ಗದ ಮೂಲಕ ವ್ಯಾಪಾರ ಸಂಬಂಧವನ್ನು ಸ್ಥಾಪಿಸಿಕೊಂಡಿದ್ದರು. ವಿಹಾರಕ್ಕಾಗಿ ಹಡಗದಲ್ಲಿ ಪ್ರಯಾಣ ಮಾಡುತ್ತಿದ್ದ ತರುಣರು ತಮ್ಮ ನಲ್ಲೆಯರನ್ನು ಮೆಚ್ಚಿಸಲು ಚರ್ಮದ ಸಾಮಗ್ರಿಗಳನ್ನು, ಪಿರಾಮಿಡ್, ಸ್ಫಿಂಕ್ಸದ ಮಾದರಿಗಳನ್ನು ಕೊಂಡರಲ್ಲದೇ ದ್ರಾಕ್ಷಿ, ಖರ್ಜೂರಗಳನ್ನು ಪ್ರಿಯೆಯೊಂದಿಗೆ ಮೆದ್ದರು. ಈ ನವದಂಪತಿಗಳಿಗ ಪ್ರೇಮ ಕಲಹವನ್ನು ನೋಡಿದಾಗಲೆಲ್ಲ ಆಶಾಳೊಂದಿಗಿನ ಭಾವೀ ಜೀವನವನ್ನು ನೆನೆದು ಪುಲಕಿತನಾಗಿದ್ದೆ.

ಪೋರ್ಟ ಸೈಯದದ ವ್ಯಾಪಾರಿಗಳು ಒಳ್ಳೆ ಮಾತುಗಾರರು. ನಾನು ಏನನ್ನೂ ಖರೀದಿಸಬಾರದೆಂದು ಸಂಕಲ್ಪ ಮಾಡಿಕೊಂಡು ರಸ್ತೆಗುಂಟ ಹೊರಟಾಗ ವ್ಯಾಪಾರಿಯೊಬ್ಬನು, 'ಬನ್ನಿ, ಬನ್ನಿ' ಸುಸ್ವಾಗತ, ನೀವೇನೂ ಕೊಳ್ಳಬೇಕೆಂದಿಲ್ಲ. ಸಾಮಾನು ನೋಡುವುದಕ್ಕೆ ನಮ್ಮಲ್ಲಿ ಹಣ ತೆಗೆದುಕೊಳ್ಳಲಾಗುವುದಿಲ್ಲ! ಎಂದು ನಗುಮುಖದಿಂದ ಬರಮಾಡಿಕೊಂಡಿದ್ದ. ಒತ್ತಾಯಕ್ಕೆ ಮನಸ್ಸಿಲ್ಲದಿದ್ದರೂ ಅಂಗಡಿಯನ್ನು ಹೊಕ್ಕಾಗ ನೂರಾರು ಸಾಮಾನುಗಳನ್ನು ತೋರಿಸಿದ್ದರು. ನೆಹರೂ-ನಾಸರರು ಒಳ್ಳೆಯ ಮಿತ್ರರಾಗಿರುವಾಗ ನಾವೇಕೆ ಆಗಬಾರದೆಂದು ವಿಶ್ವ ಮೈತ್ರಿ ತೋರಿದ್ದ. ಏನನ್ನೂ

ಕೊಳ್ಳುವ ಲಕ್ಷಣ ಕಾಣದಾಗ ಕೈಯಲ್ಲಿ ಒಂದು ಆಲಬಮ್ ತುರುಕಿ ಇದು ನಿನ್ನ ಕುಟುಂಬದ ಭಾವಚಿತ್ರಗಳನ್ನು ಕಾದಿಡುವ ಖಜಾನೆಯೆಂದು ಹೇಳಿದ್ದ. ನಾನು ಅವಿವಾಹಿತನೆಂದು ಗೊತ್ತಿದ್ದರೂ ನಿಮ್ಮ ಗೆಳತಿಯ ಚಿತ್ರ ಇದರಲ್ಲಿ ಹಾಕಬಹುದಲ್ಲ ಎಂದು ಕುಹಕ ನಗೆ ನಕ್ಕಿದ್ದ. ಅದನ್ನು ಕೊಂಡುಕೊಂಡು ಆಶಾಳಿಗೆ ಕಳಿಸಿದ್ದೆ. ನಂತರದ ಅವಳ ಪತ್ರವೊಂದರಲ್ಲಿ ಅಮೇರಿಕೆಯಿಂದ ಕಳಿಸಿದ ಎಲ್ಲ ಭಾವಚಿತ್ರಗಳನ್ನೂ ಅಂಟಿಸಿದ್ದೆನೆಂದು ಬರೆದಿದ್ದಳು. ಈ ಫೋಟೋಗಳ ಸಂಕಲನ ತನ್ನ-ನಮ್ಮ ದಾಂಪತ್ಯ ಜೀವನದ ನಾಂದಿಯಾಗಬೇಕೆಂದು ಅವಳ ಕನಸಿತ್ತು.

ಹಡಗಕ್ಕೆ ಮರುಳುತ್ತಿದ್ದಂತೆ ಅರಬನೊಬ್ಬ ಎಲ್ಲಿಂದಲೋ ಧಾವಿಸಿ ಬಂದು ಆತ್ಮೀಯತೆಯ ಸಲಾಮ್ ಮಾಡಿ ಪರಿಚಯದವರಂತೆ ಸುಖದುಃಖಗಳನ್ನು ವಿಚಾರಿಸಿದ. ನಂತರ ಮೆಲುಧ್ವನಿಯಲ್ಲಿ, "ಒಬ್ಬಳು ರೂಪಸಿ ಗೆಳೆಯನ ಹಂಬಲದಲ್ಲಿ ಇದ್ದಾಳೆ. ಇಲ್ಲಿಯೇ ಅವಳ ಮನೆ ಇದೆ. ಬಂದು ಅವಳ ಆತಿಥ್ಯವನ್ನು ಏಕೆ ಸ್ವೀಕರಿಸಬಾರದು?" ಎಂದಾಗ ನಾನು ನಡುಗಿ ಹೋಗಿದ್ದೆ. ಈ ವ್ಯಾಪಾರಿ ಪ್ರೇಮಕ್ಕೆ ಹೇಸಿ ಹಡಗದತ್ತ ಧಾವಿಸಿದ್ದೆ. ಹಣಕ್ಕಾಗಿ ದೇಹವನ್ನು ಮಾರಿಕೊಳ್ಳುವವರ ಬಗ್ಗೆ ಕನಿಕರವಿದ್ದರೂ ಅದನ್ನು ಕೊಂಡುಕೊಳ್ಳುವವರ ಬಗ್ಗೆ ಹೆಚ್ಚಿನ ಜಿಗುಪ್ಸೆಯಿತ್ತು. ಹೀಗಾಗಿ ಇಂಥ "ಗೆಳತಿ"ಯ ದರ್ಶನ ಲಾಭ ಪಡೆದು ಬಂದಿದ್ದ ಹಡಗದ ಭಾರತೀಯ ಮಿತ್ರನನ್ನು ತರಾಟೆಗೆ ತೆಗೆದುಕೊಂಡಿದ್ದೆ. ಆದರೆ ಆ ಭೂಪನು ನಗುಮುಖದಿಂದ, "ನೀನಿನ್ನೂ ಜೀವನವೇನೆಂದು ತಿಳಿದುಕೊಳ್ಳಲಾರದ ಹಸುಳೆ. ಸಿನೇಮ, ನಾಟಕಗಳಿಗೆ ಹೋಗುವಂತೆ ಮನರಂಜನೆಗೆ ಇಂಥಲ್ಲಿ ಹೋದರೆ ತಪ್ಪೇನಿದೆ? ಜೀವನದಲ್ಲಿ ಮರೆಯಾದ ಸೌಂದರ್ಯ ಕಾಣಲೆತ್ನಿಸಬೇಕು ಓಣಿಗಳೆಲ್ಲ ಕೊಳಕಾಗಿ ಮನೆಗಳೆಲ್ಲ ಹಳೆಯವಾದರೂ ಬೈಠಕ ಖಾನೆಗಳನ್ನು ರತ್ನಗಂಬಳಿಗಳಿಂದ, ತೈಲಚಿತ್ರ, ವಾದ್ಯಗಳಿಂದ ಸಿಂಗರಿಸುತ್ತಾರೆ. ಹಾಡುವ ನರ್ತಿಸುವ ಗೆಳತಿಯರು ಅಂಗಾಂಗಗಳಿಂದ ಸೌಂದರ್ಯ ಹೊಮ್ಮಿಸುವಂತೆ ನರ್ತಿಸುತ್ತ ಅತಿಥಿಗಳನ್ನು ಕಲಾಲೋಕಕ್ಕೆ ಕರೆದೊಯ್ಯುತ್ತಾರೆ......ವಾದ್ಯಕ್ಕೆ ಕುಣಿಯುತ್ತ ಬಟ್ಟೆ ಕಳಚುವ ನೃತ್ಯದ (Strip-tease) ನಾಡಿಗೆ ಹೊರಟಿರುವಿ. ಇಜಿಪ್ಸಿಯನ್ನರ ಸಾಂಪ್ರದಾಯಿಕ ಕಲೆಯ ಬಗ್ಗೆ ಇಷ್ಟೂ ಆದರಬೇಡವೇ?" ಎಂದಿದ್ದ. ಕಲೆ ಕಲೆಯಾಗಿದ್ದರೆ ಆದರಿಸಬಹುದು. ಆದರೆ ಕಾಮದಿಂದ ಕಲುಷಿತವಾದರೆ.....ಎಂದಾಗ ಅವನು ಸೋಲೊಪ್ಪಿಕೊಳ್ಳದೇ. "ಕಾಮವೂ ಕಲೆಯ ರೂಪ ತಾಳಬಲ್ಲದು ಎಂದು ಅರಿಯುವ ದಿನ, ನಿನ್ನ ಜೀವನದಲ್ಲಿಯೂ ಬಾರದೇ ಇರದು!" ಎಂದಿದ್ದ. ಅಂದಿನ ದಿನಗಳಲ್ಲಿ ನಾನು ಆದರ್ಶ ಪ್ರೇಮದ ಕನಸು ಕಾಣುತ್ತಿದ್ದೆ. ಇಂದು ಅವನ ಮಾತು ಸುಳ್ಳು ಎನ್ನುವ ಸಾಹಸ ನನ್ನಲ್ಲಿ ಉಳಿದಿದೆಯೇ?

* * *

ತನ್ನ ಪ್ರಶ್ನೆಗೆ ಉತ್ತರ ಹೊಳೆಯದಾದಾಗ ಅರುಣನಿಗೆ ಬಾಹ್ಯ ಲೋಕದ ಪ್ರಜ್ಞೆ ಬಂದಿತು. ಲಗುಬಗೆಯಿಂದ ವಿಶ್ರಾಂತಿಗೃಹಕ್ಕೆ ಹೋಗಿ ಒಂದು ಗ್ಲಾಸ್ ಬಿಯರ್ ಸುರಿದುಕೊಂಡು ಕೈಯಲ್ಲಿ ಸುಡುತ್ತಿರುವ ಸಿಗರೇಟು ಹಿಡಿದು ತನ್ನ ಸ್ಥಾನಕ್ಕೆ ಮತ್ತೆ ಮರಳಿದ. ಈ ಸಿಗರೇಟ, ಈ ಬಿಯರ್ ಈ ಮಾನವನ ಕೊರಗುಗಳನ್ನು ಮರೆಯುವಂತೆ ಮಾಡುವ ಉತ್ತಮ ಉಪಾಯಗಳಾಗಿರುವದು ನಿಜವೆಂದು ಎನಿಸಿತು. ಹೆಂಡದಂತೆ ಹೆಣ್ಣು, ಕೆಲವೊಂದು ಬಾರಿ ಮೈಮರೆಯುವಂತೆ ಮಾಡೀತೇ?.....ಥೂ! ಎಂಥ ವಿಚಾರ! ಇಂಥ ವಿಕೃತ ವಿಚಾರಗಳನ್ನು ಮರೆಯಲು ಅರುಣ ಮತ್ತೆ ಗತದಿನಗಳ ಸ್ಮರಣೆಯಲ್ಲಿ ಮನಸ್ಸು ತೊಡಗಿಸಿದ.

* * *

ನಮ್ಮ ಹಡಗ, ನೇಪಲ್ಸ್ ಮುಟ್ಟಿದಾಗ ಬೆಳಕು ಹರಿದಿತ್ತು. ಮಂದ ಬೆಳಕಿನಲ್ಲಿ ವರ್ಣರಂಜಿತವಾದ ಸಣ್ಣ ಸಣ್ಣ ನಾವೆಗಳು ಕಣ್ಣಿಗೆ ಹಬ್ಬವನ್ನು ಉಂಟುಮಾಡುತ್ತಿದ್ದವು. ಹಡಗದಿಂದ ಇಳಿಯುತ್ತಿದ್ದಂತೆ ಇಟಾಲಿಯನ್ ಫೋಟೋಗ್ರಾಫರರು ಪ್ರಯಾಣಿಕರ ಮೇಲೆ ಕೃತಕ ಬೆಳಕು ಚೆಲ್ಲುತ್ತ ಭಾವ ಚಿತ್ರಗಳನ್ನು ತೆಗೆದಿದ್ದರು. ಯಾರನ್ನೂ ಕೇಳದೇ, ಫೀ ಬಗ್ಗೆಯೂ ಹೇಳದೇ ಚಿತ್ರ ತೆಗೆದದ್ದರಿಂದ ಇವರ್‍ಯಾರೋ ಅಂತರಾಷ್ಟ್ರೀಯ ಕಳ್ಳನ ಶೋಧದಲ್ಲಿ ಇರಬೇಕೆಂದು ಅವರನ್ನು ಅಲಕ್ಷಿಸಿ ನಗರಕ್ಕೆ ಹೊರಡುವ ಬಸ್ ಏರಿದ್ದೆ. ಮೋಟಾರು ಹಾವಿನಂತೆ ವಕ್ರವಕ್ರವಾಗಿ ಹಾದು ಹೋದ ರಸ್ತೆಯ ಮೇಲಿಂದ ಗುಡ್ಡವೇರಿ ನಗರದ ದರ್ಶನ ಮಾಡಿಸಿತು. ನಂತರ ಧನಿಕ ಪ್ರವಾಸಿಕರಿಗಾಗಿಯೇ ಮೀಸಲಾದ. ಚಿಪ್ಪಿನಿಂದ ತಯಾರಿಸಿದ ಆಭರಣಗಳ ಪ್ರದರ್ಶನಾಲಯಕ್ಕೆ ಕರೆದೊಯ್ದರು. ಅಲ್ಲಿಯ ಕಲಾಕೌಶಲ ಕಂಡು ತಲೆದೂಗಿದರೂ, ಆಶಾಳಿಗೆ ರಾಮೇಶ್ವರದ ನಾಲ್ಕಾಣೆಯ ಶಂಖದ ಸರವೇ ಒಪ್ಪುವದೆಂದು ಏನೂ ಕೊಳ್ಳದೇ ಹಿಂದಿರುಗಿದ್ದೆ. ನಂತರ ಭೆಟ್ಟಿ ಕೊಟ್ಟ ಸಂಗ್ರಹಾಲಯ ಮನಸ್ಸನ್ನು ಸೆಳೆದಿತ್ತು. ಅಮೃತ ಶಿಲೆಯಲ್ಲಿ ಅಂಗಾಂಗಗಳನ್ನು ಸುಂದರವಾಗಿ ಕೊರೆದ ಸ್ತ್ರೀ ವಿಗ್ರಹಗಳು ಎಂತಹ ಸುಂದರಿಯನ್ನೂ ನಾಚಿಸುವಂತೆ ನಿಂತಿದ್ದವು. ಮೈಕೇಲ್ ಎಂಜೆಲೊನ ಒಂದೆರಡು ಕೃತಿಗಳೂ ಅಲ್ಲಿದ್ದವು. ಅದೆಂತಹ ಪ್ರಚಂಡ ಪ್ರತಿಭಾಶಾಲಿಯಾತ! ಆತ ಮುಟ್ಟದ ಕಲೆಯಿಲ್ಲ; ಮಾಡದ ಆಕೃತಿಯಿಲ್ಲ. ಅವನು ಕೈ, ಕಟೆದ ಮೂಗುಗಳ ಭಗ್ನ ಮೂರ್ತಿಗಳು ಇತಿಹಾಸದ ನಿರ್ದಯ ಘಟನೆಗಳನ್ನು ನೆನಪಿಗೆ ತರುತ್ತಿದ್ದವು. ನಾನೊಬ್ಬ ಶಿಲ್ಪಿಯಾಗಿದ್ದರೆ ಆಶಾಳ ಪ್ರತಿಕೃತಿಯನ್ನು ಶಿಲೆಯಲ್ಲಿ ಮೂಡಿಸುತ್ತಿದ್ದೆ.

ಆದರೆ ಸ್ತ್ರೀಯ ಅಂಗಾಂಗಗಳ ನಿಕಟ ಪರಿಚಯವಿದೇ. ಅವನ್ನು ಶಿಲೆಯಲ್ಲಿ ಮೂಡಿಸುವದು ಸಾಧ್ಯವಿತ್ತೆ? ಆಶಾ ತನ್ನ ಪ್ರತಿಮಾನಿರ್ಮಿತಿಗೆ ಸಹಕಾರ ನೀಡುತ್ತಿದ್ದಳೇ?

ಎಂದು ಭಾವವಶನಾಗಿದ್ದಾಗ ಸಂಗಡಿಗರು ಆ ಮೂರ್ತಿ, ಈ ಮೂರ್ತಿಯ ಎದುರು ನಿಂತು ಒಂದೊಂದು ಫೋಟೋ ತೆಗೆದುಕೊಂಡು ಮೋಟಾರು ಹತ್ತಿ ಹೋದದ್ದು ನನಗ ಗೊತ್ತೇ ಆಗಲಿಲ್ಲ. ಥಕ್ಕನೆ ನೆನಪಾದಾಗ ಕೈ ಗಡಿಯಾರ, ಹಡಗು, ನೇಪಲ್ಸ ಬಿಡುವ ವೇಳೆಯಾಗಿದೆ! ಎಂದು ಸೂಚನೆಯಿತ್ತದ್ದರಿಂದ ಹೌಹಾರಿದ್ದೆ. ಯಾರಿಗೊ ವಿಚಾರಿಸಿ ಸಿಕ್ಕ ಟ್ಯಾಕ್ಸಿ ಏರಿ ಬಂದರ ಮುಟ್ಟಿದಾಗ ಬೆವರಿಳಿದಿತ್ತು. ಹಡಗದಿಂದ ಇಳಿದಾಗ ಫೋಟೋ ತೆಗೆದವನು ನನ್ನ ಬರವನ್ನೇ ನಿರೀಕ್ಷಿಸುತ್ತ ನಿಂತಿದ್ದ. ಆತನ ಕಡೆಗೆ ಲಕ್ಷ್ಯ ಕೊಡದೇ ಧಾವಿಸಿದಾಗ ಹಡಗಿನ ನಿಚ್ಚಣಿಕೆ ತೆಗೆಯುವದರಲ್ಲಿದ್ದರು. ನನ್ನನ್ನು ನೋಡಿ ಗೊಣಗುತ್ತ ಮತ್ತೆ ನಿಚ್ಚಣಿಕೆ ಇಳಿಸಿದ್ದರು.

೮

"ಮಾಲ್ಟಾ, ಜಿಬ್ರಾಲ್ಟರಗಳಲ್ಲಿ ಆಶಾಳ ಪತ್ರಕ್ಕಾಗಿ ಎಷ್ಟು ವಿಹ್ವಲನಾಗಿದ್ದೆ! ಪತ್ರ ಸಿಕ್ಕಿರಲಿಲ್ಲ. ಅವಳೇ ಬರೆಯದಿದ್ದರೆ, ಅಂಚೆಯವರು ಎಲ್ಲಿಂದ ತಂದು ಕೊಟ್ಟಾರು? ಅವಳೇಕೆ ಪತ್ರ ಬರೆಯಲಿಲ್ಲ? ಸಿಟ್ಟಾಗಿರಬಹುದೇ? ಮರೆತಿರಬಹುದೇ? ಛೇ! ಛೇ! ಆಶಾ ಅಂಥ ಹುಡುಗಿಯೇ ಅಲ್ಲ. ಏನೋ ಕೆಲಸವಿದ್ದಿರಬೇಕು. ಇಲ್ಲವೇ ನನ್ನ ಪತ್ರವೇ ಮುಟ್ಟಿರಲಿಕ್ಕಿಲ್ಲ. ಕೊನೆಗೊಮ್ಮೆ ಲಂಡನದಲ್ಲಿ ದೊರೆತ ಅವಳ ಪತ್ರ ಹೆಚ್ಚಿನ ತೃಪ್ತಿಯನ್ನು ನೀಡಿತ್ತು. ಆ ಸಲವೂ ಪ್ರಭಾ ಕಾಡಿಸಿ, ಪೀಡಿಸಿ ಪತ್ರವನ್ನು ಕೊಟ್ಟಿದ್ದಳಂತೆ. ಒಮ್ಮೆ ಪತ್ರ ಸಿಕ್ಕ ನಂತರ ಆಶಾ ಅದನ್ನು ಬೇಗ ಓದಿ ನೋಡುವ ತವಕದಲ್ಲಿ ಇರುತ್ತಾಳೆಂದು ತಿಳಿದುಕೊಂಡ ಪ್ರಭಾ ಆದಷ್ಟು ಬೇಗ ಅಲ್ಲಿಂದ ಹೊರಟಳು. ಒಂದು ಸೊಳ್ಳೆಯೂ ಬರದಂತೆ ಬಾಗಿಲು ಭದ್ರಪಡಿಸಿ, ಹಾಡನ್ನೊಂದು ಗುಣಗುಣಿಸುತ್ತ ಬಂದು ಕವರನ್ನು ಒಡೆಯುವದರಲ್ಲಿ ಬೆಲ್ ಬಾರಿಸಿತಂತೆ. ಇನ್ನಾರು ಬಂದರೆಂದು ಗೊಣಗುತ್ತ ಪತ್ರವನ್ನು ಪುಸ್ತಕದಲ್ಲಿ ಮುಚ್ಚಿಟ್ಟು ಬಾಗಿಲು ತೆರೆದರೆ ಪ್ರಭಾ ತಾನು ಮರೆತು ಹೋದ ಕೊಡೆಯನ್ನು ಒಯ್ಯಲು ತಿರುಗಿ ಬಂದಿದ್ದಳು! ಆಶಾಳ ದುಗುಡ ಅರಿತು ಪ್ರಭಾ ನಕ್ಕರೆ ತಾನು ಮೋಸ ಹೋದೆ! ಎಂದು ಆಶಾ ನಕ್ಕಳು. ಪಾರ್ಟಿ ಕೊಟ್ಟ ಹೊರತು ಮುಂದಿನ ಪತ್ರ ಕೊಡುವುದಿಲ್ಲ ಎಂದು ಗೇಲಿ ಮಾಡುತ್ತ ಪ್ರಭಾಳ ಸವಾರಿ ಹೊರಟಿತಂತೆ."

ಪತ್ರ ಓದಲು ಪ್ರಾರಂಭಿಸುವದರಲ್ಲಿಯೇ ತಿರುಗಿ ಗಂಟೆ ಬಾರಿಸಿತು. ಯಾರೋ ಹೋಗಿ ಬಾಗಿಲು ತರೆದ ಸದ್ದಾದ್ದರಿಂದ ಪತ್ರದ ಓದು ಮುಂದುವರಿಯಿತು. ಆದರೆ ಆಶಾಳ ತಾಯಿ ಕೆಳಗಿನಿಂದಲೇ "ಆಶಾ, ಏ ಆಶಾ ಏನು ನಡೆಸಿದ್ದಿ ಮಹಾರಾಯತಿ! ನಿಮ್ಮಕ್ಕ ಭಾವ ಬಂದಿದ್ದಾರೆ. ಸ್ವಲ್ಪ ಕೆಳಗೆ ಬರುವಂಥವಳಾಗು! ಎಂದು ಕೂಗಿ

ಹೇಳಿದಾಗಲೇ ಬೇರೆ ಉಪಾಯ ತೋಚದೇ ಪತ್ರವನ್ನು ಹಾಸಿಗೆಯ ಕೆಳಗೆ ಅಡಗಿಸಿ ಕೆಳಗೆ ಇಳಿದು ಹೋದಳಂತೆ."

ಭಾವನವರಿಗೆ ಮುಂಬಯಿಯಲ್ಲಿ ಕೆಲಸವಿದ್ದುದರಿಂದ ಅವರೂ ಜೊತೆಗೆ ಅಕ್ಕನೂ ಬಂದಿದ್ದರು. ಅಕ್ಕ, ಮುಂಬೈಗೆ ಬಂದಾಗಲೆಲ್ಲ ಆಶಾಳ ಕೋಣೆಯಲ್ಲಿಯೇ ಬೀಡು ಬಿಡುವದು ವಾಡಿಕೆ. ಅವರ ಚಿಕ್ಕ ಮಗ ವಿಲಾಸನಿಗೆ ಆಗಲೇ ನಿದ್ರೆ ಬಂದಿತ್ತು. ಆದ್ದರಿಂದ ಅವನನ್ನು ಎತ್ತಿಕೊಂಡು ಮಹಡಿಯನ್ನೇರಿದಳು. ಮಗುವನ್ನು ಆಶಾಳ ಕೈಗಿತ್ತು ಆಶಾಳ ಹಾಸಿಗೆಯಲ್ಲಿ ಮಲಗಿಸಿದರೆ ಒದ್ದೆ ಮಾಡಿಯಾನು ಎಂದು ಹಾಸಿಗೆ ಸುತ್ತಲಾರಂಭಿಸಿದಳಂತೆ! ಅದರ ಕೆಳಗಿದ್ದ ಪತ್ರ ಗುಟ್ಟು ರಟ್ಟು ಮಾಡೀತೆಂದು ನಿಮಿಷ ಮಾತ್ರದಲ್ಲಿ ಹಾಸಿಗೆ ಸಿದ್ಧ ಪಡಿಸುತ್ತೇನೆ ಎಂದು ಅಕ್ಕ ಮಾತನಾಡುವ ಮೊದಲೇ ಮಗುವನ್ನು ಅಕ್ಕನ ಕೈಗಿತ್ತು ಉಪಾಯವಾಗಿ ಕಾಗದ ಸಹಿತ ಹಾಸಿಗೆಯನ್ನು ಸುತ್ತಿಟ್ಟು ಚಿಕ್ಕ ಹಾಸಿಗೆ ಹಾಸಿದಳಂತೆ, ಅವಳಕ್ಕ ಮುಂಬೈಗೆ ಬಂದಾಗ ತಪ್ಪದೇ ಸಿನೇಮಾ ನೋಡುವಳು. ಆದರೆ ಇಂದು ಯಾವ ಸಿನೇಮಾದ ನೆನಪೂ ತೆಗೆಯದೇ ಇದ್ದದ್ದು ನೋಡಿ ಆಶಾ ತಾನಾಗಿಯೇ ಎಂಟು ಹತ್ತು "ಅತ್ಯುತ್ತಮ" ಚಿತ್ರಗಳ ಯಾದಿಯನ್ನು ಅಕ್ಕನಿಗೆ ಬಾಯಿ ಪಾಠ ಹೇಳಿಬಿಟ್ಟಳಂತೆ. ಕಾಫಿ ಕುಡಿದು ಅಕ್ಕ ಪಿಕ್ಚರಿಗೆ ಹೊರಟುನಿಂತಳು. ಭಾವನೂ ಹೊರಗೆ ಹೊರಟರು. ಅಕ್ಕ ತನ್ನನ್ನೂ ಹೊರಟು ಬರುವಂತ ಆಗ್ರಹಪಡಿಸಿದಾಗ ಸಿನೇಮಾ ಯಾರಿಗೆ ಬೇಡವಾಗಿದೆ? ಆದರೆ ಮಾಸಿಕ ರಜೆ ಪಡೆದದ್ದರಿಂದ ಸೊಂಟ ನೋವು ಬಂದಿದೆ. ಏನೂ ಬೇಡವೆನ್ನಿಸುತ್ತದೆ! ಎಂದು ಅಕ್ಕನ ಬಾಯಿ ಮುಚ್ಚಿಸಿ ಆಕೆ ಹೊರಟು ಹೋದಮೇಲೆ ಪತ್ರವನ್ನು ನಿಧಾನವಾಗಿ ಓದಿ ಆನಂದಿಸಿದಳಂತೆ. ಪತ್ರ ಓದುವಾಗ ನನ್ನ ಎದುರಿಗೆ ಕುಳಿತು ಮಾತನಾಡಿದಂತೆ ಅನಿಸಿತಂತೆ. ಪತ್ರದ ಉತ್ತರವನ್ನೂ ಚಲನಚಿತ್ರಕ್ಕೆ ಹೋದವರು ಬರುವ ಮೊದಲೇ ಬರೆದು ಮುಗಿಸಿದ್ದಳು.

ಆ ಪತ್ರದಲ್ಲಿ ಆಶಾ ಹಿಂದೆಂದೂ ಬಾರದಷ್ಟು ನನ್ನತ್ತ ಧಾವಿಸಿ ಬಂದಿದ್ದಳು. ಮೆಚ್ಚಿದವರೆದುರು ಯಾವ ಗೋಡೆಯೂ ನಿಲ್ಲದೆಂದು ಕಾಣುತ್ತದೆ! ಅಂತೆಯೇ ಬಿಚ್ಚು ಮನಸ್ಸಿನಿಂದ ಬರೆದಿದ್ದಳು. 'ನಾನು ಅರಿಯದೇ ಎಷ್ಟು ಬದಲಾಗುತ್ತಿದ್ದೇನೆ ಗೊತ್ತೇ? ನಾನು ಎಲ್ಲಿಯೇ ಇರಲಿ, ಏನೇ ಮಾಡುತ್ತಿರಲಿ ಸದಾ ನಿಮ್ಮದೇ ಧ್ಯಾನದಲ್ಲಿ ಇರುತ್ತೇನೆ. ಇಂದು ಅಕ್ಕ ಚಲನಚಿತ್ರಕ್ಕೆ ಹೋದ ಮೇಲೆ ಹಿಂದಿನ ಒಂದು ಘಟನೆ ಸ್ಮೃತಿಪಟಲದ ಮೇಲೆ ಸುಳಿಯಿತು. ಅಂದು ನಾವು ಇಬ್ಬರೂ ವರ್ಲಿ ಸಮುದ್ರದ ಮಳಲಿನಲ್ಲಿ ಆಡುತ್ತಿರುವಾಗ ಮಾತಿಗೆ ಮಾತು ಬಂದಾಗ ಸ್ತ್ರೀ-ಪುರುಷರ ದೇಹ ರಚನೆಯ ವ್ಯತ್ಯಾಸದ ಬಗ್ಗೆ ಏನೋ ಹೇಳಲು ಹೊರಟಿದ್ದಿರಿ. ನಾನು ಸಾಕು! ಎಂಥ ಕೊಳಕು ಮಾತು ಎಂದಿದ್ದೆ. ಅಂದು ಸ್ವಲ್ಪ ತಾಳ್ಮೆಯಿಂದಿದ್ದು ನೀವು ಹೇಳಿದ್ದೆಲ್ಲ

ಕೇಳುವಂತಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಇಂದು ಅನಿಸುತ್ತದೆ. ನಾನು ಮೊದಲಿನಿಂದಲೂ ಸಂಭಾವಿತ (ಪೆದ್ದು ಎಂಬ ಅರ್ಥದಲ್ಲಿ!) ಹುಡುಗಿ ಎಂಬುದು ನಿಮಗೆ ತಿಳಿದಿರಲಿಕ್ಕಿಲ್ಲ, ನಗುವದಿಲ್ಲ ಎಂದು ಮಾತು ಕೊಟ್ಟರೆ ಆ ಘಟನೆ ಬರೆಯುತ್ತೇನೆ. ನಗುವದಿಲ್ಲ ಅಲ್ಲವೇ? ಹಾಗಾದರೆ ಕೇಳು ಜಾಣ! ತಂದೆ ತಾಯಿಗಳ ಎಚ್ಚರಿಕೆಯ ಲಾಲನೆ-ಪೋಷಣೆಗಳಲ್ಲಿ ಪಂಜರದ ಗಿಣಿಯಂತಿದ್ದೆ. ಉತ್ತಮ ಆಹಾರ ಸಿಗುತ್ತಿದ್ದರಿಂದ ವಯಸ್ಸಿಗೆ ಮೀರಿದ ಬೆಳವಣಿಗೆ ನನ್ನದಾಗಿತ್ತು. ಆಗಿನ್ನೂ ನಾನು ಎಂಟನೇ ವರ್ಗದಲ್ಲಿ ಓದುತ್ತಿದ್ದರೂ ನನ್ನಷ್ಟು ಬೆಳವಣಿಗೆ ಪಡೆದ ಹುಡುಗಿ ಕ್ಲಾಸಿನಲ್ಲಿಯೇ ಯಾರೂ ಇರಲಿಲ್ಲ. ಒಮ್ಮೆ ವಿದ್ಯಾರ್ಥಿನಿಯರೆಲ್ಲ ಕೂಡಿ ಕಬಡ್ಡಿ ಆಟ ಆಡುತ್ತಿದ್ದೆವು. ಆಟದ ನಡುವೆ ರಕ್ತಸ್ರಾವವಾದ ಅನುಭವವಾಗಿ ಮನೆಗೆ ಓಡಿಹೋದೆ. ಮನೆಯಲ್ಲಿ ಯಾರಿಗೂ ಕೇಳಲೂ ಹೆದರಿಕೆ. ಮುಖ ಒಣಗಿದ್ದು ನೋಡಿ ಆಯಿ ಮತ್ತೆ ಮತ್ತೆ ಕಾರಣ ಕೇಳಿದರೂ ಏನೂ ಹೇಳದೇ ಶಾಲೆಯಲ್ಲಿ ಹುಣಿಸೆ ಹಣ್ಣು ತಿಂದಿದ್ದೆ. ಪಿತ್ಥವಾಗಿದೆ! ಎಂದು ಹೇಳಿದೆ. ಹಾಗೇ ಮಲಗಿ ಬಿಟ್ಟೆ. ಅಕ್ಕ ಶಾಲೆಯಿಂದ ಮರಳಿ ಬಂದಳು. ನಾವಿಬ್ಬರೂ ಗೆಳತಿಯರಂತೆ ಸಲಿಗೆಯಿಂದ ಇದ್ದೆವು. ಅಕ್ಕನಿಗೆ ನನ್ನ ದುಗುಡ ಹೇಳಿದಾಗ ಆಕೆ ಮೈದಡವಿ ಸಹಾನುಭೂತಿಯ ನಗೆ ನಕ್ಕು ಇದು ಎಲ್ಲ ಸ್ತ್ರೀಯರ ಸಾಮಾನ್ಯ ಕಾಹಿಲೆ! ಎಂದು ಹೇಳಿ ಯೋಗ್ಯ ಸಲಹೆಗಳನ್ನಿತ್ತು ಆಯಿಯ ಹತ್ತಿರ ಓಡಿಹೋದಳು. ನಡೆದ ಸಮಾಚಾರ ಅರಿತುಕೊಂಡು ಆಯಿ ಮರುಗುತ್ತ ನನ್ನ ಹತ್ತಿರ ಬಂದು "ನಾನು ಮೊದಲೇ ಇದನ್ನೆಲ್ಲ ನಿನಗೆ ಹೇಳಬೇಕಾಗತ್ತು. ಆದರೆ ನೀನು ಇನ್ನೂ ಚಿಕ್ಕ ಮಗುವೆಂದು ಭಾವಿಸಿದ್ದು ನನ್ನ ದೊಡ್ಡ ತಪ್ಪು! ಎಂದು ಉತ್ಸಾಹದಿಂದ ಮೈಮೇಲೆ ಕೈಯಾಡಿಸಿದರು. ಸಂಜೆ ಕೋರ್ಟಿನಿಂದ ಮರಳಿ ಬಂದ ತಂದೆ ಹುಣಿಸೇ ಹಣ್ಣಿನ ಕತೆ ಕೇಳಿ ಮನದಣಿ ನಕ್ಕಿದ್ದರು. ಈ ಕತೆಯನ್ನು ಆಯಿ ಆತ್ಮೀಯರಿಗೆಲ್ಲ ಹೇಳಿದರು. ಇಂದಿಗೂ ಉಲ್ಲೇಖ ಬಂದರೆ ಅಕ್ಕ ನನ್ನ ಗೇಲಿ ಮಾಡದೇ ಇರುವುದಿಲ್ಲ."

* * *

"ನನ್ನ ಜೀವನದಲ್ಲಿ ಅಪರಿಚಿತಳಾಗಿ ಬಂದಿದ್ದ ಆಶಾ ಎಷ್ಟು ಬೇಗ ನನ್ನನ್ನು ತನ್ನವನನ್ನಾಗಿ ಮಾಡಿಕೊಂಡು ಬಿಟ್ಟಿದ್ದಳು. ಕವಿ, ಕಲಾಕಾರರಿಗೆಲ್ಲ ಸ್ಫೂರ್ತಿದಾಯಕಳಾಗಿ ನಾರಿಯೊಬ್ಬಳು ಇದ್ದೇ ಇರುವಳಂತೆ ನನ್ನ ಜೀವನಕ್ಕೆ ಸ್ಫೂರ್ತಿದಾಯಿನಿಯಾಗಿ ಆಶಾ ಬಂದಿರಬಹುದೇ? ಅಲ್ಲದೇ ಏನು? ಅವಳ ಒಂದು ಪತ್ರ ಬರಲಿ, ಅವಳಿಗೆ ಒಂದು ಪತ್ರವನ್ನು ಬರೆಯಲಿ, ನನ್ನಲ್ಲಿ ಉತ್ಸಾಹದ ಕಾರಂಜಿ ಪುಟಿಯುತ್ತಿತ್ತು. ನಾನು ಜೀವನದಲ್ಲಿ ಮುಂದೆ ಬಂದರೆ ಅವಳು ಹೆಚ್ಚಿನ ಅಭಿಮಾನ ತಾಳುವದೆಂದು ಮೈ ಮುರಿದು ದುಡಿದಿದ್ದೆ. ಏನೇ ನೋಡಲಿ ಏನೇ ಮಾಡಲಿ ತಪ್ಪದೇ ಆಶಾಳಿಗೆ ಪತ್ರ ಬರೆಯುತ್ತಿದ್ದೆ. ಅವಳೂ ಸಾಧ್ಯವಿದ್ದಷ್ಟು ನನಗೆ ಪತ್ರ ಬರೆಯುತ್ತಿದ್ದಳು. ಪಾಪ! ಪಂಜರದ ಗಿಣಿಯಂತೆ

ಅವಳು ಬಾಳುತ್ತಿರಬೇಕಾದರೆ ಅವಳಿಗೆ ಪತ್ರ ಲೇಖನದ ಸ್ವಾತಂತ್ರ್ಯ ಹೇಗೆ ದೊರೆಯಬೇಕು? ಅಂತೆಯೇ ಕೆಲವೊಮ್ಮೆ ಪತ್ರ ಬರೆಯುವುದಕ್ಕಾಗಿಯೇ ವಾಚನಾಲಯಕ್ಕೆ ಆಕೆ ಹೋದದ್ದು ಉಂಟು. ಒಮ್ಮೆಯಂತೂ ಪತ್ರ ಬರೆಯುವ ಸುಸಂಧಿ ಒಂದು ವಾರದ ತನಕ ದೊರೆಯದೆ ಕೊನೆಗೊಮ್ಮೆ ಸ್ನಾನಗೃಹ ಸೇರಿ ಕಾಗದ ಬರೆದು ಮುಗಿಸಿದ್ದಳಂತೆ. ನನಗಾಗಿ ಇಷ್ಟೊಂದು ಮಾಡಿದವಳು ನನ್ನವಳಾಗಿ ಏಕೆ ಬರಲಿಲ್ಲ? ಅದು ಅವಳ ತಪ್ಪೆ? ನನ್ನ ತಪ್ಪೆ? ಅವಳ ಪ್ರೇಮ ಸ್ವೀಕರಿಸದಿದ್ದುದು ನನ್ನ ತಪ್ಪೆ? ಮಾನವಸಹಜ ರೀತಿಯಲ್ಲಿ ಮೆಚ್ಚಿ ಬಂದ ಆಶಾಳನ್ನು ನನ್ನವಳನ್ನಾಗಿ ಮಾಡಿಕೊಳ್ಳಲು ನಿರ್ಧರಿಸಿದ್ದು ತಪ್ಪೇ?..... ಅಲ್ಲ. ಅಲ್ಲ! ನಮ್ಮಿಬ್ಬರನ್ನೂ ಈ ಸ್ಥಿತಿಗೆ ತಂದದ್ದು ನಮ್ಮ ಕಪಟ ಸಮಾಜ. ಈ ಸಮಾಜವನ್ನು ಸೀಳಿ ಹಾಕುತ್ತೇನೆ! ಸುಟ್ಟು ಹಾಕುತ್ತೇನೆ!"

* * *

ಸಮಾಜವನ್ನು ದಂಡಿಸಲು ಹೊರಟ ಅರುಣ, ಅದರ ಒಂದು ಕೂದಲನ್ನು ಮುಟ್ಟಲೂ ತನಗೆ ಅಸಾಧ್ಯವೆಂದು ಇಹಲೋಕದ ಪ್ರಜ್ಞೆ ಬಂದಾಗ ಅರಿವಾಗಿ ತತ್ತರವೆತ್ತರ ಕಾಲುಗಳನ್ನು ಹಾಕುತ್ತ ಬಾರಿನತ್ತ ಹೊರಟ. ಹಗಲು ಹನ್ನೆರಡು ಗಂಟೆಗೆ ವ್ಹಿಸ್ಕಿ ಆರ್ಡರ ಕೊಟ್ಟ ಗಿರಾಕಿಯನ್ನು ಬಾರಿನವ ಎವೆಯಿಕ್ಕಿ ನೋಡಿದರೂ ಟೇಬಲ್ಲಿಗೆ ಹಣೆ ಹಚ್ಚಿ ಕಣ್ಣು ಮುಚ್ಚಿದ್ದ ಅರುಣ, ಅವನನ್ನು ನೋಡಲಿಲ್ಲ. ಹೃದಯಲ್ಲೆದ್ದ ಬಡವಾಗ್ನಿಯನ್ನು ಸುರಾಧಾರೆಯಿಂದ ನಂದಿಸಲು ಆತ ಹವಣಿಸಿದ.

ಮಿತಿಮೀರಿ ಕುಡಿದದ್ದರಿಂದ ದೇಹವನ್ನು ಎಳೆದುಕೊಂಡು ಹೋಗುವಷ್ಟು ತ್ರಾಣ ಕಾಲುಗಳಲ್ಲಿ ಉಳಿದಿರಲಿಲ್ಲ. ಎರಡು ಸಲ ನಿಲ್ಲಲು ಯತ್ನಿಸಿ ವಿಫಲನಾದ. ಬಾರಿನವ ಮಾಣಿಯನ್ನು ಕರೆದು ಖೋಲಿಯ ತನಕ ಅರುಣನನ್ನು ಮುಟ್ಟಿಸಲು ಹೇಳಿದ. ಕೋಣೆಗೆ ಬಂದು ಹಾಸಿಗೆಯ ಮೇಲೆ ಒರಗಿದಾಗ ಎಲ್ಲ ನೋವನ್ನೂ ಶಮನಗೊಳಿಸುವ ನಿದ್ರಾದೇವಿ ಆಲಂಗಿಸಿದಳು. ಅರುಣ ದೀರ್ಘಕಾಲ ಮಲಗಿದ್ದ.....ಎಚ್ಚರವಾದಾಗ ಇನ್ನೂ ಬೆಳಕು ಹರಿದಿರಲಿಲ್ಲ. ಮೈ ಕೈ ಭಾರವಾಗಿತ್ತು. ಬಿಸಿನೀರಿನ ಸ್ನಾನದಿಂದ ಹಿತವೆನಿಸಬಹುದೆಂದು ಸ್ನಾನಗೃಹಕ್ಕಿಳಿದು ಒಂದು ಗಂಟೆಯ ತನಕ ಸ್ನಾನ ಮಾಡಿದ. ಸ್ನಾನ ಮುಗಿಸಿಬಂದಾಗ ಮಾಣಿ ಟೋಸ್ಟ-ಕಾಫಿಯೊಂದಿಗೆ ಹಾಜರಾಗಿದ್ದ. ಬೆಳಕು ಹರಿದಿತ್ತು. ಎರಡು ಕಪ್ ಕಾಫಿ ಕುಡಿದಮೇಲೆಯೇ ಸ್ವಲ್ಪ ನೆಮ್ಮದಿಯೆನಿಸಿತು.

"ಹೌದು. ನಿನ್ನೆ ಮುಂಜಾನೆ ನಾನು ಪತ್ರಗಳ ಫಾಯಿಲ್ ಓದುವ ಉದ್ದೇಶದಿಂದ ಡೆಕ್ಕಿಗೆ ಧಾವಿಸಿದ್ದೆ. ಆದರೆ ಅದಕ್ಕೆ ಬದಲಾಗಿ ಕೆಣಕಿ ಎದ್ದ ಹಿಂದಿನ ನೋವನ್ನು ಮರೆಯಲು ಬಾರಿಗೆ ಹೋಗಿದ್ದೆ. ನಂತರ ಏನಾಯಿತು......ಅರೆ! ಪತ್ರಗಳ ಫಾಯಿಲ್

ಎಲ್ಲಿ ಹೋಯಿತು. ಡೆಕ್ಕಿನ ಮೇಲೆಯೇ ಬಿಟ್ಟಿರಬೇಕು" ಎಂದು ನೆನಪಾಗಿ ಗಾಳಿವೇಗದಿಂದ ಉಪ್ಪರಿಗೆಗೆ ಹೋದ. ಸತತವಾಗಿ ಬೀಸುವ ಗಾಳಿಯ ರಭಸಕ್ಕೆ ಕೆಲವು ಪತ್ರಗಳು ಹರಿದು ಹೋಗಿದ್ದರೂ ಫಾಯಿಲು ತನ್ನ ಸ್ಥಳದಿಂದ ಕದಲಿರಲಿಲ್ಲ. ಇದೂ ಹಾರಿ ಹೋಗಿದ್ದರೆ ಚೆನ್ನಾಗಿತ್ತು ಎಂದು ಅರುಣನಿಗೆ ಅನಿಸದೇ ಇರಲಿಲ್ಲ.

೬

ಹಡಗದ ವೇಗಕ್ಕಿಂತ ಅರುಣನ ಸ್ಮೃತಿಪಟಲ ವೇಗವಾಗಿ ಚಲಿಸುತ್ತಿತ್ತು. ಆ ಮೂರು ವರ್ಷಗಳಲ್ಲಿ ಪತ್ರವ್ಯವಹಾರ ನಿರಂತರವಾಗಿ ಸಾಗಿತ್ತು. ಅದೆಷ್ಟು ಪತ್ರಗಳು ಇಬ್ಬರ ನಡುವೆ ಓಡಿಯಾಡಿದವು! ಪತ್ರಬಂಧನದಿಂದ ಇಬ್ಬರೂ ಎಂದಿಲ್ಲದಷ್ಟು ಆತ್ಮೀಯರಾಗಿ ಬಿಟ್ಟಿದ್ದರು. ಹಿಂದಿನ ರಸನಿಮಿಷಗಳನ್ನು ನೆನೆಸುವ ಆಸೆಯಿಂದ ಅರುಣ ಒಂದಾದ ಮೇಲೊಂದು ಪತ್ರವನ್ನು ತೆಗೆದು ಓದುತ್ತಲಿದ್ದ. ಆಶಾ ಎರಡು ವರ್ಷಗಳಲ್ಲಿ ಆಗಲೇ ಉದ್ದುದ್ದ ಭಾವನಾತ್ಮಕ ಪತ್ರಗಳನ್ನು ಬರೆಯುವದರ ರೂಢಿ ಮಾಡಿಕೊಂಡು ಬಿಟ್ಟಿದ್ದಳು. ಪತ್ರ ಸಂಗ್ರಹಗಳಲ್ಲಿ ಚಿಕ್ಕ ಪತ್ರವೊಂದು ಇಣಿಕಿತು. ಕಾತುರತೆಯಿಂದ ಅದನ್ನೆತ್ತಿಕೊಂಡ.

ಪ್ರಿಯ ಅರುಣ,

ನಿನ್ನ ಪತ್ರ ಮುಟ್ಟಿವೆ. ಪತ್ರವನ್ನು ಸವಿಸ್ತಾರವಾಗಿ ಉದ್ದವಾಗಿ ಬರೆದರೂ ನಾನದನ್ನು ಓದಿ ಸಂತಸಪಡುವ ಸ್ಥಿತಿಯಲ್ಲಿ ಇಲ್ಲ. ಮನೆಯಲ್ಲಿ ಮದುವೆಯ ಮಾತುಕತೆಗಳು ನಡೆದಿವೆ. ಅಣ್ಣನ ಮದುವೆ ನಿಶ್ಚಯವಾಗಿದೆ. ಜೂನ ತಿಂಗಳಲ್ಲಿ ಮದುವೆ ನಡೆಯಲಿದೆ. ಅವನ ಮದುವೆಯಾದ ತಕ್ಷಣ ನನ್ನದೂ ನೆರವೇರಬೇಕೆಂಬ ಪ್ರಯತ್ನದಲ್ಲಿದ್ದಾರೆ ಆಯಿಯವರು. ಈ ವರ್ಷದಲ್ಲಿ ನೆಡಯಲಾರದಂತೆ ಮಾಡಲು ವಿಶ್ವಪ್ರಯತ್ನವನ್ನೇ ನಡೆಸಿದ್ದೇನೆ. ಆದರೂ ನಾನು ಅಬಲೆ.....ನನ್ನಿಂದ ಏನು ತಾನೇ ಮಾಡಲಾದೀತು? ನಿಮ್ಮ ಸಹಾಯ ಬೇಕು. ಆದ್ದರಿಂದ ನನಗಾಗಿ, ನಿಮ್ಮ ಅಭ್ಯಾಸವನ್ನು ಬೇಗ ಮುಗಿಸಿ ಭಾರತಕ್ಕೆ ಮರುಳುವಿರಾ? ದಮ್ಮಯ್ಯ

ಎಂದೆಂದಿಗೂ ನಿಮ್ಮವಳೇ ಆಗಬಯಸುವ
ಆಶಾ

ಈ ಪತ್ರ ಬಂದಾಗ ಮನಸ್ಸು ಎಷ್ಟು ಉದ್ವಿಗ್ನವಾಗಿತ್ತು! ಎಲ್ಲವನ್ನು ಬಿಟ್ಟು ವಿಮಾನವನ್ನೇರಿ ಭಾರತಕ್ಕೆ ಹೋಗೋಣವೇ ಅನ್ನಿಸಿಬಿಟ್ಟಿತ್ತು. ಅಂದಿನ ದಿನವಿಡಿ ಏನೂ ಕೆಲಸ ಮಾಡಲಾಗಲಿಲ್ಲ. ಆಶಾಳ ಮನಸ್ಸಿನ ವಿರುದ್ಧವಾಗಿ ಅವಳ ಮದುವೆ

ಮಾಡಿಬಿಟ್ಟರೆ? ಆದರೆ ಹಾಗಾಗುವದು ಸಾಧ್ಯವಿಲ್ಲ. ಅವಳ ತಂದೆ ಸುಸಂಸ್ಕೃತರು, ಲೋಕವ್ಯವಹಾರಜ್ಞರಿದ್ದಷ್ಟು ಆದರ್ಶವಾದಿಯೆಂದು ಆಶಾ ಹೇಳಿದ್ದಳು. ಸಾಲದ್ದಕ್ಕೆ ನ್ಯಾಯಾಧೀಶರು. ಮಾನವ ಸ್ವಭಾವವನ್ನು ಚೆನ್ನಾಗಿ ಬಲ್ಲವರು......ಮಗಳ ಇಚ್ಛೆಯ ವಿರುದ್ಧ ಹೋದಾರೆಯೇ? ಏನೇ ಇರಲಿ ಬೇಗ ಮರಳಬೇಕೆಂಬ ಕಠೋರ ನಿರ್ಧಾರದಿಂದ ಉಳಿದೆಲ್ಲ ವಿಚಾರಗಳನ್ನೂ ಮರೆತು ಓದಿನತ್ತ ಲಕ್ಷ್ಯ ಹಾಕಿದ್ದೆ. ದಿನಕ್ಕೆ ೧೮ ತಾಸಿನ ಆ ದುಡಿತ. ಆ ತಪಸ್ಸಿನಂತಿದ್ದ ಜೀವನ. ಒಂದೊಂದೇ ನೆನಸಿಕೊಂಡರೆ ಅಲ್ಪಾವಧಿಯಲ್ಲಿ ದೊರಕಿಸಿದ ಡಾಕ್ಟರೇಟು, ದಿವ್ಯವೇ! ಪ್ರಾಧ್ಯಾಪಕರೂ ಸಾಕಷ್ಟು ಸಹಕರಿಸಿದ್ದರು. ಅಂತಿಮ ಪರೀಕ್ಷೆ (Defence of Thesis)ಯನ್ನೂ ಬೇಗನೇ ಏರ್ಪಡಿಸಿದ್ದರು. ಸಂಶೋಧನೆಗೆ ಸಂಬಂಧಿಸಿ ಈಗಾಗಲೇ ಅನೇಕ ಪೇಪರುಗಳು ಪ್ರಸಿದ್ಧವಾಗಿದ್ದವು. ಅಮೇರಿಕನ್ ವಿಜ್ಞಾನ ಪತ್ರಿಕೆಗಳಲ್ಲಿ ನನ್ನ ಹೆಸರು ಸಾಕಷ್ಟು ಕೇಳಬರುತ್ತಿತ್ತು. ಎಲ್ಲವೂ ಮುಗಿದು ಡಾಕ್ಟರೇಟ್ ಪಡೆದ ಒಂದು ವಾರದಲ್ಲಿಯೇ ಭಾರತಕ್ಕೆ ಮರಳಿದೆ. ತಿರುಗಿ ಹೋಗುವಾಗ ನೋಡದಿದ್ದ ಯುರೋಪಿನ ಇತರ ದೇಶಗಳನ್ನು ಸಂದರ್ಶಿಸುವ ವಿಚಾರ ಇಟ್ಟುಕೊಂಡಿದ್ದೆ. ಆದರೆ ಭಾರತಕ್ಕೆ ಮರಳುವದು ಅನಿವಾರ್ಯವಾಗಿತ್ತು. ಬೇಗ ಮುಂಬೈ ತಲುಪಿದೆ.

ಬರುವ ವಿಚಾರವನ್ನು ಯಾರಿಗೂ ಬರೆಯದ್ದರಿಂದ ವಿಮಾನ ನಿಲ್ದಾಣಕ್ಕೆ ಯಾರೂ ಬಂದಿರಲಿಲ್ಲ. ಯಾರನ್ನೂ ಭೆಟ್ಟಿಯಾಗುವ ಗೊಡವೆಗೆ ಹೋಗದೆ ಹೋಟಲೊಂದರಲ್ಲಿ ಇಳಿದುಕೊಂಡಿದ್ದೆ. ಮರುದಿನ ಸೋಮವಾರ ಆಶಾ-ನಾನು ಕೂಡಿ ಅದೇ ವಿಹಾರಲೋಕಕ್ಕೆ ಹೋಗುವದೆಂದು ಅಮೇರಿಕೆಯಿಂದಲೇ ಗೊತ್ತುಮಾಡಿಕೊಂಡಿದ್ದೆವು. ನಿಶ್ಚಿತ ಸ್ಥಳಕ್ಕೆ ಬಂದು ಬಹಳ ಹೊತ್ತು ಕಾದೆ. ಯಾವ ತರುಣಿ ದೂರದಿಂದ ಕಂಡುಬಂದರೂ ಆಶಾ ಇರಬಹುದೆಂದು ಕಣ್ಣು ಹಿಗ್ಗಿಸಿ ನೋಡುತ್ತಿದ್ದೆ. ಈ ಮೂರು ವರ್ಷಗಳಲ್ಲಿ ಆಶಾ ಯಾವ ಬದಲಾವಣೆಗಳನ್ನು ಹೊಂದಿರಬಹುದೆಂದು ಆಲೋಚಿಸುತ್ತ ನಿಂತಿದ್ದೆ. ನಿರ್ದಿಷ್ಟ ಪಡಿಸಿದ ಅವಧಿಗಿಂತ ಒಂದು ತಾಸು ಮಿಕ್ಕಿ ಹೋಗಿತ್ತು. ದೂರದಲ್ಲಿ ಆಶಾ ಕಾಣಿಸಿಕೊಂಡಳು. ಹಿಂದಿನಂತೆ ಸಾದಾ ಉಡುಪು ಧರಿಸದೇ ಭರ್ಜರಿ ಜರತಾರಿ ಸೀರೆ ಉಟ್ಟಿದ್ದಳು. ಹೊಸ ಆಭರಣಗಳೂ ಮೈಮೇಲೆ ಮಿನುಗುತ್ತಿದ್ದವು. ವಿಶೇಷ ಎಚ್ಚರಿಕೆಯಿಂದ ಅಲಂಕಾರ ಮಾಡಿಕೊಂಡಿದ್ದಳು. ಹರ್ಷಭರಿತ ಮುಗುಳುನಗೆ ನನ್ನನ್ನು ಸ್ವಾಗತಿಸಿತ್ತು.

"ಮೂರು ವರ್ಷಗಳಲ್ಲಿ ಆದ ಬದಲಾವಣೆ ಇದೇ ಎಂದು ತೋರುತ್ತದೆ. ರಂಭೆಯಂತೆ ಅಲಂಕಾರ ಮತ್ತು ತಡಮಾಡಿ ಬರುವದು......" "ಶಶ್‌ಶ್! ಮೆಲ್ಲಗೆ ಮಾತನಾಡಿ. ಇಲ್ಲಿ ಸುತ್ತೆಲ್ಲ ನನ್ನ ಪರಿಚಯದವರೇ ಇದ್ದಾರೆ. ಅವರೇನು ಅಂದುಕೊಂಡಾರು?"

"ಅವರೇನು ಅಂದುಕೊಂಡಾರು? ಇವರಿಬ್ಬರ ಮದುವೆ ತೀವ್ರದಲ್ಲಿಯೇ ನಡೆದುಹೋಗಲಿದೆ ಅಂದುಕೊಂಡಾರು!"

"ಇಷ್ಟೆಲ್ಲ ಧೈರ್ಯ ಅಮೇರಿಕೆಯಲ್ಲಿ ಕಲಿತುಬಂದಿರೆಂದು ಕಾಣುತ್ತದೆ" ಎಂದು ಆಶಾ ನಕ್ಕಳು.

"ನೀವು ಅಮೇರಿಕೆಯಲ್ಲಿ ಹೊಸ ಹೊಸ ಫ್ಯಾಶನ್ನುಗಳನ್ನು ನೋಡಿ ಬಂದಿದ್ದೀರಿ. ನನ್ನನ್ನು ನೋಡಿ ಹಳೆಗೂಬೆ ಅಂದುಕೊಂಡೀರಿ ಎಂದು ಇದ್ದುದರಲ್ಲಿಯೇ ಸ್ವಲ್ಪ ಒನಪು ಮಾಡಿಕೊಂಡು ಬಂದರೆ ನಮ್ಮ ರಾಯರು ಅಮೇರಿಕೆಗೆ ಹೋಗುವ ಮೊದಲು ಧರಿಸುತ್ತಿದ್ದಷ್ಟು ಒಳ್ಳೆಯ ಬಟ್ಟೆಗಳನ್ನೂ ಕೂಡ ಈಗ ಧರಿಸಿಲ್ಲ!"

"ಪಾಶ್ಚಾತ್ಯರೆಂದರೆ ನಮ್ಮದೆಲ್ಲ ತಪ್ಪು ಕಲ್ಪನೆಯಿರುತ್ತದೆ ಆಶಾ! ಸಾಮಾನ್ಯ ಅಮೇರಿಕನ್ನರು ಬಟ್ಟೆಬರೆಗಳ ಬಗ್ಗೆ ಎಷ್ಟೂ ಜಾಗ್ರತೆ ವಹಿಸುವದಿಲ್ಲ. ಫ್ಯಾಶನ್ನಿನ ಒಲವು ಇದ್ದವರು ಬೇರೆಯೇ ಗುಂಪು. ಅವರಿಗೂ ಜನಸಾಮಾನ್ಯರಿಗೂ ಬಹಳ ಅಂತರವಿರುತ್ತದೆ."

"ಅಂದ ಹಾಗೆ ಅರೆಮುಚ್ಚುವ ಬಟ್ಟೆ ಬರೆಗಳು ಅಮೇರಿಕೆಯಲ್ಲಿ ಇತ್ತೀಚೆಗೆ ಬಹಳ ಜನಪ್ರಿಯವಾಗಿವೆಯಂತೆ..... ನೀವು ನೋಡಿದ್ದೀರಾ?"

"ಇಂತಹ ಬಟ್ಟೆ ಬರೆ ಹಾಕಿಕೊಂಡು ಬೀದಿ ಬೀದಿಗಳಲ್ಲಿ ತಿರುಗಾತ್ತಾರೆಂದು ಮಾಡಿದ್ದಿ ಏನು? ಅದಿರಲಿ ಈ ನಿನ್ನ ವಿಶೇಷ ವೇಷ ಭೂಷಣದ ಅರ್ಥವೇನು ಹೇಳು?"

"ನೋಡಿ, ನಮ್ಮಣ್ಣನ ಮದುವೆಯಾಗಿ ಮೂರು ದಿನಗಳಾದವು. ನೆಂಟರೆಲ್ಲ ಇನ್ನೂ ಇದ್ದಾರೆ. ಅವರ ಆತಿಥ್ಯದಲ್ಲೆ ನನ್ನ ದಿನವೆಲ್ಲ ಕಳೆಯುತ್ತಿದೆ. ತೀವ್ರದಲ್ಲಿಯೇ ನಾನು ಮದುಮಗಳಾಗಲಿರುವೆನಾದ್ದರಿಂದ ಅತ್ಯುತ್ತಮ ಬಟ್ಟೆಬರೆಗಳನ್ನು ಧರಿಸಬೇಕೆಂದು ಎಲ್ಲರ ಒತ್ತಾಯ. ವರನು ಯಾವಾಗ, ಎಲ್ಲಿ ನೋಡಿ ಒಲಿದಾನು ಎಂಬ ನಿಯಮವಿಲ್ಲವಂತೆ!"

"ನನ್ನ ರೂಪದಲ್ಲಿ ಬಂದಾನು ಎಂದು ಯಾರೂ ಹೇಳಲಿಲ್ಲವೇನು ಮತ್ತೆ?"

"ನಿಮ್ಮ ಪತ್ತೆ ಯಾರಿಗೂ ಹಚ್ಚಿಗೊಟ್ಟಿಲ್ಲ. ಗೆಳತಿಯೊಬ್ಬಳ ಹುಟ್ಟು ಹಬ್ಬದ ಪಾರ್ಟಿಗೆ ಹೋಗುತ್ತೇನೆಂದು ಹೇಳಿ ಬಂದಿದ್ದೇನೆ. ಇಷ್ಟೊಂದು ಶೃಂಗಾರಕ್ಕೆ ಕಾರಣ ಹೇಳಿದೆ. ನಡೆಯಿರಿ, ಟ್ಯಾಕ್ಸಿಯೊಂದನ್ನು ಗೊತ್ತು ಮಾಡಿ."

ಟ್ಯಾಕ್ಸಿ ವಿಹಾರಲೇಕದತ್ತ ಓಡುತ್ತಿತ್ತು. ನಾನು ಆಶಾಳನ್ನು ಎಂದೂ ನೋಡದಿದ್ದವನಂತೆ ನೋಡುತ್ತಲಿದ್ದೆ. ಆಶಾ ಕೆಂಪೇರಿದ ಮುಖದಿಂದ ಸೆರಗು ಸರಿಪಡಿಸಿಕೊಂಡು, "ಇದೇನು ಹೀಗೆ ನೋಡುತ್ತಿದ್ದೀರಿ. ಯಾಂಕಿ ಹುಡುಗಿಯರನ್ನು ನೋಡಿದ್ದು ಸಾಕಾಗಲಿಲ್ಲವೇ?" ಎಂದಿದ್ದಳು.

"ಆಶಾ, ಮೂರು ವರ್ಷಗಳಲ್ಲಿ ನೋಡಸಿಗದ ಸೌಂದರ್ಯರಾಶಿ ಈಗ ಕಣ್ಣೆದುರಿಗಿದ್ದಾಗ ನೋಡದೇ ಇರಲಾದೀತೆ? ಆ ಶ್ವೇತಕನ್ಯೆಯರಿಗೆ ನಿನ್ನ ಅಂದಚಂದ ಎಲ್ಲಿಂದ ಬಂದೀತು?" ಎಂದು ಮೆಲ್ಲನೆ ಅವಳ ಕೈ ಹಿಡಿದಿದ್ದೆ.

ಆಶಾ, ಪಿಸುಮಾತಿನಲ್ಲಿ "ಡ್ರೈವರನು ಕನ್ನಡಿಯಲ್ಲಿ ನಮ್ಮನ್ನೇ ನೋಡುತ್ತಿದ್ದಾನೆ" ಎಂದು ಹೇಳಿ ಮೆಲ್ಲನೆ ಕೈ ಬಿಡಿಸಿಕೊಂಡಳು. ನಾನು ಚೇತರಿಸಿಕೊಂಡು ಸರಿದು ಕುಳಿತಿದ್ದೆ.

"ಇದೆಲ್ಲ ಅಮೇರಿಕೆಯಲ್ಲಿ ಕಲಿತಿದ್ದೀರಾ?"

"ಅಮೇರಿಕೆಯಲ್ಲಿ ಕಲಿಯಬೇಕೆಂದಿದೆಯೇ? ಎಲ್ಲವನ್ನು ಅಲ್ಲಿ ಹುಡುಗಿಯರು ತಾವಾಗಿಯೇ ಕಲಿಸುತ್ತಾರಂತೆ! ಆದರೆ ನಾನು ಏಕಪತ್ನಿವ್ರತಸ್ಥನಂತೆ ನಿನ್ನದೇ ಧ್ಯಾನ ಮಾಡುತ್ತಿದ್ದೆನಾದ್ದರಿಂದ ಒಬ್ಬಳೂ ನನ್ನತ್ತ ಸುಳಿಯಲಿಲ್ಲ!"

"ಹಾಗಾದರೆ ಇವೆಲ್ಲ ಹುಡುಗಿಯರೇ ಕಲಿಸುತ್ತಾರೆಂದು ನಿಮಗೆ ಹೇಗೆ ಗೊತ್ತಾಯಿತು?"

"ಎಲ್ಲವನ್ನೂ ಸ್ವತಃ ಮಾಡಿಯೇ ಅನುಭವಿಸಬೇಕೆಂಬ ನಿಯಮವಿಲ್ಲ ಆಶಾ! ಕೆಲವನ್ನಾದರೂ ಉಳಿದವರ ಅನುಭವದಿಂದ ತಿಳಿದುಕೊಳ್ಳಲು ಸಾಧ್ಯವಿದೆ."

"ನೀವು ಯಾರ ಅನುಭವದಿಂದ ತಿಳಿದುಕೊಂಡಿರಿ?"

"ನಿನ್ನ ಪ್ರಶ್ನೆಗಳಿಂದ ನಾನು ವಿದೇಶಕ್ಕೆ ಹೋಗಿ ಬಂದ ಇತರ ಭಾರತೀಯರಿಗಿಂತ ಏನೂ ಭಿನ್ನವಾಗಿಲ್ಲ ಎಂಬಂತೆ ಅನಿಸುತ್ತದೆ! ನಂಬುವದು-ಬಿಡುವದು ನಿನಗೆ ಸೇರಿದ್ದು. ನಾನು ಸತ್ಯವನ್ನೇ ಹೇಳುತ್ತೇನೆ."

"ಮೂರು ವರ್ಷದ ನಂತರದ ಪ್ರಥಮ ಭೆಟ್ಟಿಯನ್ನು ಹೀಗೆ ಗಂಭೀರವಾಗಿ ಪ್ರಾರಂಭಿಸಿದರೆ ಹೇಗೆ? ನಾನು ಪ್ರಶ್ನೆ ಕೇಳುವಲ್ಲೇ ತಪ್ಪಿದೆ......ಸರಳವಾಗಿ ಕೇಳಬೇಕೆಂದರೆ ನಾನು ಅಮೇರಿಕನ್ನರ ಪ್ರಣಯಜೀವನದ ಬಗ್ಗೆ ತಿಳಿಯಲು ಬಯಸುತ್ತೇನೆ ಅಷ್ಟೆ."

ಟ್ಯಾಕ್ಸಿಯುವನಿಗೆ ಬಾಡಿಗೆ ಕೊಟ್ಟು ಹಿಂದೊಮ್ಮೆ ಕುಳಿತು ಮನದಣಿ ಮಾತನಾಡಿದ ಸ್ಥಳಕ್ಕೆ ಹೋದೆವು. ಅಲ್ಲಿ ಹಳೆಯ ಸಂಕ ಹೋಗಿ ಭವ್ಯವಾದ ಹೊಸ

ಬ್ರಿಡ್ಜ್ ನಿರ್ಮಾಣವಾಗಿತ್ತು. ಅಲ್ಲಲ್ಲಿ ಕುಳಿತುಕೊಳ್ಳಲು ಆಸನಗಳ ನಿರ್ಮಾಣವಾಗಿತ್ತು. ಇಬ್ಬರೂ ಒಂದು ಸಿಮೆಂಟಿನ ಸೀಟನ್ನು ಆರಿಸಿ ಕುಳಿತುಕೊಂಡೆವು. "ನಾನು ಅಮೇರಿಕನ್ ಜೀವನದಲ್ಲಿ ಪ್ರತ್ಯಕ್ಷ ಭಾಗವಹಿಸದಿದ್ದರೂ ನನ್ನ ಸಹಪಾಠಿಗಳು ಅದರಲ್ಲಿ ಏನೂ ಕಡಿಮೆಯಿರಲಿಲ್ಲ. ಅವರಿಗೆಲ್ಲ ತಮ್ಮ ಅನುಭವಗಳನ್ನು, ಸುಖದುಃಖಗಳನ್ನು ತೋಡಿಕೊಳ್ಳಲಿಕ್ಕೆ ಆತ್ಮೀಯನೊಬ್ಬ ಬೇಕಾಗಿದ್ದ. ಯಾರೊಂದಿಗೂ ಹೆಚ್ಚು ಸಲಿಗೆ ಬೆಳೆಸದ ನಾನು ಅನೇಕರ ಗುಟ್ಟುಗಳ ಪಾಲುಗಾರ, ವಿಶ್ವಸ್ಥ ಆಗಿದ್ದೆ."

"ಹಾಗಾದರೆ ಅವರ ಅನುಭವಗಳನ್ನು ನಾನು ತಿಳಿದುಕೊಳ್ಳಬಹುದೇ."

"ಈ ಅನುಭವಗಳೆಲ್ಲ ಗಂಡಸರು ಅಥವಾ ಆತ್ಮೀಯ ಗೆಳೆಯರು ಹೇಳಿಕೊಳ್ಳುವ ವಿಷಯಗಳು. ಆದರೆ ನಾವಿಬ್ಬರೂ ತೀರ ಆತ್ಮೀಯರಾದ್ದರಿಂದ ನಿನಗೆ ಹೇಳಬಹುದು ಎಂದು ಅನಿಸುತ್ತದೆ."

"ಹೂಂ ನಿಮ್ಮ ಕತೆಗಿಂತ ಪ್ರಸ್ತಾವನೆಯೇ ದೊಡ್ಡದಾಯಿತು."

"ನನ್ನ ಸಹಪಾಠಿ ವಿಜಯ ಗುಜರಾತಿ ಹುಡುಗ. ತಂದೆ ನಾರಿನ ವ್ಯಾಪಾರದಲ್ಲಿ ಲಕ್ಷಾವಧಿ ರೂಪಾಯಿ ಗಳಿಸಿದ್ದಾರೆ. ಮಗ ಓದಲು ವಿದೇಶಕ್ಕೆ ಹೋದರೆ ತನಗೊಂದು ಕೀರ್ತಿ ಎಂದು ಇವರು ನಂಬಿದಂತಿದೆ. ಭಾರತದಲ್ಲಿ ಕೇವಲ ಬಿ.ಎಸ್.ಸಿ. ಮುಗಿಸಿ ಬಂದಿದ್ದ ವಿಜಯ. ತನಗೆ ಏನು ಬೇಕು? ಬೇಡ? ಎನ್ನುವದು ಒಂದೂ ತಿಳಿಯದು ಅವನಿಗೆ. ಹೊಸದಾಗಿ ಅಮೇರಿಕೆಗೆ ಬಂದಾಗ ಅಮೇರಿಕನ್ ವಿದ್ಯಾರ್ಥಿಗಳೊಂದಿಗೇ ಹಾಸ್ಟೆಲಿನಲ್ಲಿ ಇರುತ್ತಿದ್ದನಂತೆ. ಅಮೇರಿಕನ್ ಹುಡುಗರೆಲ್ಲ ವಾರಾಂತ್ಯದಲ್ಲಿ datingಗೆ ಹೋಗುವದು ತೀರ ಸಾಮಾನ್ಯ. ಇವನಿಗೂ ಒಬ್ಬ ಹುಡುಗಿಯ ಪರಿಚಯ ಮಾಡಿಕೊಡುತ್ತೇನೆಂದು ರೂಮಮೇಟ್ ಹೇಳಿದಾಗ ವಿಜಯ ಬಹಳ ಹಿಗ್ಗಿ ಹೋದನಂತೆ! ಎಂದೂ ಬೆಟ್ಟಿಯಾಗದ ಕುಮಾರಿಯೊಂದಿಗೆ ಇಡೀ ಸಾಯಂಕಾಲ ಕಾಲ ಕಳೆಯುವ ಕಲ್ಪನೆಯೇ ತುಂಬ ರೋಮಾಂಚಕಾರಿ ಆಯಿತಂತೆ! ಇಡೀ ದಿನ ಸಂಭ್ರಮದಲ್ಲಿದ್ದ. ಈ ಸುಯೋಗಕ್ಕಾಗಿ ಒಂದು ಹೊಸ ಸೂಟನ್ನೇ ಖರೀದಿಸಿದ"

ಅವನಿಗೆ ದೊರೆತ ಗೆಳತಿ ನರ್ಸ ವಿದ್ಯಾರ್ಥಿನಿಯೊಬ್ಬಳು. ಕ್ರಿಸ್ತೀನ್ ಎಂದು ಹೆಸರಿದ್ದರೂ ಕ್ರಿಸ್ ಎಂದೇ ಎಲ್ಲರೂ ಕರೆಯುವರು. ಕೈಕಾಲುಗಳು ಮಾಟವಾಗಿದ್ದವು. ದೃಢಕಾಯದ ಸುಂದರಿಯಂತೆ. ವಿಜಯ ಮೊದಲು ಅವಳನ್ನು ಕಂಡಾಗ ತುಂಬ ಸಂಕೋಚಪಟ್ಟನಂತೆ, ಹೊಸಬನ ಸಂಕೋಚವನ್ನು ಅರಿತು ಅವಳು ತಾನಾಗಿಯೇ ಅವನ ಸುತ್ತ ಕೈ ಬಳಸಿ ಪಕ್ಕದ ಉದ್ಯಾನಕ್ಕೆ ಕರೆದುಕೊಂಡು ಹೋದಳಂತೆ. ಆ ಮೃದು. ಸ್ಪರ್ಶದಿಂದ ವಿಜಯನಿಗೆ ಜಗತ್ತೇ ಬೇರೆಯಾಯಿತಂತೆ. ತನ್ನ ಎರಡೂ

ಕೈಗಳನ್ನು ಮೃದುವಾಗಿ ಅಮುಕಲಾರಂಭಿಸಿದಾಗ ಸಂಕೋಚ ದೂರವಾಗಿ ಅವಳ ಬಗ್ಗೆ ಆತ್ಮೀಯತೆ ಎನಿಸಲಾರಂಭಿಸಿತಂತೆ. ಆಕೆ ತನ್ನ ಬಗ್ಗೆ ಎಷ್ಟು ಬೇಕೋ ಅಷ್ಟೇ ಹೇಳಿ ವಿಜಯನ ಬಗ್ಗೆ ಎಲ್ಲ ಮಾಹಿತಿಯನ್ನು ಪಡೆದಳು. ಸ್ನೇಹಿತರ ಮಾತಿನಲ್ಲಿ ತುಂಬ ಆಸಕ್ತಿಯಿರುವಂತೆ ತೋರಿಸಿಕೊಳ್ಳುವದು ಆ ಜನರ ವಾಡಿಕೆ. ಕ್ರಿಸ್ ಕೂಡ ಹೇಗೆ ಅಪವಾದವಾದಾಳು?

ಇಬ್ಬರೂ ಸಿನೇಮಾಕ್ಕೆ ಹೋದರು. ಅಲ್ಲೆಲ್ಲ ಹೆಚ್ಚಾಗಿ ವಿದ್ಯಾರ್ಥಿ-ವಿದ್ಯಾರ್ಥಿನಿಯರೇ ತುಂಬಿದ್ದರು. ಜೋಡಿ ಜೋಡಿಯಾಗಿ ಕುಳಿತ ಯಾರಿಗೂ ಸಿನೇಮಾದ ಅರಿವು ಇದ್ದಂತಿರಲಿಲ್ಲ. ಕ್ರಿಸ್ ಒರಗಿ ಕುಳಿತು ಪಿಸುಮಾತಿನಲ್ಲಿ ಏನೇನೋ ಹೇಳುತ್ತಲಿದ್ದರೆ ವಿಜಯನಿಗೆ ಸಿನೇಮಾದತ್ತ ಲಕ್ಷ್ಯವೆಲ್ಲಿ ಹೋಗಬೇಕು? ಯುವಕ-ಯುವತಿಯರ ಸಹವಾಸಕ್ಕೆ ಈ ಸಿನೇಮ ನೆವ ಮಾತ್ರ ಎಂದು ತಿಳಿಯಲು ಅವನಿಗೆ ತಡವಾಗಲಿಲ್ಲ. ಕುಳಿತ ಇತರ ಪ್ರೇಕ್ಷಕರು ಇದಕ್ಕೂ ಮಿಕ್ಕಿದ ಕಾರ್ಯದಲ್ಲಿ ತೊಡಗಿದ್ದರಿಂದ ಇವರತ್ತ ಲಕ್ಷ್ಯ ಗೊಡಲಿಲ್ಲ.

"ಕ್ರಿಸ್, ಒಂದಿಷ್ಟು ಕಾಫಿ ಕುಡಿದು ಬರೋಣವೇ?" ಎಂದು ಉತ್ತರ ಬರುವ ಮೊದಲೇ ಅವನ ಕೈ ಹಿಡಿದು ಹೊರಗೆ ಬಂದೇ ಬಿಟ್ಟಳಂತೆ. ಅಲ್ಲಿಯೇ ಹೊರಗೆ ಇಟ್ಟ ಕಾಫಿ ಮಶೀನಿನಿಂದ ಎರಡು ಕಪ್ ಕಾಫಿ ಪಡೆದು-ಸೇವಿಸುತ್ತ ಅವರ ಸಂಭಾಷಣೆ ಮುಂದುವರಿಯಿತು.

"ನೀವು ಅಮೇರಿಕೆಗೆ ಬರುವದು ಮೊದಲಸಲವೇ?"

"ಹೂಂ-ಉಹೂಂ. ಡೇಟಿಂಗ್ ಮೊದಲ ಸಲದ್ದು."

"ಹೂಂ! ನಿಮ್ಮನ್ನು ನೋಡಿದ ಕೂಡಲೇ ತಿಳಿಯಿತು......ನಡಿಯಿರಿ ಯಾವುದಾದರೂ ನೃತ್ಯಗ್ರಹಕ್ಕೆ ಹೋಗೋಣ."

"ಬೇಡ ಬೇಡ! ನನಗೆ ಕುಣಿಯಲು ಬಾರದು!"

"ಹಾಗಾದರೆ ಅವಶ್ಯ ಹೋಗಲೇಬೇಕು. ಈಗ ನೀವು ಕಲಿಯಲೇಬೇಕು. ನಾನಿಂದು ನಿಮಗೆ ಕುಣಿತ ಕಲಿಸಿಯೇ ತೀರುವೆ" ಎಂದು ವಿಜಯನನ್ನು ಎಳೆದುಕೊಂಡೇ ಹೊರಟಳಂತೆ.

ನೃತ್ಯದ ಹಾಲನ್ನು ತಲುಪಿದಾಗ ರಭಸದ ನೃತ್ಯ-ಗೀತ ನಡೆದಿತ್ತು. ಅಲ್ಲಿಯೂ ವಿದ್ಯಾರ್ಥಿ ವಿದ್ಯಾರ್ಥಿನಿಯರೇ ಬಹು ಸಂಖ್ಯೆಯಲ್ಲಿದ್ದರು. ಯಾರಿಗೂ ಬಾಹ್ಯ ಜಗತ್ತಿನ ಅರಿವು ಇದ್ದಂತೆ ಇರಲಿಲ್ಲ. ಕ್ರಿಸ್ ಒಂದು ಪಕ್ಕಕ್ಕೆ ವಿಜಯನನ್ನು ಕರೆದುಕೊಂಡು ಹೋಗಿ ಕೈ ಹೀಗೆ ಹಿಡಿಯಬೇಕು. ಹೆಜ್ಜೆ ಹೀಗೆ ಹಾಕಬೇಕು ಎಂದು ಕಲಿಸಲಾರಂಭಿಸಿದಳು!

ಐದೇ ನಿಮಿಷಗಳಲ್ಲಿ "ಇದೊ! ನೀನಾಗಲೇ ನೃತ್ಯ ನಿಪುಣನಾಗಿ ಬಿಟ್ಟೆ!" ಎಂದು ಉದ್ಗರಿಸಿದ್ವಳು. ಸರಿ ಇಬ್ಬರೂ ನರ್ತಿಸಲಾರಂಭಿಸಿದರು! ಕೆಲ ನಿಮಿಷಗಳ ನಂತರ ಕ್ರಿಸ್, "ನನಗೆ ನಿಮ್ಮ ದೇಶದ ಅಸ್ಪೃಶ್ಯರಂತೆ ದೂರ ದೂರ ಇದ್ದು ನರ್ತಿಸುವದು ಇಷ್ಟವಿಲ್ಲ. ಒಬ್ಬರಿಗೊಬ್ಬರು ಅಂಟಿಕೊಂಡು ಕುಣಿದಾಗಲೇ ನಿಜವಾದ ನೃತ್ಯ ಸುಖದ ಅನುಭವವಾಗುವದು" ಎಂದು ವಿಜಯನನ್ನು ಬಿಗಿಯಾಗಿ ತಬ್ಬಿಕೊಂಡು ಹೆಜ್ಜೆ ಹಾಕಲಾರಂಭಿಸಿದಳು! ಸ್ವಲ್ಪ ಹೊತ್ತಿನಲ್ಲಿ "ನಾಲ್ಕು ಕಾಲು ಎರಡೇ ಆಗಬೇಕು"ಎಂದು ತನ್ನ ಕಾಲುಗಳನ್ನು ವಿಜಯನ ಕಾಲಿಗೆ ಸುತ್ತಿದಾಗ ವಿಜಯ ಬೀಳಲಿಕ್ಕಾದನಂತೆ! ಅಷ್ಟರಲ್ಲಿ ಬ್ಯಾಂಡ ವಾದ್ಯ ನಿಂತಿತು. ವಿಶ್ರಾಂತಿ ಸೂಚಕವದು. ಪಾನೀಯ ಮತ್ತು ಮುಂದಿನ ನೃತ್ಯದ ತಯಾರಿಗಾಗಿ ಕೊಟ್ಟ ವಿರಾಮ. ಕ್ರಿಸ್ ಬಿಯರ ತರಲು ಹೋದಳು. ತನಗೆ ಬಿಯರ್‌ದ ರೂಢಿಯಿಲ್ಲವೆಂದು ಹೇಳಿದಾಗ ಕೋಕೋ ಕೋಲಾ ಕೊಡಿಸಿದಳು. ವಿಜಯನಿಗೆ ಸೆರೆಯ ಅವಶ್ಯಕತೆ ಇರಲಿಲ್ಲ. ಕ್ರಿಸ್ ಅಂಗಸ್ಪರ್ಶದಿಂದ ಆಗಲೇ ಅವನಿಗೆ ಸಾಕಷ್ಟು ಅಮಲು ಏರಿತ್ತು.

ವಾದ್ಯ ಪ್ರಾರಂಭವಾಗುತ್ತಿದ್ದಂತೆ, ಅರ್ಧ ಕುಡಿದ ಕೋಕೋಕೋಲ ಹಾಗೆಯೇ ಬಿಟ್ಟು ಈ ಬಾರಿ ತಾನೇ ಕ್ರಿಸ್‌ಳನ್ನು ಎಳೆದುಕೊಂಡು ಹೊರಟ. ಇನ್ನೇನು ಈ ಗಿಳಿ ಪಂಜರಕ್ಕೆ ಸಿಲುಕುವದು ಖಂಡಿತ ಎಂದು ತಿಳಿದುಕೊಂಡು ಕ್ರಿಸ್ ಹೆಚ್ಚಿನ ಆವೇಶದಿಂದ ನರ್ತಿಸಲಾರಂಭಿಸಿದಳು.

"ಕ್ಷಮಿಸಿ ಕ್ರಿಸ್ ವಿಜಯನ ಹಿಂದೆ ಬೀಳಬೇಕೆ? ಅವಳಿಗೆ ಅಮೇರಿಕನ್ ಕುಮಾರನು ಸಿಗುತ್ತಿರಲಿಲ್ಲವೇ?" ಎಂದಳು ಆಶಾ.

"ನೋಡು, ನಮ್ಮ-ಅವರ ಸಾಮಾಜಿಕ ಪದ್ಧತಿಗಳಲ್ಲಿ ವ್ಯತ್ಯಾಸವಿದೆ. ಅಲ್ಲಿ ಕುಮಾರಿ ತನ್ನ ಭಾವೀ ಪತಿಯನ್ನು ತಾನೇ ಹುಡುಕಿಕೊಳ್ಳಬೇಕು. ಇದು ಅಷ್ಟು ಸುಲಭ ಕೆಲಸವಲ್ಲ. ಅಮೇರಿಕನ್ ಯುವಕರಿಗೆ ಎರಡು ವರ್ಷದ ಸೈನ್ಯ ಕಡ್ಡಾಯವಾಗಿದೆ. ಅವರು ಈ ಸಮಯದಲ್ಲಿ ಜರ್ಮನಿ-ವಿಯಟನಾಮಗಳಲ್ಲಿ ಹೋಗಿರುತ್ತಾರೆ. ದೇಶದಲ್ಲಿ ಇಂಜನಿಯರ-ಡಾಕ್ಟರ-ವಿಜ್ಞಾನಿ ಹುಡುಗರಿಗಾಗಿ ಹೆಚ್ಚಿನ ಬೇಡಿಕೆಯಿದೆ. ಅತಿ ಸುಂದರಿಯಾದ ಹುಡುಗಿ ಬೇಗ ಮದುವೆಯಾಗಿ ಹೋಗಿ ಬಿಡುತ್ತಾಳೆ. ಇಂಥವರು ಮಾಧ್ಯಮಿಕ ಶಿಕ್ಷಣ ಮುಗಿಯುವ ಮೊದಲೇ ಶ್ರೀಮತಿಯರಾಗಿರುತ್ತಾರೆ. ಈ ಹಂತದಲ್ಲಿ ಹಾಗೆಯೇ ಉಳಿದ ಹುಡುಗಿಯರು ಕಾಲೇಜಿಗ ಹೋಗುತ್ತಾರೆ. ಅಲ್ಲೂ 'ವರಶೋಧನೆ' ನಡೆಸುತ್ತಾರೆ. ಇಪ್ಪತ್ತು ವರ್ಷ ದಾಟಿದ ಕುಮಾರಿಗೆ ಮದುವೆಯ ಅವಕಾಶ ವಿರಳವಾಗುತ್ತ ಹೋಗುತ್ತದೆ. ಕ್ರಿಸ್‌ಳಿಗೆ ಅದಾಗಲೇ ಇಪ್ಪತ್ತೆರಡು ತುಂಬಿದ್ದವು. ಅವಳು ಆದಷ್ಟು ಬೇಗ ಮದುವೆಯಾಗುವ ಆತುರದಲ್ಲಿದ್ದಳು. ಅಮೇರಿಕೆಯ

ಮದುವೆಯ ಸ್ಪರ್ಧೆಯಲ್ಲಿ ಸಫಲರಾಗದವರು ಅನೇಕರು ಭಾರತೀಯರ ಬೆನ್ನು ಹತ್ತುತ್ತಾರೆ. ಭಾರತೀಯರ ಕಾಫಿ ಬಣ್ಣ ತಮಗೆ ಪ್ರಿಯವೆಂದು ಮೇಲೆ ಮೇಲೆ ಹೇಳುತ್ತಿದ್ದರೂ ಅದರ ಕಾರಣ ಬೇರೆಯೇ ಆಗಿರುತ್ತದೆ. ಹೆಣ್ಣಿನ ಸಹವಾಸ ಅರಿಯದ ಭಾರತೀಯ ವಿದ್ಯಾರ್ಥಿಗಳು ಬೇಗನೇ ಇಂಥವರಿಗೆ ಮರುಳಾಗುತ್ತಾರೆ....."

"ನೀವೂ ಇದೇ ಗುಂಪಿಗೆ ಸೇರಿದವರೇನು?"

"ನಾನು ಅಪವಾದವಿರಬೇಕು, ನನಗೂ ಹೆಣ್ಣಿಗೂ ದೂರ" ಎಂದು ನಕ್ಕಿದ್ದೆ.

"ಚೆನ್ನಾಗಿ ಹೇಳುತ್ತೀರಲ್ರಿ; ಅಮೇರಿಕೆಗೆ ಹೋಗುವ ಮೊದಲೇ ಸಾಕಷ್ಟು ಅಮೇರಿಕನ್‌ರಾಗಿದ್ದೀರಿ!"

"ಏನೇ ಇರಲಿ. ನಾನು ನನ್ನ ಬಗ್ಗೆ ಹೇಳಹೊರಟಿಲ್ಲವಲ್ಲ? ಇದೆಲ್ಲ ಜೀವನದ ಪರಿಚಯವಿದ್ದ ಅಮೇರಿಕನ್ ಯುವಕರು ಇಂಥ ಮೋಹಬಲೆಯಲ್ಲಿ ಸಿಕ್ಕಿ ಬೀಳುವದಿಲ್ಲ. ಅನೇಕ ಸಲ ಇಂಥ ಸ್ನೇಹದ ದುರುಪಯೋಗ ಪಡೆಯುವುದುಂಟು. ಇದೆಲ್ಲವನ್ನು ಕಂಡು,ಕೇಳಿ, ಅನುಭವಿಸಿದ ಕುಮಾರಿಯರು ಹೆಚ್ಚು ವಿಶ್ವಸ್ಥರಾದ ಭಾರತೀಯರಿಗೆ ಒಲಿಯುತ್ತಾರೆ. ಒಮ್ಮೆ ಮದುವೆಯಾಯಿತೆಂದರೆ ಗಂಡನಿಗೆ ಸರಿಯಾಗಿ ಲಗಾಮು ಹಾಕಿ ಬಿಡುತ್ತಾಳೆ-ಇಂಥ ಕುಮಾರಿ."

"ಹಾಗಾದರೆ, ಕ್ರಿಸ್-ವಿಜಯರ ಪ್ರಣಯ ಮದುವೆಯಲ್ಲಿ ಕೊನೆಗೊಂಡಿತೇ?" ಎಂದು ಬಂದಿತು ಕುತೂಹಲದ ಪ್ರಶ್ನೆ.

"ಅದೇ ಹೇಳಹೊರಟಿದ್ದೇನೆ. ಸ್ವಲ್ಪ ತಾಳ್ಮೆಯಿಂದ ಕೇಳಲ್ಲ! ನೃತ್ಯ ತಿರುಗಿ ಆರಂಭವಾದಾಗ ಮಾತಿನಲ್ಲಿ ಮಗ್ನರಾಗಿದ್ದರು ಇಬ್ಬರು. ನಾನುನಿಮಗೆ ಮೆಚ್ಚಿಗೆಯೇ ಎಂಬ ಅರ್ಥದಲ್ಲಿ ಕ್ರಿಸ್, "ನಮ್ಮ ದೇಶ ನಿನ್ನ ಮನಸ್ಸಗೆ ಬಂದಿತೇ" ಎಂದು ಕೇಳಿದಳು. ಉತ್ತರಿಸುವ ಪರಿಸ್ಥಿತಿಯಲ್ಲಿ ಇರದ ವಿಜಯನು ಅವಳನ್ನು ಗಟ್ಟಿಯಾಗಿ ತೆಕ್ಕೆಯಲ್ಲಿ ಹಿಡಿದನು. ಗಾಳಕ್ಕೆ ಸಿಕ್ಕಿದ ಮೀನನ್ನು ಹೊರಗೆ ಎಳೆಯುವ ಉದ್ದೇಶದಿಂದ ಕ್ರಿಸ್ "ನಮ್ಮ ದೇಶವನ್ನು ಮೆಚ್ಚಿಕೊಳ್ಳದವರು ಯಾರು ಇದ್ದಾರೆ! ಜಗತ್ತಿನಲ್ಲಿ ಅತೀ ಮುಂದುವರಿದ ದೇಶ. ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ವೈಜ್ಞಾನಿಕವಾಗಿ ಎಲ್ಲ ದೃಷ್ಟಿಯಿಂದಲೂ ಮುಂದುವರಿದ ರಾಷ್ಟ್ರಕ್ಕೆ ಬಂದಿದ್ದರ ಬಗ್ಗೆ ಅಭಿಮಾನವೆನಿಸುವದಿಲ್ಲವೇ ನಿಮಗೆ? ಇನ್ನು ಈ ದೇಶದಲ್ಲಿಯೇ ಇದ್ದು ಈ ದೇಶದ ನಾಗರಿಕತ್ವವನ್ನು ಪಡೆದರೆ (ಅಮೇರಿಕನ್ ಕುಮಾರಿಯರನ್ನು ಮದುವೆಯಾಗುವದು ಅಮೇರಿಕನ್ ನಾಗರಿಕತ್ವವನ್ನು ಪಡೆಯಲು ಲಘುವಾದ ಉಪಾಯವೆಂದು ಎಲ್ಲರಿಗೂ ತಿಳಿದ ಮಾತು) ಅರೆಹೊಟ್ಟೆ ಉಂಡು ಬಾಳುವ ನಿನ್ನ ದೇಶಕ್ಕೆ ಮರಳಿ

ಹೋಗಬೇಕೆಂದಿಲ್ಲ" ಎಂದು ಪ್ರತ್ಯುತ್ತರಕ್ಕಾಗಿ ಕಾದಳು. ವಿಜಯ ಅವಳ ಮಾತಿನ ಗೂಡಾರ್ಥ ತಿಳಿಯುವ ಸ್ಥಿತಿಯಲ್ಲಿರದಿದ್ದರೂ ಶಬ್ದಶಃ ಅರ್ಥ ಮಾಡಿಕೊಂಡ. ಅವನ ಕಣ್ಣು ಕೆಂಪೇರಿದವು. ತುಟಿ ನಡುಗಿದವು. "ನಿನಗೆ ಇತರ ದೇಶಗಳ ಬಗ್ಗೆ ಇದ್ದ ಜ್ಞಾನ ಇಷ್ಟೆ. ಆದರೂ ನಿನ್ನ ಅಜ್ಞಾನವನ್ನು ಈ ರೀತಿ ಪ್ರದರ್ಶಿಸಬೇಕೆಂದಿಲ್ಲ. ನೀವು ಧನಿಕರಿರಬಹುದು. ನಿಮ್ಮ ಸೈನ್ಯ ವ್ಯವಸ್ಥೆ ಬಲಾಢ್ಯವಾಗಿರಬಹುದು. ಆದರೆ ನೀವು ಸ್ವೇಚ್ಛೆಯ ಮದದಲ್ಲಿ ಮಾಡುವ ಮಂಗ ಚೇಷ್ಟೆಗಳೆಲ್ಲ ಸುಸಂಸ್ಕೃತರ ಲಕ್ಷಣವೆಂದು ತಿಳಿಯಬೇಡ. ಭಾರತೀಯ ಸಂಸ್ಕೃತಿ ನಿಮಗೆ ಬರಬೇಕಾದರೆ ಇನ್ನೂ ಒಂದು ಸಾವಿರ ವರ್ಷವಾದರೂ ಹೋಗಬೇಕು" ಎಂದು ಏನೇನೋ ಹೇಳುವದರಲಿದ್ದ. ಅಷ್ಟರಲ್ಲಿ ವಾದ್ಯ ನಿಂತಿತು.

ಇಬ್ಬರೂ ಪಕ್ಕಕ್ಕೆ ಸರಿದು ಸೋಫಾ ಒಂದರ ಮೇಲೆ ಕುಳಿತರು.

"ಭಾರತೀಯ ವಿದ್ಯಾರ್ಥಿಗಳು ನಿಮ್ಮ ದೇಶಕ್ಕೆ ಬರುತ್ತಾರೆ ಎಂದ ಕೂಡಲೇ ಹೊಟ್ಟೆಗಿಲ್ಲದೇ ಬರುತ್ತಾರೆಂದು ನೀನು ತಿಳಿಯಬೇಕಾಗಿಲ್ಲ....." ನಡುವೆಯೇ ಬಾಯಿ ಹಾಕಿ ಕ್ರಿಸ್‌ಳು. "ಕ್ಷಮಿಸು ವಿಜಯ್. ನಿನ್ನನ್ನು ಅವಮಾನಗೊಳಿಸಲು ಅಂದ ಮಾತಲ್ಲ ಅದು. ನಾನು ಆ ಮಾತೇ ಆಡಬಾರದಿತ್ತು. ನಮ್ಮ ಮೊದಲ ಭೇಟಿಯಲ್ಲೇ ಇಂಥ ಘಟನೆ ನಡೆಯಬಾರದಿತ್ತು ದಮ್ಮಯ್ಯ ಮರೆತುಬಿಡು." ಎಂದು ಮೀನು ಎಲ್ಲಿ ಜಾರಿಕೊಂಡೀತೋ ಎಂದು ಆತಂಕ, ಅಲುಕುಗಳಿಂದ ತುಂಬಿ ವಿನಂತಿಸಿಕೊಂಡಳು. ಆದರೆ ವಿಜಯ ಗಂಭೀರನಾಗಿಯೇ ಇದ್ದ. ಇಬ್ಬರೂ ನೃತ್ಯ ಮಂದಿರದಿಂದ ಹೊರಬಿದ್ದರು. ದಾರಿಯಲ್ಲಿ ಕ್ರಿಸ್ ಪುನಃ ಪುನಃ ನಡೆದ ಘಟನೆಗಾಗಿ ಕ್ಷಮೆ ಕೋರಿದಳು. ಹಾಸ್ಟೆಲಿನ ಪಕ್ಕದಲ್ಲಿ ಅವಳನ್ನು ಬೀಳ್ಕೊಡುವಾಗ ಅವಳೇ ಮತ್ತೆ ಮತ್ತೆ ಚುಂಬಿಸಿ "ನಮ್ಮ ದೇಶದಲ್ಲಿ ಮೂಲ ಡೇಂಟಿಂಗ್‌ದಲ್ಲಿ ಯುವಕ-ಯುವತಿಯರು ಒಬ್ಬರನ್ನೊಬ್ಬರು ಚುಂಬಿಸುವ ಪರಿಪಾಠವಿದೆ" ಎಂದು ಸೂಚಿಸಿದಳು. ಪ್ರತಿಕ್ರಿಯೆಗೆ ಕಾದಳು. ಆದರೆ ಆದ ಅವಮಾನದಿಂದ ಅರುಣನಿಗೆ ಇದು ಯಾವುದೂ ರುಚಿಸಲಿಲ್ಲ. ಆ ಮೇಲೆ ಆದರೂ ಕ್ರಿಸ್‌ಳ ಗೊಡವೆಗೆ ಹೋಗದೆ ನಡೆದ ಸಂಗತಿಯನ್ನು ಮರೆಯಲು ಯತ್ನಿಸಿದ. ಆದರೆ ಕ್ರಿಸ್ ಬಿಡಲಿಲ್ಲ. ಮತ್ತೆ ಮತ್ತೆ ವಿಜಯನಿಗೆ ಫೋನ ಮಾಡಲಾರಂಭಿಸಿದಳು. ವಿಜಯನು ಸಿಗದಾದಾಗ ತನಗೆ ಫೋನ ಮಾಡುವಂತೆ ವಿಜಯನಿಗ ತಿಳಿಸೆಂದು ಅವನ ಸಹಪಾಠಿಗಳಿಗೆ ವಿನಂತಿಸಿಕೊಂಡಳು. ಒಮ್ಮೆ ಹೊಂಚು ಹಾಕಿ ಕಾದು ವಿಜಯನನ್ನು ಸಂಧಿಸಿ, "ಈ ವಾರಾಂತ್ಯದಲ್ಲಿ ತನಗೆ ಬಿಡುವಿದೆ. 'ಡೇಟ್'ಗೆ ಹೋಗೋಣವೇ?" ಎಂದು ತಾನೇ ಸೂಚಿಸಿದಳು. ಆದರೆ ವಿಜಯನಿಗೆ ಅವಳ ಬಗ್ಗೆ ತಿರಸ್ಕಾರ ಹುಟ್ಟಿದ್ದರಿಂದ ತಿರುಗಿ ಯಾವ ಆಸಕ್ತಿಯನ್ನೂ ತೋರಿಸಲಿಲ್ಲ.....

ಆಶಾ ನಡುವೆಯೇ "ಭಾರತದಿಂದ ಹೋದ ಪ್ರತಿಯೊಬ್ಬರಿಗೆ ಒಬ್ಬ ಕ್ರಿಸ್ ದೊರಕಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!" ಎಂದಿದ್ದಳು.

"ವಿಜಯಿನ ಕತೆ ಅಷ್ಟಕ್ಕೆ ಮುಗಿಯಲಿಲ್ಲ. ವಿಜ್ಞಾನದ ವಿದ್ಯಾರ್ಥಿಯಾಗಿದ್ದರೂ ಒಂದು ಹೆಚ್ಚಿನ ಭಾಷೆಯನ್ನು ಅವನು ಕಲಿಯಬೇಕಾಗಿತ್ತು ಅದಕ್ಕೆ ಫ್ರೆಂಚ್ ಆರಿಸಿಕೊಂಡಿದ್ದ. ಆ ವರ್ಗದಲ್ಲಿ ಮಹಿಳೆಯರದೇ ರಾಜ್ಯವಾಗಿತ್ತು. ಹೀಗಾಗಿ ಮತ್ತೆ ಹುಡುಗಿಯರ ಹೆಚ್ಚಿನ ಸಂಪರ್ಕ ಬಂದಿತು."

ವಿಶ್ವವಿದ್ಯಾಲಯದ ಭಾರತೀಯ ವಿದ್ಯಾರ್ಥಿಗಳೆಲ್ಲ ಸೇರಿ ದೀಪಾವಳಿ ಹಬ್ಬ ಆಚರಿಸಬೇಕೆಂದು ನಿರ್ಧರಿಸಿದರು. ವಿಜಯನು ತನ್ನ ಸ್ನೇಹಿತೆಯರಿಗೆಲ್ಲ ಆಮಂತ್ರಣ ಕೊಟ್ಟ. ಗೋಪಿಯರಿಂದ ಸುತ್ತುವರಿದ ಕೃಷ್ಣನಂತೆ ವಿಜಯನು ಅವರಿಗೆಲ್ಲ ಬಾರತೀಯ ಹಬ್ಬಗಳ ಬಗ್ಗೆ ದೊಡ್ಡ ಭಾಷಣವನ್ನೇ ಬಿಗಿಯುತ್ತಿದ್ದ.

ಈ ಬಾರಿ ವಿಜಯನಲ್ಲಿ ವಿಶೇಷ ಆಸಕ್ತಿ ತೋರಿಸಿದವಳು ಹದಿನೇಳು ವರ್ಷದ ನ್ಯಾನ್ಸ. ಅವಳ ಪ್ರಶ್ನೆಗಳಿಗೆ ಕೊನೆಯೇ ಇರಲಿಲ್ಲ. ಆದಷ್ಟು ವಿಜಯನೊಡನೆಯೇ ಇರುತ್ತಿದ್ದಳು. ವಿಶ್ರಾಂತಿಯ ಹೊತ್ತಿಗೆ ವಿಜಯನೊಡನೆಯೇ ಕೋಕೋ ಕೋಲಾದ ಸೇವನೆಯಾಯಿತು. 'ನಿನ್ನ ವಾರಾಂತ್ಯದ ಕಾರ್ಯಕ್ರಮವೇನು? ಬೇರಾವುದೂ ಇಲ್ಲದಿದ್ದರೆ ಭಾರತದ ಬಗ್ಗೆ ಹಲವಾರು ವಿಷಯ ತಿಳಿಯಬೇಕೆಂಬ ಹಂಬಲ ನನಗೆ, ಎಂದಳು; ದಿನಾಂಕಕ್ಕೆ! (dating) ಇದು ಸೂಚನೆಯೆಂದು ತಿಳಿದ ವಿಜಯನು ಕೂಡಲೇ ಸಮ್ಮತಿಸಿದ. ನ್ಯಾನ್ಸಳನ್ನು ಮೊದಲು ಬಾರಿ ನೋಡಿದಾಗಲೇ ವಿಜಯ ಅವಳನ್ನು ಮೆಚ್ಚಿಕೊಂಡಿದ್ದ. ಭಾರತೀಯ ಹುಡುಗಿಯರಂತೆ ಉದ್ದವಾಗಿ ಬಿಟ್ಟ ಕೇಶರಾಶಿ, ತುಂಬಿಕೊಂಡ ಗುಂಡುಮುಖ, ಉಬ್ಬಿದ ಎದೆ, ಕಿರಿಸೊಂಟ ದುಂಡದುಂಡಾಗಿದ್ದ ಕಾಲುಗಳು ಬಹಳ ಆಕರ್ಷಕವಾಗಿದ್ದವು.'

ಸರಿ, ಪ್ರತಿ ವಾರಾಂತ್ಯಗಳನ್ನು ವಿಜಯ-ನ್ಯಾನ್ಸರು ಜೊತೆಯಾಗಿ ಕಳೆಯಲಾರಂಭಿಸಿದರು. ನ್ಯಾನ್ಸಳ ತಂದೆ ದಕ್ಷಿಣ ಅಮೇರಿಕೆಯಿಂದ ಬಂದವರಂತೆ. ಸ್ಪಾನಿಶ್ ಜನಾಂಗಕ್ಕೆ ಸೇರಿದವರು. ಆದರೆ ನ್ಯಾನ್ಸಳು ತನ್ನ ಹುಟ್ಟೂರನ್ನು ನೋಡಿಲ್ಲವಂತೆ. ತಂದೆ ಕುಡುಕ ಮತ್ತು ಸಿಡುಕು ಸ್ವಭಾವದವನಾದ್ದರಿಂದ ತಾಯಿ ಬೇಸತ್ತು ತಂದೆಯಿಂದ ಬೇರೆಯಾಗಿದ್ದಳು. ನ್ಯಾನ್ಸ ತಾಯಿಯೊಡನೆ ವಾಸಿಸುತ್ತಿದ್ದರೂ ಆಗಾಗ ತಂದೆಯ ಭೆಟ್ಟಿಗೂ ಹೋಗುತ್ತಿದ್ದಳು. ತನ್ನದೇ ಒಂದು ಸಂಸಾರ ಆದಷ್ಟು ಬೇಗ ಹೂಡುವ ಹಂಬಲ ಅವಳಿಗೆ. ಆದ್ದರಿಂದ ವಿಜಯನನ್ನು ಬೇಗನೇ ಮಂಕುಹಿಡಿಸಿಬಿಟ್ಟಳು.

"ಇದೆಲ್ಲ ಒಮ್ಮೆಲೇ ಹೇಗೆ ಸಾಧ್ಯವಾಗುತ್ತದೆ? ಸ್ವಲ್ಪ ವಿವರಿಸಿ ಹೇಳಬಾರದೇ?" ಎಂದು ಉತ್ತೇಜನಗೊಂಡ ಆಶಾ ವಿನಂತಿಸಿಕೊಂಡಳು.

"ಮೊದಲು ವಾರಾಂತ್ಯಗಳಲ್ಲಿ ಭೆಟ್ಟಿ, ನಂತರ ನೋಟ್ಸು ಎಂದು, ಪುಸ್ತಕ ಎಂದು, ಏನಾದರೊಂದು ನೆಪ ತೆಗೆದು ದಿನಕ್ಕೊಮ್ಮೆ ಅವನ ಹತ್ತಿರ ಬರತೊಡಗಿದಳು. ಹಾಸ್ಟೆಲಿಗೆ ತಿರುಗಿ ಹೋದ ಮೇಲೂ ಫೋನಿನ ಮೇಲೆ ಮಾತುಕತೆಗಳು. ಗಂಟೆಗಟ್ಟಲೆ ಮಾತನಾಡಿದ್ದೂ ಉಂಟು; ಬರಬರುತ್ತ ಇಬ್ಬರೂ ಆದಷ್ಟು ಜೊತೆಗೇ ಇರಲಾರಂಭಿಸಿದರು! ನಡುವೆ ವಿಜಯನ ಪರೀಕ್ಷೆ ಬಂದಿತು. ನ್ಯಾನ್ಸಳಿಂದ ದೂರವಿದ್ದರೇ ಅಭ್ಯಾಸ ಸಾಧ್ಯವೆಂದು ಸ್ವಲ್ಪ ದೂರ ಇರಲಾರಂಭಿಸಿದ. ಆದರೂ ಬಿಡಲಿಲ್ಲ ಆಕೆ ಒಮ್ಮೆ ಅವಸರದಿಂದ ಫೋನ ಮಾಡಿ 'ಪ್ರಿಯತಮ! ಬೇಸರದಿಂದ ಸಾಯುತ್ತಿದ್ದೇನೆ ನಿನ್ನ ಅಭ್ಯಾಸ ಹಾಳಾಗುತ್ತಿದೆ. ನೀನು ಇಲ್ಲಿ ಬರಬೇಕಿಲ್ಲ.....ನಾನೇ ನಿನ್ನಲ್ಲಿ ಬರುತ್ತೇನೆ' ಎಂದು ಉತ್ತರಕ್ಕಾಗಿ ಕಾಯದೇ ಫೋನ್ ಇಟ್ಟುಬಿಟ್ಟಳು."

ಸರಿ, ಬಲಾತ್ಕಾರವಾಗಿ ಖೋಲಿಗೆ ಬಂದ ಸ್ನೇಹಿತೆಯನ್ನು (ಆಗಂತುಕರ) ಕೋಣೆಯಲ್ಲೇ ಕೂಡ್ರಿಸಿದ ನ್ಯಾನ್ಸ ಸುಮ್ಮನಿರದೇ "ಅಲ್ಲ, ಡಿಯರ್ ಇಷ್ಟು ದಿನದಿಂದ ನಮ್ಮ ಪರಿಚಯವಿದ್ದರೂ ನೀನು ಒಮ್ಮೆಯೂ ನಿನ್ನ ರೂಮ ತೋರಿಸಿಲ್ಲ. ಈಗಾದರೂ ತೋರಿಸಲ್ಲ" ಎಂದಾಗ ವಿಜಯ "ಬ್ರಹ್ಮಚಾರಿಗಳ ಕೋಣೆ ಅಸ್ತವ್ಯಸ್ತವಾಗಿರುತ್ತದೆಂದು ಗೊತ್ತಿಲ್ಲವೇ" ಎಂದಾಗ ಅದನ್ನೇ ನೋಡಬೇಕಾಗಿದೆ! ಎಂದು ಒತ್ತಾಯಿಸಿ ಅವನ ಕೈ ಹಿಡಿದು ಮೆಟ್ಟಲೇರಿ ಅವನ ಕೋಣೆಗೆ ಬಂದಳು.

ಮೇಲೆ ಹೋದ ಮೇಲೇ ತಾನಾಗಿಯೇ ಅವನ ಮಂಚದ ಮೇಲೆ ಕುಳಿತು, "ನೀನು ಹೇಳಿದಷ್ಟು ಕೊಳಕಾಗಿಲ್ಲ ಕೋಣೆ....ಚೆನ್ನಾಗಿಯೇ ಇದೆ....ಅರೇ! ನಿನಗೆ ಕಲೆಯಲ್ಲಿ ಅಭಿರುಚಿ ಇದೆ, ಎಂದು ಹೇಳಲೇ ಇಲ್ಲವಲ್ಲ!" ಎದು ಗೋಡೆಗೆ ತೂಗುಹಾಕಿದ ನಗ್ನ ಸ್ತ್ರೀ ಚಿತ್ರಗಳನ್ನು ನೋಡುತ್ತ ಹೇಳಿದಳು.

ವಿಜಯ "ನ್ಯಾನ್ಸ, ಡಾರ್ಲಿಂಗ್, ಬಹಳ ದಿನಗಳಿಂದ ನಿನಗೊಂದು ಮಾತು ಕೇಳಬೇಕೆಂದಿರುವೆ....ಈಗಲೂ ಕೇಳಲು ಅನುಮಾನಿಸುತ್ತಿರುವೆ" ಎಂದ.

"ಅದಕ್ಕೇನು? ಬೇಕಾದ್ದು ಕೇಳು" ಎಂದು ಒರಗಿ ಕೂಡುತ್ತ ಹೇಳಿದಳು.

"ನಿನಗೆ ಇದಕ್ಕೂ ಮೊದಲು ಯಾವ ಗೆಳೆಯರೂ ಇರಲಿಲ್ಲವೇ? ಯಾರೂ ನಿನ್ನಂತಹ ಸುಂದರಿಯ ಪ್ರೇಮಪಾಶಕ್ಕೆ ಬೀಳಲಿಲ್ಲವೇ?"

"ಎಂತಹ ಒಳ್ಳೆಯ ಸಮಯದಲ್ಲಿ ಈ ಪ್ರಶ್ನೆ ಕೇಳುತ್ತಿರುವಿಯಲ್ಲ! ನಾನು ನಿನ್ನವಳಾಗಿ ಬಂದಾಗ ಮಗದೊಬ್ಬರವಳು ಹೇಗೆ ಆಗಿಲ್ಲವೆಂದು ಕೇಳುತ್ತೀಯಲ್ಲ? ನಮ್ಮ ಪೂರ್ವ ಇತಿಹಾಸವನ್ನು ಮರೆತು ಬಿಡೋಣ. ನಾನು ನಿನ್ನ ಪೂರ್ವ ಕಥೆ ಕೇಳಲು ಕುತೂಹಲಿಯಾಗಿಲ್ಲ.....ನೀನೂ ನನ್ನದನ್ನ ಕೇಳಬೇಡ" ಎಂದು ಮ್ಲಾನಳಾಗಿ ಹೇಳಿದಳು.

"ನಿನ್ನನ್ನು ನೋಯಿಸಿದೆನಲ್ಲವೇ" ಎಂದು ಅವನ ಕೊರಳಸುತ್ತ ಕೈ ಬಳಸಿದಳು. ವಿಜಯನ ಮೈಯಲ್ಲಿ ವಿದ್ಯುತ್ ಸಂಚಾರವಾಯಿತು. ಆತನೂ ಪ್ರತಿಸ್ಪಂದಿಸಿದ. ಕೆಲಹೊತ್ತಿನ ಮೇಲೆ ಬಾಗಿಲು ತೆರೆದದ್ದು ನೆನಪಾಗಿ ನ್ಯಾನ್ಸಿ ಮುಚ್ಚಲು ಹೋದಳು. ಆಗಲೇ ಅದಕ್ಕೆ ಚಿಲಕ ಇಲ್ಲದ್ದು ಅವಳ ಲಕ್ಷ್ಯಕ್ಕೆ ಬಂದಿತು. ಬಾಗಿಲನ್ನು ಹಾಗೆಯೇ ಮುಂದೆ ಮಾಡಿ ಮಂಚದ ಮೇಲೆ ಅಡ್ಡಾದಳು ವಿಜಯ ಬಂದು ಪಕ್ಕದಲ್ಲಿ ಕುಳಿತ. "ನೀನು ಓದಬಹುದಲ್ಲ ಪ್ರಿಯಾ? ನಾನು ಇಲ್ಲೇ ಸ್ವಲ್ಪ ಒರಗಿ ವಿಶ್ರಾಂತಿ ಪಡೆಯುವೆ" ಎಂದು ಅವನನ್ನು ತಬ್ಬಿ ಹಿಡಿದು ಅವನ ಕ್ರಾಪಿನಲ್ಲಿ ಬೆರಳಾಡಿಸುತ್ತ ಹೇಳಿದಳು. ವಿಜಯ ಬಾಗಿ ಅವಳನ್ನು ಚುಂಬಿಸಿದ. ಅವನಿಗೇ ತಿಳಿಯದೆ ಅವನ ಕೈಗಳು ನ್ಯಾನ್ಸಿಳ ಮೈಮೇಲೆ ಆಡತೊಡಗಿದವಂತೆ! ಯಾವುದೇ ವಿರೋಧ ಬಾರದಿದ್ದಾಗ ಇನ್ನೂ ಮುಂದುವರಿದ..... ನ್ಯಾನ್ಸಿಳೂ ಉತ್ಸಾಹದಿಂದ ಇನ್ನೂತನಕ ಪ್ರವೇಶಿಸದ ಇನ್ನೊಂದು ಶೃಂಗಾರ ಲೋಕಕ್ಕೆ ವಿಜಯನನ್ನು ಕರೆದೊಯ್ದಳು!

ಒಂದು ಗಂಟೆಯ ನಂತರ ನ್ಯಾನ್ಸಿ ವಸ್ತ್ರಾಲಂಕಾರಗಳನ್ನು ಸರಿಪಡಿಸಿಕೊಂಡಳು. ಅವಳನ್ನು ಹಾಸ್ಟೆಲಿಗೆ ಬಿಟ್ಟು ಬರಲೆಂದು ವಿಜಯನೂ ಹೋಗಿ ಅಲ್ಲೊಂದು ತಾಸು ಮಾತನಾಡಿ ತಿರುಗಿದ. ಅಂದಿನಿಂದ ಕೆಲಕಾಲ ಪತಿ-ಪತ್ನಿಯರಂತೆಯೇ ಇದ್ದರು, ಇಬ್ಬರೂ.

"ಕೊನೆಗೂ ವಿಜಯ ನ್ಯಾನ್ಸಿಳ ಬಲೆಯಲ್ಲಿ ಬಿದ್ದನೇ?" ಆಶಾಳ ಪ್ರಶ್ನೆ.

"ಅದೇ; ಅದೇ ಕೇಳು ಕಥೆ ಇನ್ನು ಉದ್ದವಿಲ್ಲ. ಫೋನಿನ ಅವರ ಸಂಭಾಷಣೆಗಳು ನಡೆದೇ ಇದ್ದವು. ಇಬ್ಬರೂ ಏಕಾಂತ ಬಯಸಿದರೂ ಅದು ಅಷ್ಟು ಸುಲಭ ಸಾಧ್ಯವಿರಲಿಲ್ಲ."

ಒಮ್ಮೆ ವಿಜಯ ಫೋನ ಮಾಡಿದಾಗ ನ್ಯಾನ್ಸಿ ಕೋಣೆಯಲ್ಲಿರಲಿಲ್ಲ. ಆಕೆ ಎಲ್ಲಿ ಹೋಗಿರಬಹುದೆಂದು ಯೋಚಿಸುವವರೊಳಗೆ ಫೋನ ಗಂಟೆಯಾಯಿತು. ಫೋನ ಎತ್ತಿದಾಗ ನ್ಯಾನ್ಸಿ ಧ್ವನಿ "ಹಲೋ ಡಿಯರ್, ನಿನ್ನ ಫೋನ ಬಂದಾಗ ನಾನೆಲ್ಲಿ ಇದ್ದೆ ಹೇಳಬಲ್ಲೆಯಾ? ನಾನು ಸ್ನಾನ ಗೃಹದಲ್ಲಿದ್ದೆ; ಫೋನ ನಿನ್ನದೇ ಇರಬೇಕೆಂದು ಹಾಗೆಯೇ ಓಡಿ ಬಂದೆ. ಈಗಲೂ ನಗ್ನಳಾಗಿರುವೆ. ಕೆಲವೊಮ್ಮೆ ಬಟ್ಟೆಗಳನ್ನು ಧರಿಸದೇ ಕೋಣೆಯಲ್ಲಿರುವದು ನನಗೆ ಬಹಳ ಸೇರುತ್ತದೆ. ಮೊದಮೊದಲು ಕಿಡಕಿಗಳನ್ನು ಮುಚ್ಚುತ್ತಿದ್ದೆ. ಈಗೀಗ ಅದೂ ಇಲ್ಲ. ಬೇಕಾದವರು ನೋಡಿಕೊಂಡು ಹೋಗಲಿ; ನನ್ನ ಪಾಡಿಗೆ ನಾನಿರುತ್ತೇನೆ" ಎಂದು ಕಿಲಿಕಿಲಿ ನಕ್ಕಳಂತೆ.

ಆಶಾ, "ಇಂಥ ಹುಡುಗಿಯರೂ ಇರುತ್ತಾರೆಯೇ? ಇಶ್!" ಎಂದಳು.

"ಇರುತ್ತಾರೆಂದು ವಿಜಯ ಹೇಳಿದಾಗ ನಾನು ನಂಬಿರಲಿಲ್ಲ. ಆದರೆ ಒಮ್ಮೆ ಅವಳನ್ನು ನೋಡಿದಾಗ ಇರಬಹುದು ಅನಿಸಿತು. ಆಶಾ ಅವಳನ್ನು ನೋಡಿದರೆ ಎಂತಹ ಗಂಡಸೂ ಕರಗಿ ಮೇಣವಾಗಬಲ್ಲ"

"ಓಹ್!!"

"ಅಂತೇ ನಾನು ಇನ್ನೊಮ್ಮೆ ಭೆಟ್ಟಿಯಾಗುವ ಸಾಹಸಕ್ಕೆ ಹೋಗಲಿಲ್ಲ"

"ಹೇಳಿ ಮುಂದೇನಾಯಿತು?"

"ಅವರಿಬ್ಬರ ಸ್ನೇಹ ಮದುವೆಯಲ್ಲಿ ಕೊನೆಗೊಳ್ಳುತ್ತದೆಂದು ಎಲ್ಲರೂ ನಂಬಿದ್ದರು. ಅವರಿಬ್ಬರೂ ನಂಬಿದ್ದರು. ಆದರೆ......"

ಭಾರತದ ಗಣತಂತ್ರ ದಿವಸದಂದು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದರು. ಆಂಧ್ರದ ಶಾಂತಕುಮಾರಿ ಈ ಕಾರ್ಯಕ್ರಮದ ಉಪಕಾರ್ಯದರ್ಶಿಯಾಗಿದ್ದಳು. ವಿಜಯ ಮತ್ತು ಕುಮಾರಿ ಜೊತೆಯಾಗಿ ಕೆಲಸ ಮಾಡಬೇಕಾಗುತ್ತಿತ್ತು. ಒಮ್ಮೆ ನ್ಯಾನ್ಸ ಫೋನ್ ಮಾಡಿದಾಗ ವಿಜಯ ರೂಮಿನಲ್ಲಿರಲಿಲ್ಲ. ಯಾವದೊ ಹುಡುಗಿಯರೊಡನೆ ಹೊರಗೆ ಹೋಗಿದ್ದಾನೆಂದು ಸಹಪಾಠಿಯೊಬ್ಬ ಹೇಳಿದ. ಕೇಳಿ ಕಿಡಿಕಿಡಿಯಾದಳು. ಆ ಮೇಲೆ ಅರ್ಧಗಂಟೆಗೊಮ್ಮೆ ಫೋನ್ ಮಾಡಲಾರಂಭಿಸಿದಳು. ಕೊನೆಗೂ ಹತ್ತು ಗಂಟೆಯ ಮೇಲೆ ತಿರುಗಿ ಬಂದ ವಿಜಯ. ನ್ಯಾನ್ಸ ಕೂಡಲೇ ತಾನಿದ್ದಲ್ಲಿ ಬರಬೇಕೆಂದು ಫೋನ ಮೇಲೆ ತಿಳಿಸಿಳು. ವಿಜಯ ಭೆಟ್ಟಿಯಾದಾಗಿನ ಅವಳ ರೂಪ ನೋಡುವಂತಹದಿತ್ತಂತೆ! ಹರಡಿದ ಕೇಶರಾಶಿ, ರಕ್ತಕಾರುವ ಕಣ್ಣುಗಳು. ಚಂಡಿಯ ಅವತಾರ!

"ಆರು ಗಂಟೆಯಿಂದ ಹತ್ತು ಗಂಟೆಯ ತನಕ ಎಲ್ಲಿ ಹೋಗಿದ್ದಿ?" ಎಂದು ಗುಡುಗಿದಳು.

"ಕೊಲೆಗಡಕನನ್ನು ವಿಚಾರಿಸುವಂತೆ ಪ್ರಶ್ನಿಸುತ್ತಿಯಲ್ಲ? ನಮ್ಮ ಕಾರ್ಯಕ್ರಮಗಳ ರಿಹರ್ಸಲ್ ನಡೆದಿತ್ತು. ಅಲ್ಲಿದ್ದೆ."

"ಶಾಂತಕುಮಾರಿಯೊಡನೆ ರಿಹರ್ಸಲ್ ಮಾಡಿ ನೋಡಿದೆಯಾ?" ಅವಳ ದನಿಯಲ್ಲಿ ದ್ವೇಷವಿತ್ತು.

"ಅವಳು ಉಪಕಾರ್ಯದರ್ಶಿಯಲ್ಲವೆ? ನಿನ್ನ ಸಿಟ್ಟೆಲ್ಲ ಅವಳ ಮೇಲೇ ಎಂದು ಕಾಣುತ್ತದೆ. ಆದರೆ ಕುಮಾರಿ ನನ್ನ ಅಕ್ಕಳಂತೆ ಇದ್ದಾಳೆ. ಭಾರತದಲ್ಲಿದಯಾದರೆ ಅಕ್ಕ-ತಮ್ಮಂದಿರಂತಿರುತ್ತೇವೆ. ಇಲ್ಲಾದರೂ ಅದೇ ಸಂಬಂಧ ನಮ್ಮದು."

"ನನಗೆ ನಿನ್ನ ಗೊಡ್ಡು ರೇದಾಂತ ಬೇಕಗಿಲ್ಲ. ನಮ್ಮಿಬ್ಬರಲ್ಲಿ ಒಬ್ಬಳನ್ನು ನೀನು ಆರಿಸಬೇಕು ತಿಳಿಯಿತೇ?" ಎಂದು ರಪ್ಪನೇ ಬಾಗಿಲನ್ನು ಮುಚ್ಚಿಕೊಂಡು ಬಿಟ್ಟಳು. ವಿಜಯನೂ ಮುಖ ಮುರಿದು ಹಾಸ್ಟೇಲ್ ಸೇರಿದ.

ಮರುದಿನವೂ ಫೋನ ಮಾಡಿದಾಗ ವಿಜಯ ಇರಲಿಲ್ಲ. ತಿರುಗಿ ಶಾಂತಕುಮಾರಿಯೊಡನೆಯೇ ಇರುವನೆಂದು ಸುದ್ದಿ ತಲುಪಿದಾಗ ನ್ಯಾನ್ಸಳು ಸಿಟ್ಟಿನಿಂದ ಹುಚ್ಚಿಯಂತಾದಳು. ಒಮ್ಮೆ ವಿಜಯನನ್ನು ಹೊಡೆಯಲೆಂದು ರೂಮಿಗೆ ಬಂದಿದ್ದಳಂತೆ. ಪುಣ್ಯಕ್ಕೆ ಆತ ಅಲ್ಲಿರಲಿಲ್ಲ. ಮುಂದೆ ತಿಂಗಳ ತನಕ ಪರೀಕ್ಷೆಗಳಿದ್ದವು. ನ್ಯಾನ್ಸ ಪರೀಕ್ಷೆಗಾಗಿ ನಿಲ್ಲದೇ ತಾಯಿಯಿದ್ದಲ್ಲಿ ಹೊರಟುಹೋದಳು. ಅಗಲಿಕೆಯ ತಾಪ ಸಹಿಸಲಾರದ ವಿಜಯ ಪರೀಕ್ಷೆಯಲ್ಲಿ ಅನುತ್ತೀರ್ಣನಾದ......

ಆಶಾ "ಎರಡು ಪ್ರಣಯಪ್ರಕರಣಗಳಾದವು.....ಇನ್ನೂ ಇವೆಯೇ" ಎಂದಳು.

"ಎರಡಕ್ಕೇ ಹೇಗೆ ಮುಗಿದಾವು? ವಿಜಯನ ಸ್ಟ್ಯಾಟಿಸ್ಟಿಕ್ಸ್ ಕ್ಲಾಸಿನಲ್ಲಿ ಜರ್ಮನ ಹುಡುಗಿಯೊಬ್ಬಳು ಇದ್ದಳಂತೆ. ಕಲಿಯುವದರಲ್ಲಿ ಜಾಣೆ. ಸಾಲದ್ದಕ್ಕೆ ಶ್ವೇತಕನ್ಯೆಯನ್ನೆ ಮದುವೆಯಾಗುವದಿದ್ದರೆ ಜರ್ಮನ್ ಕನ್ಯೆ ಶ್ರೇಷ್ಠಳು. ಭಾರತೀಯ ನಾರಿಯಂತೆ ಮನೆ, ಗಂಡ-ಮಕ್ಕಳನ್ನು ಸಂಭಾಳಿಸುವ ಕಲೆ ಅವಳಿಗೆ ರಕ್ತಗತವಾಗಿ ಬಂದಿರುತ್ತದೆ ಅಂದು ಆತ ಕೇಳಿದ್ದ. ಸರಿ ರಿನಾಟಳತ್ತ ಅವನ ಕಣ್ಣು ತಿರುಗಿದವು. ಸಾಲದ್ದಕ್ಕೆ ಕುಮಾರಿಯರು ಮರಳಾಗುವ ದುಡ್ಡು, ರೂಪ, ಮಾತುಗಾರಿಕೆ ವಿಜಯನಿಗಿದ್ದವು. ಕಾರಿಲ್ಲದೇ ಹುಡುಗಿಯರ ಸ್ನೇಹ ಚೆನ್ನಾಗಿರುವುದಿಲ್ಲವೆಂದು ಕಾರೊಂದನ್ನು ಖರೀದಿಸಿದ."

ತುಂಬ ಯೋಚಿಸಿ ತನ್ನ ಹುಟ್ಟು ಹಬ್ಬದ ಪಾರ್ಟಿಯನ್ನು ಏರ್ಪಡಿಸಿದ. ತನ್ನ ಕೆಲ ಸ್ನೇಹಿತರೊಂದಿಗೆ ರಿನಾಟಾಳನ್ನೂ ಕರೆದ. ಭಾರತೀಯರ ಬಗ್ಗೆ ಮೊದಲಿನಿಂದಲೂ ಗೌರವವಿದ್ದ ರಿನಾಟ ಬರಲು ಸಂತೋಷದಿಂದ ಒಪ್ಪಿದಳು. ವಿಜಯನ ಮನ ಒಲಿಸುವ ಮಾತಗಾರಿಕೆ, ಅವಳ ಮೇಲೆ ಸಾಕಷ್ಟು ಪರಿಣಾಮ ಮಾಡಿತು. ಸರಿ ವಾರಾಂತ್ಯದ ಡೇಟಿಂಗ್ ಪ್ರಾರಂಭವಾಯಿತು. ಈ ಬಾರಿ ಕಾರು ಡೇಟಿಂಗಿಗೆ ತುಂಬ ಸಹಾಯ ಮಾಡಿತು. ಕಾಲೇಜ, ಹಾಸ್ಟೇಲಗಳಲ್ಲಿ ದೊರೆಯದ ಏಕಾಂತ ಕಾರಿನಲ್ಲಿ ಲಭಿಸುತ್ತದಷ್ಟೆ?

ಒಂದು ಸಂಜೆ ಆಪ್ತರ ಮನೆಗೆ ಹೋಗುತ್ತೇನೆಂದು ಬಿಡುವು ಪಡೆದು ರಿನಾಟ ವಿಜಯ.ನ ಹತ್ತಿರ ಬಂದಳು. ಇಬ್ಬರೂ ಕಾರಿನಲ್ಲಿ ನಗರದಿಂದ ಬಹುದೂರ ಸರೋವರದತ್ತ ಹೋದರು. ಒಂದೇಸವನೆ ವಾರ್ತಾ-ಸಲ್ಲಾಪಗಳು ನಡೆದಿದ್ದವು. ಇಬ್ಬರೂ ಭವಿಷ್ಯ ಚಿಂತನದಲ್ಲಿ ತೊಡಗಿದ್ದರು. ವಿಜಯನೊಡನೆ ಮದುವೆಯಾದರೆ ತನ್ನ ಕನಸುಗಳೆಲ್ಲ ಪೂರ್ಣವಾಗುವದೆಂದು ನಂಬಿದ್ದ ಹುಡುಗಿ ಅಂದು ಸಂಜೆ ತನ್ನ

ಆತ್ಮ-ದೇಹಗಳೆರಡನ್ನೂ ವಿಜಯನಿಗೆ ಅರ್ಪಿಸಿದಳಂತೆ. ಕಣ್ಣು ತೆರೆದಾಗ ಬೆಳಗಿನ ನಾಲ್ಕು ಗಂಟೆಯಾಗಿತ್ತು. ಪೋಲಿಸನೊಬ್ಬ ಬಂದು ಇಲ್ಲಿ ಕಾರು ನಿಲ್ಲಸುವದು ಅಪರಾಧವೆಂದು ಗದರಿಸಿದಾಗಲೇ ಇಬ್ಬರಿಗೂ ಎಚ್ಚರವಾದದ್ದು. ಸರಿ ಕಾರು ಭರ್ ಎಂದು ತಿರುಗಿ ಹಾಸ್ಟೇಲಿನತ್ತ ಬಂದಿತು.

ವಿಜಯನ ಕಥೆ ಕೇಳುತ್ತಿದ್ದ ಆಶಾ ಅದಾವಾಗಲೋ ನನ್ನನ್ನು ಒರಗಿ ಕುಳಿತಿದ್ದಳು. ಕತೆ ಮುಗಿದಾಗ ಅವಳ ತಲೆ ನನ್ನ ಎದೆಗೆ ಆನಿತ್ತು. ನಾನೂ ತೋಳಿನ ಆಧಾರವನ್ನು ಅವಳಿಗೆ ನೀಡಿದ್ದೆ. ಅರ್ಧ ಸ್ವಪ್ನಲೋಕದಲ್ಲಿ ಅರ್ಧ ಜಾಗ್ರತಾವಸ್ಥೆಯಲ್ಲಿ ಇದ್ದ ಆಶಾ ನನಗೆ ಕೇಳಿದ್ದಳು. "ಅರುಣ ಒಂದು ಪ್ರಶ್ನೆ ಕೇಳಲೇ, ನೇರವಾಗಿ ಉತ್ತರ ಕೊಡುವಿರಾ? ನೀವೂ ವಿಜಯನಂತೆ ಮೋಜು ಮಾಡಿ ಸುಖವಾಗಿ ಇರಬಹುದಾಗಿತ್ತಲ್ಲ, ಏಕೆ ಮಾಡಲಿಲ್ಲಾ?"

ನಿನ್ನ ಪ್ರಶ್ನೆಯಿಂದಲೇ ನಾನು ಪಾಶ್ಚಿಮಾತ್ಯ ಜೀವನದ ಸುಖ ಸವಿದಿಲ್ಲ ಎಂದು ಒಪ್ಪಿಕೊಂಡಂತಾಯಿತು. ಇಂತಹ ಸುಲಭ ಜೀವನಕ್ಕೆ ಮಾರಿಹೋಗುವದು ಸುಲಭ. ಆದರೆ ಅದರಿಂದ ದೂರ ಇರುವದಕ್ಕೆ ತಾಳ್ಮೆ ಸಂಯಮಗಳು ಬೇಕು. ಅಲ್ಲದೇ ಆಶಾಳಿಗೆ ಯೋಗ್ಯವಾದ ಪತಿಯಾಗಬೇಕೆಂಬುದು ನನ್ನ ಬಹುದಿನದ ಕನಸು. ಕನಸು ನನಸನ್ನಾಗಿ ಮಾಡಲೋಸುಗ ಈ ಸಂಯಮ ಬೇಕು" ಎಂದು ಅವಳ ಮೃದು ಕೆನ್ನೆಯನ್ನು ಕಿವುಚಿದ್ದೆ. "ಹಾಗಲ್ಲ ದೊರೆ, ನನಗೆ ಗೊತ್ತು. ನೀವೇಕೆ ಈ ಮಾಯಾಜಾಲಕ್ಕೆ ಬಲಿಯಾಗಲಿಲ್ಲವೆಂದು, ನೀವು ಗಾಳಿ ಪಟದಂತೆ ಮೇಲೆ ಮೇಲಕ್ಕೆ ಏರುತ್ತ ಹೋಗುವವರು. ದಾರಿಯಲ್ಲಿ ಒಂದೆರಡು ಟೊಂಗೆ ಮರಗಳಿಗೆ ಸಿಕ್ಕಿಕೊಂಡರೆ ಗಾಳಿಪಟ ಮೇಲಕ್ಕೆ ಹೇಗೆ ಏರೀತು?"

"ಆಶಾ ಇಂತಹ ವಿಷಯಗಳೆಲ್ಲ ನಿನಗೆ ಎಷ್ಟೊಂದು ನೆನಪಿನಲ್ಲಿ ಇರುತ್ತದೆ! ಪ್ರೇಮ ಹೊಸದಾಗಿ ಅರಿವಾದಾಗ ಚೌಪಾಟಿಯ ಮೇಲೆ ಹಾರುತ್ತಿದ್ದ ಗಾಳಿಪಟ ನೋಡಿ ಹೇಳಿದ ಮಾತಲ್ಲವೇ? ಅದರ ಜೊತೆಗೆ ಇನ್ನೂ ಒಂದು ಮಾತು ಅಂದಿದ್ದೆ, ನೆನಪಿದೆಯೇ? ಈ ಗಾಳಿಪಟ ಮೇಲಕ್ಕೆ ಏರುತ್ತಿರುವಾಗಲೇ ಒಮ್ಮೆ ಹರಿಯಿತೆಂದರೆ ಹೇಳ ಹೆಸರಿಲ್ಲದೇ ಹೋಗುತ್ತದೆ. ನನ್ನ ಜೀವನ ಇಲ್ಲಿಯತನಕ ಏರುವ ಗಾಳಿಪಟವಾಗಿದೆ. ನಿನ್ನ ಸಹಕಾರದಿಂದ ಹರಿದ ಗಾಳಿಪಟ ಆಗಲಾರೆನೆಂಬ ನಂಬಿಕೆ......" ಎಂದು ಅವಳ ಹಾಲ ಕೆನ್ನೆ ನೇವರಿಸ ಹೋದಾಗ.....ಒಮ್ಮಿಂದೊಮ್ಮೆ ಆಶಾ! ಆಶಾ! ಎಂದು ಹೆಣ್ಣುಧ್ವನಿಯೊಂದು ದೂರದಿಂದ ಕೂಗಿತ್ತು. ಹಾವು ಮಟ್ಟಿದವಳಂತೆ ಆಶಾ ದಿಗ್ಗನೆದ್ದು ಧ್ವನಿ ಬಂದಲ್ಲಿ ನೋಡಿದಳು. ಯಾವಳೋ

ದೂರದಿಂದ ಪರಿಚಿತಳಂತೆ ಕೈ ಮಾಡುತ್ತಿದ್ದಳು. ಆಶಾ ದಿಟ್ಟಿಸಿ ನೋಡುವದರೊಳಗೆ ಆಕೆ ತನ್ನ ಸಂಗಡಿಗನೊಡನೆ ಹೋಗಿಯೇ ಬಿಟ್ಟಳು. ಯಾರಿರಬಹುದೆಂದು ಊಹಿಸಿದ ಆಶಾಗೆ ದಿಗಿಲಾಯಿತು ನನಗೂ ಸ್ವಲ್ಪ ಯೋಚಿಸುವಂತಾಯಿತು. ಸರಿ, ಮನೆಗೆ ಹೋಗೋಣವೆಂದು ಸ್ವಲ್ಪ ಎದ್ದಿದ್ದೆವು. ಕೈಯಲ್ಲಿ ಕೈ ಹಾಕಿ ದಿನ್ನೆ ಇಳಿಯುತ್ತಿದ್ದಾಗ ಆಶಾಳಲ್ಲಿ ಮೊದಲಿನ ಉತ್ಸಾಹವಿರಲಿಲ್ಲ.

"ನಾಳಿನ ಕಾರ್ಯಕ್ರಮವೇನು?" ಆಶಾಳೇ ಮೊದಲು ಮಾತನಾಡಿದಳು.

"ನಾನಂತೂ ಪ್ರಿನ್ಸಿಪಾಲರ ಭೆಟ್ಟಿಗೆ ಹೋಗಬೇಕು. ಇಡೀ ದಿನವೇ ಅವರೊಂದಿಗೆ ಇರಬೇಕಾಗುವದೇನೊ! ನಿಜವಾಗಿ ಹೇಳಬೇಕೆಂದರೆ ಇಂದೇ ಹೋಗಬೇಕೆಂದಿದ್ದೆ. ಆದರೆ ಈ ಪ್ರಿನ್ಸಿಪಾಲರೇ ಮುಖ್ಯರಾಗಿದ್ದರು" ಎಂದಾಗ ಆಶಾಳ ಮುಖ ಕಪ್ಪೇರಿತ್ತು. ನೋಡಿ ಗಾಬರಿಯಾದಾಗ, "ಕ್ಷಮಿಸಿ. ಮುಖ್ಯವಾದ ದುಃಖದ ಸಮಾಚಾರ ನಿಮಗೆ ಹೇಳಲು ಮರೆತೆ. ಪ್ರಿನ್ಸಿಪಾಲರು ಒಂದು ವಾರದ ಹಿಂದೆ ಯಾವದೊ ಕಾನ್ಫರೆನ್ಸಗೆ ದಿಲ್ಲಿಗೆ ಹೋಗಿದ್ದರು. ಮಧ್ಯರಾತ್ರಿ ಮರಳಿದವರು ಅಸ್ವಸ್ಥರಾಗಿದ್ದರು. ಹೆಂಡತಿಗೆ ಕಾಫಿ ತಯಾರಿಸಲು ಹೇಳಿದರಂತೆ. ಕಾಫಿ ತಯಾರಾಗುತ್ತಿದ್ದಾಗಲೇ ಎದೆನೋವೆಂದು ಕಿರಿಚಿ ಕುಳಿತಲ್ಲೆ ಕುಸಿದರು. ಹೃದಯಸ್ತಂಭನವಾಗಿತ್ತು..... ಅಂತ್ಯ ಸಂಸ್ಕಾರಕ್ಕೆ ನಾನೂ ಹೋಗಿದ್ದೆ. ತಯಾರಾದ ಗುಟುಕು ಕಾಫಿ ಕುಡಿಸುವದೂ ತನ್ನ ಹಣೆಯಲ್ಲಿ ಬರೆದಿಲ್ಲವೆಂದು ಪತ್ನಿ ದುಃಖಿಸುತ್ತಿದ್ದರು. ಅವರು ನಿಮಗೆ ಮಾಡಿದ ಸಹಾಯ ಆಗಾಗ ನೆನಪಾಗುತ್ತದೆ" ಎಂದು ತುಂಬಿ ಬಂದ ಕಣ್ಣುಗಳನ್ನು ಒರೆಸಿಕೊಂಡಳು ಆಶಾ!

ನನ್ನ ಬಾಯಿಂದ ಮಾತುಗಳೇ ಹೊರಡಲಿಲ್ಲ. ನಂಬಲು ಅಸಾಧ್ಯವಾದ ಮಾತು ಎನಿಸುತ್ತಿತ್ತು. ಭೆಟ್ಟಿಯಾಗಿ ಏನೆಲ್ಲ ಮಾತನಾಡಬೇಕೆಂದಿದ್ದೆ. ಅವರಿಗಾಗಿ ಅಮೇರಿಕದಿಂದ ಅನೇಕ ಸಾಮಾನುಗಳನ್ನು ತಂದಿದ್ದೆ. ನನ್ನ ಪಾಲಕರೊಬ್ಬರನ್ನು ಕಳೆದುಕೊಂಡಂತಾಗಿತ್ತು. ದಾರಿಯುದ್ದಕ್ಕೂ ಇಬ್ಬರೂ ಮೌನವಾಗಿದ್ದೆವು. ಟ್ಯಾಕ್ಸಿಯಿಂದ ಇಳಿಯುತ್ತಿದ್ದಂತೆ "ಹೇಗಿದ್ದರೂ ನಾಳೆ ಪ್ರಿನ್ಸಿಪಾಲರ ಮನಗೆ ಹೋಗಲಿರುವೆ. ಆದ್ದರಿಂದ ನಾಡಿದ್ದು ನಾಲ್ಕು ಗಂಟೆಗೆ ಮಲಬಾರ ಹಿಲ್ಲಿನ ಮೇಲೆ ಭೇಟಿಯಾಗೋಣ" ಎಂದು ಆಶಾಳನ್ನು ಬೀಳ್ಕೊಟ್ಟಿದ್ದೆ.

ಆಶಾ, ವಿಜಯನ ಕಥೆ ಪೂರ್ಣವಾಗದ್ದಕ್ಕೆ ಚಡಪಡಿಸುತ್ತ ಅಂದಿನ ರಸನಿಮಿಷಗಳನ್ನು ಸವಿಯುತ್ತ ಮನೆ ಸೇರಿರಬೇಕು.

ಅಂದು ಪ್ರಿನ್ಸಿಪಾಲರ ಮನೆಯಿಂದ ಮರಳಿದಾಗ ಸಂಜೆಯಾಗಿತ್ತು. ಹೋಟೆಲ್ ಸೇರುತ್ತಿದ್ದಂತೆ ಹೋಟೆಲ್ ಮಾಲೀಕರು ನೀವೇ ಡಾ.ಎಸ್. ಅರುಣರಲ್ಲವೇ? ನಿಮಗೊಂದು ಪತ್ರವಿದೆಯೆಂದು ಕೈಗಿತ್ತರು. ಅಂಚೆಯ ಟಿಕೀಟು ಇಲ್ಲದ್ದರಿಂದ ಮುಂಬೈಯಿಂದಲೇ ಬಂದಿತ್ತೆಂಬುದು ಸ್ಪಷ್ಟ. ಹಸ್ತಾಕ್ಷರ ಆಶಾಳದು. ಏನು ಬರೆದಿರಬಹುದು? ಪ್ರಿನ್ಸಿಪಾಲರ ಬಗ್ಗೆ ಮೊದಲೇ ಹೇಳಿದ್ದಕ್ಕೆ ಕ್ಷಮಾಯಾಚನೆ, ಇಲ್ಲವೇ ನಾಳೆ ಬರಲಾಗದ್ದಕ್ಕೆ ಕ್ಷಮೆ ಕೇಳಿ ಇರಬಹುದು. ಭಾರತೀಯ ಕುಮಾರಿಯರ ಹಣೇಬರಹವೇ ಇಷ್ಟು. ಅವರಿಗೆ ವಿಚಾರ ಸ್ವಾತಂತ್ರ್ಯ ಯಾವಾಗ ಬರುತ್ತದೋ! ಒಂದು ದೃಷ್ಟಿಯಲ್ಲಿ ಅಮೇರಿಕನ್ ಕುಮಾರಿಯರೇ ವಾಸಿ! ಎಂದು ಯೋಚಿಸುತ್ತ ರೂಮಿಗೆ ಬಂದು ಬಟ್ಟೆ ಬದಲಿಸಿ, ಕೈಕಾಲು ತೊಳೆದು ಬಂದು ಸುಖವಾಗಿ ಹಾಸಿಗೆಯಲ್ಲಿ ಬಿದ್ದುಕೊಂಡು ಪತ್ರ ಒಡೆದು ಓದಲಾರಂಭಿಸಿದ್ದೆ.

ಪ್ರಿಯ ಅರುಣ,

ಪತ್ರ ಹೇಗೆ ಪ್ರಾರಂಭಿಸಬೇಕೆಂದೇ ತಿಳಿಯದಾಗಿದೆ. ನಿನ್ನೆ ಸಾಯಂಕಾಲ ಮನೆ ಸೇರುತ್ತಿದ್ದಂತೆ ತಂದೆ ತಾಯಿಗಳು ಗರ್ಜಿಸುತ್ತ ನನ್ನ ಮೇಲೆ ಏರಿ ಬಂದರು. ಎಡಬಿಡದೇ ನೂರಾರು ಪ್ರಶ್ನೆಗಳನ್ನು ಕೇಳಿದರು. ಮೊದ ಮೊದಲು ನನಗೆ ಏನೂ ಅರ್ಥವಾಗಲಿಲ್ಲ. ಆಮೇಲೆ ಸ್ಪಷ್ಟವಾಗುತ್ತ ಬಂದಿತು.

ನನ್ನ ಹುಚ್ಚ ಅಣ್ಣ (ಮದುವೆಯಾದಾಗಿನಿಂದ ಜಾಣನಾಗುತ್ತಿದ್ದಾನೆ ಆತ!) ನಿನ್ನೆ ಪತ್ನಿಯೊಡನೆ ವಿಹಾರಲೇಕಕ್ಕೆ ಬಂದಿದ್ದನಂತೆ. ನಾವು ಕುಳಿತಲ್ಲೆ ಕೂಡ್ರುವ ವಿಚಾರವಿತ್ತೇನೊ! ದೂರದಿಂದಲೇ ನಮ್ಮ ಪರಿಚಯ ಸಿಕ್ಕಿತು ಆವನಿಗೆ. ಆದರೂ ಖಚಿತಪಡಿಸಲು ನನ್ನ ಹೆಸರು ಹಿಡಿದು ಕೂಗುವಂತೆ ಪತ್ನಿಗೆ ಹೇಳಿದ. ನಾನು ತಿರುಗಿ ನೋಡಿದಾಗ ನಾನೇ! ಎಂದು ಮನದಟ್ಟಾಗಿ, ವಿಹಾರಲೇಕ್ ಮರೆತೇಬಿಟ್ಟು ತನ್ನ ಶೋಧಕ್ಕಾಗಿ ಹಿಗ್ಗುತ್ತ ಕೂಡಲೇ ತಿರುಗಿ ಮನೆಗೆ ಬಂದ. ನೋಡಿದ್ದು-ನೋಡದಿದ್ದುದು ಎಲ್ಲ ಒಂದಕ್ಕೆ ನಾಲ್ಕು ಸೇರಿಸಿ ಹೇಳಿದ್ದಾನೆ. ನನ್ನ ಬಗ್ಗೆ ಮೊದಲಿನಿಂದಲೂ ಆತನಿಗೆ ಸಹನೆಯಿಲ್ಲ. ನನ್ನ ವೈನಿ, ಅಂಗಲಾಚಿ ಕೇಳಿಕೊಂಡಳಂತೆ. ತಂದೆ-ತಾಯಿಗಳಿಗೆ ಹೇಳುವ ಮೊದಲು ನನಗೊಂದು ಮಾತು ಕೇಳಿ ನೋಡೋಣವೆಂದು. ಆದರೂ ಅವಳನ್ನು ಗದರಿಸಿ ತೆಪ್ಪಗೆ ಮಾಡಿ ಎಲ್ಲವನ್ನು ಬಕಾಯಿಸಿದನಂತೆ. ಆಯಿಯಂತೂ ಮಂಕಾಳಿಯ ಅವತಾರ ತಾಳಿದ್ದಾಳೆ. "ಮನೆತನದ ಹೆಸರು ಹಾಳುಮಾಡಲಿದ್ದೀಯಾ!" ಎಂದು

ತಂದೆಯವರು ತಿರುಗಾಡಲು ಒಯ್ಯುತ್ತಿದ್ದ ಬೆತ್ತದಿಂದ ಚೆನ್ನಾಗಿ ಹೊಡೆದರು. ಏಟುಗಳು ಮೈಮೇಲೆ ಮೂಡಿಬಂದಿವೆ. ನಿಮ್ಮೊಂದಿಗೆ ಇದ್ದದ್ದಕ್ಕಾಗಿ ಈ ಶಿಕ್ಷೆಯಷ್ಟೆ? ಅವು ನನಗೆ ಸುಖವನ್ನೆ ತರುತ್ತವೆ. ಬೆತ್ತದೇಟಿಗೆ ಹೆದರುವವಳು ನಾನಲ್ಲ.

ನಾನೀಗ ಸರ್ಪಕಾವಲಿನಲ್ಲಿ ಇದ್ದೇನೆ. ಗೆಳತಿಯರೊಂದಿಗೂ ಫೋನಿನ ಮೇಲೆ ಮಾತನಾಡಲು ಅಪ್ಪಣೆಯಿಲ್ಲ ನನಗೆ. ಆದರೂ ಸಕಾಲದಲ್ಲಿ ನಿಮಗೆ ಪತ್ರ ಮುಟ್ಟುವ ಏರ್ಪಾಡು ಮಾಡಿದ್ದೇನೆ. ಹೇಗೆ ಗೊತ್ತೇ?

ತನ್ನಿಂದಾಗಿ ತನ್ನ ಪತಿಯಿಂದಾಗಿ ಇಷ್ಟೆಲ್ಲ ರಂಬಾಟವಾಯಿತೆಂದು ನನ್ನ ವೈನಿ ಬಹಳ ನೊಂದಿದ್ದಾಳೆ. ನಮ್ಮ ಕಥೆಯನ್ನು ಸ್ವಲ್ಪದರಲ್ಲಿ ಹೇಳಿದಾಗ ತುಂಬ ವ್ಯಥೆ ಪಟ್ಟಳು. ನಿನ್ನೆಯೇ ಮೂರು ವರ್ಷಗಳ ನಂತರ ಅಮೇರಿಕೆಯಿಂದ ತಿರುಗಿ ಬಂದವನೊಡನೆ-ತಂಗಿ ಆಗಾಗ ಅಲೆಯುತ್ತಿದ್ದಳು, ಎಂಬ ಅಪವಾದವನ್ನು ಪತಿ ನನ್ನ ಮೇಲೆ ಹೊರಿಸಿದ್ದಕ್ಕಾಗಿ ಹೇಸಿದಳು. ತನ್ನಿಂದ ಆದಷ್ಟು ಸಹಾಯ ಮಾಡುತ್ತೇನೆಂದು ನನಗೆ ಸಾಂತ್ವನ ಮಾಡಿದಳು. ಈ ಪತ್ರ ನಿಮಗೆ ಮುಟ್ಟುವಂತೆ ಮಾಡು, ಎಂದಾಗ ಸಂತೋಷದಿಂದ ಒಪ್ಪಿದಳು. ತನ್ನ ತವರಿಗೆ ಹೋಗುವ ನೆವದಿಂದ ಇಂದು ಬೆಳಿಗ್ಗೆ ಮನೆಯಿಂದ ಜಾರಿಕೊಂಡು ತನ್ನ ತಮ್ಮನ ಮುಖಾಂತರ ನಿಮ್ಮ ಹೋಟೇಲಿಗೆ ನನ್ನ ಪತ್ರವನ್ನು ಮುಟ್ಟಿಸಿದ ಶ್ರೇಯಸ್ಸು ಅವಳಿಗೆ ಹೋಗುತ್ತದೆ.

ಕೊನೆಯಲ್ಲಿ ನನ್ನದೊಂದು ವಿಜ್ಞಾಪನೆ. ನಾನಿನ್ನು ಹೊರಬಿದ್ದು ನಿಮ್ಮನ್ನು ಭೆಟ್ಟಿಯಾಗುವದು ಅಶಕ್ಯ ಮಾತು. ಆದ್ದರಿಂದ ನೀವಿನ್ನು ಮುಂಬೈಯಲ್ಲಿ ಹೆಚ್ಚು ದಿನವಿದ್ದು ಪ್ರಯೋಜನವಾಗಲಾರದು. ನಾಳೆಯೇ ನೀವು ಊರಿಗೆ ಹೊರಟು ಬಿಡಿ. ತೀ. ಮಾವಯ್ಯನವರು ಮಗನನ್ನು ಕಾಣಲು ಎಷ್ಟು ಕಾತುರರಾಗಿರುವರೋ! ನಾನು ಪತ್ರಮುಖೇನ ಇಲ್ಲಿ ನಡೆಯುವ ಘಟನೆಗಳನ್ನು ಬರೆಯುವೆ. ಕೆಳಗೆ ವೈನಿಯ ತವರಿನ ಎಡ್ರೆಸ್ ಕೊಟ್ಟಿದೆ. ನಿಮಗೆ ಏನಾದರೂ ತಿಳಿಸುವದಿದ್ದರೆ ಆ ಪತ್ತೆಗೆ ತಿಳಿಸಿ. ಶ್ರೀಮತಿ ಎಂದು ಅದರ ಕೆಳಗೆ ಗೀಟ ಎಳೆದರೆ ಅದು ನನ್ನ ಪತ್ರ ಎಂದು ಅವಳಿಗೆ ತಿಳಿಯುವದು.

ಈ ಘಟನೆಯಿಂದ ನಿಮಗೆ ತುಂಬ ನೋವಾಗಿರಬಹುದು. ಕ್ಷಮೆಯಿರಲಿ.

ಎಂದೆಂದಿಗೂ ನಿಮ್ಮ ಚರಣದಾಸಿಯಾಗಬಯಸುವ,
ಆಶಾ

ಪತ್ರ ಇನ್ನೊಮ್ಮೆ ಓದಿದ್ದೆ. ನಿಟ್ಟುಸುರೊಂದು ಹೊರಟಿತು. ಅಮೇರಿಕೆಯಿಂದ ಮರಳಿ ಬಂದ ಸಮಯ ಚೆನ್ನಾಗಿಲ್ಲವೆಂದು ಉದ್ಗರಿಸಿದೆ. ಆಗಲೇ ಅಲ್ಲವೇ ಗೋಡೆಯ ಮೇಲಿನ ಹಲ್ಲಿ ಲೊಚಗುಟ್ಟಿದ್ದು! ವಿಚಾರ ಮಾಡುತ್ತ ಕೂಡ್ರುವ ಪ್ರವೃತ್ತಿ

ನನ್ನದಲ್ಲವಾದ್ದರಿಂದ ಕೂಡಲೇ ಊರಿಗೆ ಹೊರಡುವದನ್ನು ನಿಶ್ಚಯಿಸಿದ್ದೆ. ಮರುದಿನ ಹೋಟೆಲ ಬಿಲ್ಲನ್ನು ಚುಕ್ತಾ ಮಾಡಿ ಊರಿಗೆ ಹೊರಟಿದ್ದೂ ಆಯಿತು.

ಊರನ್ನು ಮರುದಿನ ಮುಟ್ಟಿದಾಗ ಸೂರ್ಯದೇವ ಕಡಲ ಮಡಿಲಲ್ಲಿ ಮರೆಯಾಗುವದರಲ್ಲಿದ್ದ. ಮನೆ ದೂರದಿಂದಲೇ ಕಾಣಿಸಿತು. ಈ ಮೂರು ವರ್ಷಗಳಲ್ಲಿ ಹೆಚ್ಚಿನ ಬದಲಾವಣೆಯಾಗದಿದ್ದರೂ ಅಲ್ಲಿ ಇಲ್ಲಿ ಇದ್ದ ಗಿಡಮರಗಳು ಬೆಳೆದು ಎತ್ತರವಾಗಿದ್ದವು. ಮನೆಯ ಅಂಗಳದಲ್ಲಿ ಹುಡುಗಿಯೊಂದು ಕಬ್ಬನ್ನು ತಿನ್ನುತ್ತ ಕುಳಿತಿತ್ತು. ನಾನು ಹೋಗಿ ಅವಳ ತಲೆಯನ್ನು ನೇವರಿಸಿದಾಗ ತಲೆಯೆತ್ತಿ ನೋಡಿದಳು. ಗುರುತು ಸಿಗಲಿಲ್ಲ.

"ಅಮ್ಮ, ಅಮ್ಮ, ಯಾರೋ ಬಂದಿದ್ದಾರೆ?" ಎಂದು ಒಳಗೆ ಓಡಿದಳು ಅಕ್ಕನ ಮಗಳು. ನಾನು ವಿದೇಶಕ್ಕೆ ಹೊರಟಿದ್ದಾಗ ಇನ್ನೂ ಸಣ್ಣ ಮಗು; ಎಷ್ಟು ಬೇಗ ದೊಡ್ಡವಳಂತೆ ಕಾಣುತ್ತಾಳೆ ಎಂದುಕೊಂಡು ಒಳಗೆ ಹೊಕ್ಕೆ. ಅಕ್ಕ ಬಂದು ನನ್ನನ್ನು ನೋಡಿ ಸಂತಸಬಟ್ಟಳು. "ಇದೇನು ಅರುಣ? ನೀನು ಬರುತ್ತಿ ಎಂಬ ಪತ್ರವಿಲ್ಲ ಏನಿಲ್ಲ, ನೀನು ತಿರುಗಿ ಬರುತ್ತಿ ಎಂಬದೂ ದೂರದ ಆಸೆಯಾಗಿತ್ತು-ಮಗು, ನೀನು ಅಲ್ಲಿಯೇ ಒಬ್ಬ ಬಿಳಿಯ ಹುಡುಗಿಯನ್ನು ಮದುವೆಯಾಗಿದ್ದಿಯೆಂದು ಊರಲ್ಲಿ ಪಿಸು ಮಾತು ಕೂಡ ಹಬ್ಬಿದೆ. ನೀನು ಬಂದೇ ಬಿಟ್ಟಯಾ? ತುಂಬ ಒಳ್ಳೆಯದಾಯಿತು. ಕಳೆದ ಒಂದು ವಾರದಿಂದ "ಆನ್ನಾ" ಅವರ ಪ್ರಕೃತಿ ಸರಿಯಾಗಿಲ್ಲ. ನಿದ್ರೆಯೇ ಬರುವದಿಲ್ಲ. ನಿನ್ನದೇ ಧ್ಯಾನ ಅವರಿಗೆ. ಸಾಯುವ ಮೊದಲು ಅರುಣನ ಮುಖ ನೋಡುತ್ತಿದ್ದೆ ಎಂದು ಹಲಬುತ್ತಿರುತ್ತಾರೆ. ಇಂದೇ ಮಧ್ಯಾಹ್ನ ವೈದ್ಯರು ಬಂದು ನೋಡಿ ಹೋಗಿದ್ದಾರೆ. ಅವರ ಔಷಧದ ಪರಿಣಾಮವಾಗಿ ಈಗ ಸ್ವಲ್ಪ ಜೊಂಪು ಹತ್ತಿದೆ" ಎಂದಳು.

ಮಾನವನಿಗೆ ಸೌಜನ್ಯವಿರಬೇಕು. ಬಾಗಿ ನಡೆದವನು ಸೌಜನ್ಯವಂತ ಎಂದು ತಿಳಿದುಕೊಳ್ಳಲೋ ಎಂಬಂತೆ ನಿಲ್ಲಿಸಿದ ಗಿಡ್ಡ ಬಾಗಿಲು, ತಲೆ ಜಪ್ಪದಂತೆ ಬಾಗಿ ಮನೆಯೊಳಗೆ ಪ್ರವೇಶಿಸಿದೆ. ಗೊರಕೆ ಹೊಡೆಯುತ್ತಿದ್ದ ತಂದೆಯವರು ಕಣ್ಣು ಬಿಟ್ಟು "ಯಾರದು?" ಎಂದು ಕೇಳಿದರು. "ನಾನು ಅಣ್ಣ, ಅರುಣ," ಎಂದು ಅವರ ಕಾಲು ಮುಟ್ಟಿದಾಗ ಅವರ ಕಣ್ಣಲ್ಲಿ ಆನಂದ ಬಾಷ್ಪಗಳು ಕಾಣಿಸಿಕೊಂಡಿದ್ದವು. ನನ್ನ ಹಣೆ, ಕೂದಲುಗಳನ್ನು ಸವರುತ್ತ "ನಾನು ಎಷ್ಟೊಂದು ಹೆದರಿದ್ದೆ ಅಪ್ಪಾ, ನೀನೆಲ್ಲಿ ನಮ್ಮನ್ನು ಮರೆಯುತ್ತೀಯೋ ಎಂದು; ದೊಡ್ಡ ಸಾಹೇಬನಾಗುವೆ, ವಿದ್ಯಾ ಬುದ್ಧಿಗಳಿದ್ದೂ ಸೌಜನ್ಯವಿರುವ ಮಗನನ್ನು ನಾನು ಪಡೆದಿರುವೆ. ಈ ಸುಖದ ಗಳಿಗೆ ನೋಡಲು ಎಷ್ಟೊಂದು ಕಷ್ಟ ಪಡಬೇಕಾಯಿತು. ನಿಮ್ಮಮ್ಮ ಇದ್ದಿದ್ದರೆ ಎಷ್ಟೊಂದು ಸಂಭ್ರಮ ಪಡುತ್ತಿದ್ದಳೊ!!" ಎಂದಾಗ ಇಬ್ಬರ ಕಣ್ಣೂ ತುಂಬಿ ಬಂದಿದ್ದುವು.

"ಪಾಪ! ಎಷ್ಟು ದಣಿದು ಬಂದಿರುವಿಯೋ ಏನೋ! ನಾನು ಮಾತಿನಲ್ಲಿ ಎಲ್ಲ ಮರೆಯುತ್ತೇನೆ," "ಅಂಬೂ!" ಎಂದು ಮಗಳನ್ನು ಕರೆದು ನೀರು ಕಾಸಲು, ಬೇಗ ಅಡಿಗೆ ಮಾಡಲು ಹೇಳಿದರು. ಅಕ್ಕ ಎರಡೂ ಸಿದ್ಧವಾಗುತ್ತಿವೆ, ಎಂದಾಗ ಅವರಿಗೆ ಸಮಾಧಾನವಾಯಿತು. ಅಕ್ಕನ ಮಗಳು ಮಾಮ ಏನು ತಂದಿದ್ದಾನೆ ಎಂದು ನನ್ನ ಸುತ್ತಲೂ ಸುಳಿಯುತ್ತಿದ್ದಳು. ಮುಂಬೆಯಿಂದ ತಂದ ಮಿಠಾಯಿ ಪೊಟ್ಟಣ ಕೈಗೆ ಕೊಟ್ಟಾಗ ತಾಯ ಕಡೆಗೆ ಓಡಿದಳು. ಅನ್ನಾ ಮತ್ತು ನಾನು ಕಂದೀಲಿನ ಬೆಳಕಿನಲ್ಲಿ ಬಹಳ ಹೊತ್ತು ಮಾತನಾಡಿದ್ದೆವು.

"ಅಪ್ಪಾ, ಮದುವೆಯ ವಿಚಾರ ಏನು ಮಾಡಿದೆ? ಎಷ್ಟೋ ಕನ್ಯೆಯರ ಜಾತಕಗಳು ಬಂದಿವೆ. ಅವರ ತಂದೆ ತಾಯಿಗಳು ಒಂದೇ ಸವನೇ ನನ್ನನ್ನು ಕಾಡುತ್ತಿದ್ದಾರೆ. ನೀನು ತಿರುಗಿ ಬಂದ ಮೇಲೆ ಆ ಮಾತು ಎಂದು ಇಷ್ಟು ದಿನ ತಳ್ಳಿದೆ" ಎಂದಿದ್ದರು ತಂದೆಯವರು.

"ಕೈ ಹಿಡಿದವಳ ಹೊಟ್ಟೆ ತುಂಬಲು ಒಂದು ನೌಕರಿ ಬೇಡವೇ?" "ತಾರೀಬಾಗಿಲ ಸುಬ್ಬರಾಯನ ಮಗ ನೋಡು B.Sc.ಆಗಿದ್ದಾನೆ. ಈಗಾಗಲೇ 'ಸಾಹೇಬ'ನಾಗಿದ್ದಾನಂತೆ. B.D.O.ಎಂದು."

"ಹಾಗಲ್ಲ ಅಪ್ಪ. ಹೆಚ್ಚೆಚ್ಚು ಕಲಿತಂತೆ ಹೆಚ್ಚೆಚ್ಚು ಜವಾಬ್ದಾರಿಗಳು ಏರುತ್ತವೆ. ಅವನ್ನೆಲ್ಲ ಪೂರೈಸಲು ಒಳ್ಳೆ ನೌಕರಿ ಬೇಕು. ಒಳ್ಳೆಯ ನೌಕರಿ ಸುಲಭದಲ್ಲಿ ಸಿಗಲಾರದು."

"ನಿನ್ನ ಮೇಲೆ ಅಂಥ ಜವಾಬ್ದಾರಿಗಳು ಬೀಳದಂತೆ ನೋಡಿಕೊಳ್ಳುವೆ. ಈಗ ನೋಡು ಧಾನ್ಯದ ಬೆಲೆ ಏರಿದೆ. ನಾಲ್ಕು ಆಳನ್ನಿಟ್ಟು ಈ ವರ್ಷ ಸಾಕಷ್ಟು ಬೆಳೆ ತೆಗೆದೆ. ಈಗ ಸಾಲವೆಲ್ಲ ತೀರಿದೆ. ನಗದು ೨,೦೦೦ರೂ. ಇದೆ. ಮನೆಯಲ್ಲಿ ಸಾಕಷ್ಟು ಭತ್ತವೂ ಇದೆ. ನಿನಗೆ ನೌಕರಿ ಇಲ್ಲದಿದ್ದರೆ ಒಂದು ವರ್ಷದ ತನಕವೂ ಯಾವ ಚಿಂತೆಯಿಲ್ಲ" ಎಂದು ಹೇಳಿದ್ದ ಮುಗ್ಧ ತಂದೆಯ ಸರಳ ಮಾತುಗಾರಿಕೆಗೆ ಮನಸ್ಸಿನಲ್ಲೆ ನಕ್ಕಿದ್ದ.

"ಅನ್ನಾ, ಕೂಡಿಟ್ಟ ದುಡ್ಡು-ಕಾಳುಕಡಿ ಎಷ್ಟು ದಿನವಾದೀತು? ನೀನೇ ಹೇಳಿಲ್ಲವೇ? ಕೂತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು! ಅಂತ. ಆದ್ದರಿಂದ ನನ್ನ ನೌಕರಿ ಸಂಪಾದನೆ ಪ್ರಾರಂಭವಾಗುವ ತನಕ ಮದುವೆ ಮಾತು ಬೇಡಪ್ಪ" ಎಂದು ನನ್ನ ನಿರ್ಧಾರವನ್ನು ಸೌಮ್ಯವಾಗಿ ತಿಳಿಸಿದ್ದೆ.

ಅಷ್ಟರಲ್ಲಿ ಅಕ್ಕ "ಅರುಣ, ನೀರು ಕಾದಿದೆ. ಸ್ನಾನ ಮಾಡಿ ಬಿಸಿಬಿಸಿ ಊಟ ಮಾಡುವಿಯಂತೆ. ಎಷ್ಟು ದಣಿದಿದ್ದಿಯೋ!" ಎಂದು ಕರೆದಳು. ಎಲ್ಲರ ಊಟ

ಮುಗಿದು ಅಂಗಳದಲ್ಲಿ ಕುಳಿತಾಗ ತಿರುಗಿ ಮಾತು ಕತೆಗಳು. ಅಕ್ಕನ ವಿವಿಧ ಪ್ರಶ್ನೆಗಳು, ನಡುನಡುವೆ ತಂದೆಯವರ ಆಸ್ಥೆಯ ಪ್ರಶ್ನೆಗಳು. ಮಲಗುವಾಗ ಮಧ್ಯರಾತ್ರಿಯಾಗಿತ್ತು.

ನಾನು ಊರಿಗೆ ಮರಳಿದ ಸಮಾಚಾರ ಬೇಗ ಊರ ತುಂಬ ಹರಡಿತು. ಸಣ್ಣ ಊರಲ್ಲವೇ? ಜನರು ತಂಡತಂಡವಾಗಿ ಬಂದು ನನ್ನನ್ನು ಕಾಣುತ್ತಿದ್ದರು. ವಿವಿಧ ತರದ ಜನ-ಒಬ್ಬ ತನ್ನ ಮಗನಿಗೆ ನೌಕರಿ ಕೊಡಿಸೆಂದ. ಇನ್ನೊಬ್ಬ ಮಗನನ್ನು ಕಾಲೇಜಿಗೆ ಸೇರಿಸಲು ಧನಸಹಾಯ ಕೇಳಿದ. ಮುದುಕಿಯೊಬ್ಬಳು ನನ್ನ ತಾಯಿಯೊಂದಿಗೆ ತನಗಿದ್ದ ಸ್ನೇಹವನ್ನು ನೆನೆಸಿ ಕಣ್ಣೀರು ಹಾಕಿದಳು. ನಡು ವಯಸ್ಕಳೊಬ್ಬಳು ತಾವು ಬಡವರು, ವರದಕ್ಷಿಣೆಗೆ ದುಡ್ಡಿಲ್ಲ, ಬೆಳೆದು ನಿಂತ ಮಗಳನ್ನು ಮದುವೆಯಾಗಿ ತಮ್ಮನ್ನು ಉದ್ಧರಿಸೆಂದು ಕಾಲಿಗೆ ಬಿದ್ದಳು. ಇವರಿಗೆಲ್ಲ ತಿಳಿ ಹೇಳುವದು ಕಷ್ಟವಾಗಿತ್ತು. ಆದರೂ ನನಗೆ ತಿಳಿದ ಮಟ್ಟಿಗೆ ಎಲ್ಲರನ್ನೂ ಸಂತೈಸಲೆತಿಸಿದ್ದೆ.

"ಇಷ್ಟೆಲ್ಲ ಜನ ತಮ್ಮ ಮನೆಗೆ ಬರುವಂತಾಯಿತಲ್ಲ!" ಎಂದು ಅನ್ನಾ ಹೊಸ ಹುರುಪನ್ನು ಪಡೆದಿದ್ದರು. ಊರ ಶಾನಭೋಗರು, ಪಟೇಲರು ಊಟಕ್ಕೆ ಕರೆದಾಗ ನಾನು ಹೋಗಲು ಒಪ್ಪಿರಲಿಲ್ಲ. ಆದರೆ ತಂದೆಯವರು ಊರ ಜನ ಸನ್ಮಾನ ಮಾಡಬೇಕೆಂದಿದ್ದಾಗ ನಿರಾಕರಿಸುವದು ಅಸಭ್ಯತನವೆಂದು ನನ್ನನ್ನು ಒತ್ತಾಯದಿಂದ ಔತಣ ಸ್ವೀಕರಿಸುವಂತೆ ಮಾಡಿದ್ದರು. ಕಲಿತ ಶಾಲೆಯ ಹೆಡ್ ಮಾಸ್ತರರು ಶಾಲೆಯಲ್ಲಿ ವಿದ್ಯಾರ್ಥಿಗಳಿಗಾಗಿ ಭಾಷಣ ಮಾಡುವಂತೆ ಕೇಳಿಕೊಂಡಿದ್ದರು. ಕಾರ್ಯಕ್ರಮದ ಮೊದಲಲ್ಲಿ ಗಂಧದ ಹಾರ ಕೊರಳಿಗೆ ಬಿದ್ದಿತ್ತು. ವಿದ್ಯಾರ್ಥಿಗಳಿಗೆ ತಿಳಿಯುವ ಮಾತಿನಲ್ಲೇ ತುಸು ಹೊತ್ತು ಮಾತನಾಡಿ ಆಮೇಲೆ ಪ್ರಶ್ನೆಗಳನ್ನು ಕೇಳಿರೆಂದು ಹೇಳಿದ್ದೆ. ಪ್ರಶ್ನೆಗಳ ಸುರಿಮಳೆಯೇ ಬಿದ್ದಿತ್ತು. ಹೆಡ್ ಮಾಸ್ತರರಿಗೆ ಅತೀವ ಆನಂದ. ಅಂತೆಯೇ ನನ್ನ ಗುಣಗಾನ ಮಾಡಿ ಫೋಟೋದೊಂದಿಗೆ ಭಾಷಣದ ಸಾರಾಂಶವನ್ನು ಸ್ಥಾನಿಕ ಪತ್ರಿಕೆಗೆ ಕಳಿಸಿದ್ದರು. ಅದನ್ನು ನೋಡಿದ್ದು, ಓದಿದ್ದು ತಂದೆಯವರು ಹಿಗ್ಗಿ ಹೋಗಿದ್ದರು.

ಊರಲ್ಲಿ ಸಿಕ್ಕ ಸ್ವಾಗತದ ಬಗ್ಗೆ ವಿವರ ಪತ್ರವೊಂದನ್ನು ಆಶಾಳಿಗೆ ಬರೆದು ಅವಳ ಮನೆಯಲ್ಲಿ ಪ್ರಾರಂಭವಾಗಿರಬಹುದಾದ ಕುರುಕ್ಷೇತ್ರ ಯುದ್ಧ ಸಮಾಚಾರವೇನೆಂದು ಕೇಳಿದ್ದೆ. ಒಂದು ದಿನ ಮನೆಯಲ್ಲಿ ಸುತ್ತುವರಿದ ಜನರಿಗೆ ಅಮೇರಿಕೆಯ ಜನಜೀವನದ ಫೋಟೋಗಳನ್ನು ತೋರಿಸುತ್ತ ಕುಳಿತಾಗ ಎಕ್ಸ್‌ಪ್ರೆಸ್ ಪತ್ರ ಬಂದಿತ್ತು. ಅದು ನೌಕರಿಯ ಪತ್ರವೆಂದು ತಿಳಿದು ತಂದೆಯವರು ಪೋಸ್ಟಮನ್ನನಿಗೆ "ಇನಾಂ" ಕೊಟ್ಟೂ ಆಗಿತ್ತು. ಆ ಮೇಲೆ ಅಲ್ಲವೆಂದು ತಿಳಿದಾಗ ಅವರಿಗೆ ನಿರಾಶೆಯಾಗಿತ್ತು. ಬಂದ ಪತ್ರ ಆಶಾಳದಾಗಿತ್ತು.

"ಪ್ರಿಯ ಅರುಣ,

ನೀವು ಬರೆದಂತೆ ಮನೆಯಲ್ಲಿ ಕುರುಕ್ಷೇತ್ರವೇ ಪ್ರಾರಂಭವಾಗಿದೆ. ನನ್ನಿಂದ ಪ್ರಾರಂಭವಾದ ಈ ಕಾಳಗದಿಂದ ನಾನು ಬಹಳ ಧೈರ್ಯಗುಂದಿದ್ದೇನೆ. ನನ್ನ ತಂದೆಯವರು ಪ್ರತ್ಯಕ್ಷವಾಗಿ ನನ್ನನ್ನು ಬೆಂಬಲಿಸದಿದ್ದರೂ ನಾನು ಅಕ್ಷಮ್ಯ ತಪ್ಪುಗಾರ್ತಿ ಎಂದು ಒಪ್ಪಲು ಸಿದ್ಧರಿಲ್ಲ. ಅಣ್ಣ ಏನೇನೋ ವದಂತಿಗಳನ್ನೆಲ್ಲ ಆಯಿಗೆ ಹೇಳಿ ಇಬ್ಬರೂ ಕೂಡಿ ನನ್ನ ವಿರುದ್ದ ಯುದ್ಧ ಹೂಡಿಬಿಟ್ಟಿದ್ದಾರೆ. ತಂದೆ ಸ್ವಾಭಾವಿಕವಾಗಿಯೇ ಶಾಂತಪ್ರಕೃತಿಯವರು, ಇಲ್ಲದ ಕಿರುಕಳ ಹಚ್ಚಿಕೊಳ್ಳುವವರಲ್ಲ. ಆದ್ದರಿಂದ ಅವರೆಲ್ಲಿ ಆಯಿ ಮತ್ತು ಅಣ್ಣನಿಗೆ ಶರಣಾಗತರಾಗುವರೋ ಎಂಬ ಭಯ ನನಗೆ. ಈಗ ಯಾವ ದೃಷ್ಟಿಯಲ್ಲಿ ನಾನು ಅವರ ಹತ್ತಿರ ಮಾತನಾಡಿದರೂ ಅಪಾರ್ಥವಾಗುವ ಸಂಭವವಿದೆ. ಆದ್ದರಿಂದ ನೀವೇ ಏಕೆ ತಂದೆಯವರಿಗೆ ಸವಿಸ್ತಾರವಾದ ಪತ್ರ ಬರೆದು ಅವರ ನ್ಯಾಯಾಧೀಶರ ಬುದ್ಧಿಗೆ ಹೊಳೆಯವಂತೆ ಮಾಡಿ ಒಂದು ಪತ್ರ ಬರೆಯಬಾರದು? ಅದನ್ನು ಮನೆಯ ಪತ್ತೆಗೆ ಬರೆಯದೇ ಆಫೀಸಿನ ಪತ್ತೆಗೆ ಬರೆಯಿರಿ. ಅಂದರೆ ನ್ಯಾಯಾಧೀಶರ ಖುರ್ಚಿಯಲ್ಲಿ ಕುಳಿತು ಓದಿದಾಗ ನ್ಯಾಯಾಧೀಶರಂತೆ ತೀರ್ಮಾನಕ್ಕೆ ಬಂದಾರು. ಅವರ ಆಫೀಸಿನ ಪತ್ತೆ ಕೆಳಗೆ ಕೊಟ್ಟಿರುತ್ತೇನೆ. ನನಗಾಗಿ ಇಷ್ಟನ್ನು ಮಾಡುವಿರಾ?"

ಸದಾಕಾಲ ನಿಮ್ಮನ್ನು ನೆನೆಯುತ್ತಿರುವ
ಆಶಾ

ಪತ್ರವನ್ನು ಇನ್ನೊಮ್ಮೆ ಓದಿ ತಿರುತಿರುಗಿ ಯೋಚಿಸಿದ್ದೆ. ಆಶಾ ಬರೆದಿದ್ದರಲ್ಲಿ ತಥ್ಯಾಂಶವಿತ್ತು. ಕೂಡಲೇ ಪೆನ್, ಹಾಳೆ ತೆಗೆದುಕೊಂಡು ನ್ಯಾಯಾಧೀಶರಿಗೆ ಪತ್ರವನ್ನೂ ಬರೆದಿದ್ದೆ.

ನ್ಯಾಯನಿಪುಣ ನ್ಯಾಯಾಧೀಶ ದೇಶಪಾಂಡೆಯವರಿಗೆ
ನಮಸ್ಕಾರಗಳು.

ನಾನೊಬ್ಬ ಬಡವ. ಮೇಲಿನ ಜಾತಿಗೆ ಸೇರದ್ದರಿಂದ ಒಂದು ಬಗೆಯಿಂದ ಸಮಾಜದಿಂದ ನನಗೆ ಅನ್ಯಾಯವಾಗುತ್ತಿದೆ. ಆದ್ದರಿಂದ ಸಂಸಾರದ ಅನುಭವವುಳ್ಳ, ಸಮತೋಲ ದೃಷ್ಟಿಯಿಂದ ತಮ್ಮಂತಹ ಹಿರಿಯರಿಂದ ನಿಷ್ಪಕ್ಷ ನ್ಯಾಯದಾನ ಪಡೆಯುವದಕ್ಕಾಗಿ ಈ ಪತ್ರ ಬರೆಯುತ್ತಿರುವೆ.

ನಾನು ಜಾತಿಯಿಂದ ವೈಶ್ಯನಾದರೂ ಆಚಾರ-ವಿಚಾರ ನಡೆವಳಿಕೆಗಳಲ್ಲಿ ಯಾವ ಬ್ರಾಹ್ಮಣನಿಗೂ ಕಡಿಮೆಯಿಲ್ಲ. ಬಡವನಾದರೂ ಸಾಕಷ್ಟು ವಿದ್ಯಾಬುದ್ಧಿ ಪಡೆದಿರುವೆ.

ನನ್ನ ಹುಟ್ಟೂರು ಚಿಕ್ಕ ಹಳ್ಳಿಯಾದರೂ ಉಚ್ಚ ಶಿಕ್ಷಣವೆಲ್ಲ ಮುಂಬೈ-ಅಮೇರಿಕೆಗಳಲ್ಲಿ ಆಯಿತು. ನಾನು ಬಿ.ಎಸ್.ಸಿ.ಯಲ್ಲಿ ಓದುವಾಗ ಆಶಾಳ ಪರಿಚಯ-ತಮ್ಮ ಪರಿಚಯವಾಯಿತು. ನಿಮ್ಮ ರೇಡಿಯೋಗ್ರಾಮ ತಯಾರಿಸಿಕೊಟ್ಟಾಗ ಮನೆವಾರೆ ಮೆಚ್ಚಿದ್ದೀರಿ. ಪ್ರಿನ್ಸಿಪಾಲರು ನಿಮಗೆ ಫೋನ ಮಾಡಿದಾಗ ನನ್ನನ್ನು ಕೊಂಡಾಡಿದ್ದೀರಿ. ನಿಮ್ಮ ಮೆಚ್ಚುಗೆಯ ಪರಿಣಾಮವಾಗಿಯೇ ಏನೋ ಆಶಾಳನ್ನೂ ನಾನು ಮೆಚ್ಚಿಕೊಂಡೆ. ಅವಳ ಸರಳ ಸ್ವಭಾವಕ್ಕೆ ಒಲಿದಿದ್ದೇನೆ. ಮೇಲಿನ ವರ್ಗದಲ್ಲಿ ಬಿ.ಎಸ್.ಸಿ. ಪಾಸಾದೆ. ನಿಮ್ಮಂತಹ ಗುರುಹಿರಿಯರ ಆಶೀರ್ವಾದದಿಂದ ಅಮೇರಿಕೆಯ ನ್ಯೂಯಾರ್ಕ ವಿಶ್ವವಿದ್ಯಾಲಯದಲ್ಲಿ ಉಚ್ಚ ಶಿಕ್ಷಣಕ್ಕಾಗಿ ಶಿಷ್ಯವೇತನ ದೊರೆಯಿತು. ಅಲ್ಲೂ ಒಂದು ವರ್ಷದಲ್ಲಿ ಮಾಸ್ಟರ್ಸ ಮುಗಿಸಿ ಇನ್ನೂ ಎರಡು ವರ್ಷದಲ್ಲಿ ಡಾಕ್ಟರೇಟ ಪಡೆದೆ. ಅಲ್ಲಿ ನಾನು ಮಾಡಿದ ಸಂಶೋಧನೆ ಬಹಳಷ್ಟು ಪ್ರಶಂಸೆಗೆ ಪಾತ್ರವಾಗಿದೆ. ಇದಕ್ಕಾಗಿ ವಿಶೇಷ ಪ್ರಶಸ್ತಿಯೂ ನನಗೆ ದೊರೆಕಿದೆ.

ಅಮೇರಿಕೆಯಲ್ಲಿ ಮೂರು ವರ್ಷವಿದ್ದರೂ ಭಾರತ ಸಂಸ್ಕೃತಿಯಲ್ಲಿ ಪೂರ್ಣ ಶ್ರದ್ಧೆ ಇರುವ ನಾನು ಅಮೇರಿಕನ್ ಲಘುಜೀವನಕ್ಕೆ ಮಾರು ಹೋಗಲಿಲ್ಲ. ನನ್ನತನವನ್ನು ಜೋಪಾನವಾಗಿ ಕಾದಿಟ್ಟುಕೊಂಡು ಮುಂಬೈ ಇಳಿದಾಗ ಆಶಾಳನ್ನು ಭೆಟ್ಟಿಯಾಗಿದ್ದೆ. ಇಬ್ಬರ ವಿಚಾರಗಳು, ಆಶೆ, ಆಕಾಂಕ್ಷೆಗಳು ಹೆಚ್ಚು ಕಡಿಮೆ ಒಂದೇ ಇರುವದರಿಂದ ಇಬ್ಬರ ವಿವಾಹವಾದರೆ ಇಬ್ಬರದೂ ಅಭ್ಯುದಯವಾಗಬಹುದು ಎನಿಸಿದೆ. ನಾವಿಬ್ಬರೂ ವಿಚಾರ ವಿನಿಮಯ ಮಾಡಿ ಮುಂದೆ ತಮ್ಮ ಅಪ್ಪಣೆ ಪಡೆಯುವದೆಂದು ಯೋಚಿಸುತ್ತ ವಿಹಾರ ಲೇಕದಲ್ಲಿ ಕೂಡಿದ್ದೆವು. ಆಗಲೇ ಅಲ್ಲಿ ಯಾರೋ ನಮ್ಮನ್ನು ಒಟ್ಟಿಗೆ ನೋಡಿ ಸಲ್ಲದ ಆರೋಪಗಳನ್ನು ನಮ್ಮ ಮೇಲೆ ಹೊರಿಸಿದ್ದಾರೆ. ಇದೆಲ್ಲ ನೀವಾಗಲೇ ಕೇಳಿ ನಿಮ್ಮ ಮನಸ್ಸು ಕಲ್ಮಶವಾಗಿರಲು ಸಾಕು. ಆದರೆ ಇದರಲ್ಲಿ ಯಾವ ತಥ್ಯವೂ ಇಲ್ಲ.

ನೀವು ದಯವಿಟ್ಟು ಇಂಥ ಸುಳ್ಳು ಆರೋಪಗಳತ್ತ ಲಕ್ಷ್ಯಕೊಡದೇ ನಾನು ನಿಮ್ಮ ಆಶಾಳಿಗೆ ಯೋಗ್ಯ ವರನೇ ಎಂದು ಸಾರಸಾರವಾಗಿ ವಿಚಾರ ಮಾಡಿ. ನೀವು ಒಪ್ಪಿದಲ್ಲಿ ಆಶಾಳನ್ನು ವರಿಸಲು ನಾನು ಸಿದ್ಧನಿದ್ದೇನೆ. ನಿಮಗೆ ನನ್ನ ಬಗ್ಗೆ ಹಲವಾರು ಪ್ರಶ್ನೆಗಳಿರಬಹುದು, ಶಂಕೆಗಳಿರಬಹುದು. ನೀವು ಅಪೇಕ್ಷಿಸಿದಲ್ಲಿ ನಾನು ಮುಂಬೈ ತನಕ ಬಂದು, ತಮ್ಮ ಪಾದಗಳ ಅಡಿಯಲ್ಲಿ ಹಾಜರ ಆಗುತ್ತೇನೆ.

ತಮಗೂ ತಮ್ಮ ಮನೆಯವರಿಗೂ ನನ್ನ ಹಾರ್ದಿಕ ನಮಸ್ಕಾರಗಳು. ಮನೆಯವರಿಗೆಲ್ಲ ನೆನಪುಗಳು.

ಇಂತೀ ತಮ್ಮ ಉತ್ತರಾಪೇಕ್ಷಿ
ಎಸ್. ಅರುಣ

ಪತ್ರ ಮತ್ತೆ ಮತ್ತೆ ಓದಿದ್ದೆ ಎಲ್ಲವೂ ಸರಿಯಾಗಿದೆ ಎನಿಸಿದಾಗ ಪೋಸ್ಟಿಗೆ ಹಾಕಿ ಬಂದಿದ್ದೆ.

* * *

ದೇಶಪಾಂಡೆಯವರು ಬಹಳ ಗಡಿಬಿಡಿಯಲ್ಲಿ ಇದ್ದಾಗ ಅರುಣನ ಪತ್ರ ಕೈ ಸೇರಿತು. ವಾಡಿಕೆಯಂತೆ ಅಂದು ದಿನದ ಟಪಾಲು ನೋಡುತ್ತಿದ್ದವರು ಅರುಣನ ಪತ್ತೆ ನೋಡಿ ತಮ್ಮ ಕನ್ನಡಕ ಸರಿಮಾಡಿಕೊಂಡು ಕಳಿಸಿದವನ ಪತ್ತೆ ಇನ್ನೊಮ್ಮೆ ಓದಿ ತಮ್ಮ ಕೋಟಿನ ಒಳಜೇಬಿಗೆ ಸೇರಿಸಿದರು. ತಮ್ಮ ಮೊದಲಿನ ಸೆಶನ್ ಮುಗಿಸಿ ವಿಶ್ರಾಂತಿಗಾಗಿ ತಮ್ಮ ಕೋಣೆ ಸೇರಿದಾಗ ಕವರನ್ನು ಒಡೆದು ಓದಲಾರಂಭಿಸಿದರು. ಓದುವ ಮೊದಲು ಕಾರ್‍ಮೋಡಗಳಿಂದ ತುಂಬಿದ ಮನಸ್ಸು ಪತ್ರ ಮುಗಿಸಿದಾಗ ಶುಭ್ರವಾಗಿತ್ತು. ಎಂತಹ ಒಳ್ಳೆಯ ಹುಡುಗನಿಗೆ ಹೆಸರು ಇಡುತ್ತಿದ್ದೆನಲ್ಲ ಎಂದುಕೊಳ್ಳುತ್ತಿದ್ದಾಗ ಪತ್ನಿ, ಮಗ, ಅಳಿಯನ ಮಾತುಗಳು ನೆನಪಾದವು. 'ಈಗಿನ ಕಾಲದ ಹುಡುಗರು ಏನೇನೋ ಮಾಟ ಮಾಡಿ ಹುಡುಗಿಯರನ್ನು ಬಲೆಗೆ ಹಾಕಿಕೊಳ್ಳುತ್ತಾರೆ. ಈತನಾರೊ ಅಂತಹನೇ ದರಿದ್ರ..... ಆಶಾ ಬೆಳ್ಳಗಿದ್ದದೆಲ್ಲ ಹಾಲೆಂದು ನಂಬುವ ಮುಗ್ಧೆ. ಈ ಮಂಕಿಗೇನು ತಿಳಿಯಬೇಕು ಆತನ ಕರತೂತು...... ಯಾರನ್ನು ನಂಬುವದು ಯಾರನ್ನು ಬಿಡುವದು? ಎಂದು ಯೋಚಿಸುತ್ತಿದ್ದಾಗ ಸಹೋದ್ಯೋಗಿ ಆಪ್ಟೆಯವರು ಒಳಗೆ ಬಂದರು. ಲೋಕಾಭಿರಾಮವಾಗಿ ಮಾತನಾಡಿ ಆಶಾ-ಅರುಣರ ಕಥೆಯನ್ನು ಪರ್ಯಾಯವಾಗಿ ಹೇಳಿದರು.' "ನೀವು ನ್ಯಾಯಾಧೀಶರ ಸ್ಥಾನದಲ್ಲಿದ್ದರೆ ಏನು ತೀರ್ಪು ಕೊಡುತ್ತಿದ್ದಿರಿ?" ಎಂದು ಕೇಳಿದರು, "ಕೇಳುವದೇನು ದೇಶಪಾಂಡೆಯವರೇ? ಇಬ್ಬರ ಒಪ್ಪಿಗೆಯಿದ್ದರೆ ನಡುವೆ ಇತರರು ಬಂದೇನು ಮಾಡಲು ಅಧಿಕಾರವಿದೆ? ಅವಳಿಗಾತ ಯೋಗ್ಯ ವರ......ಆಕೆಯೇನಾದರೂ ನನ್ನ ಮಗಳಾಗಿದ್ದರೆ ನಾನೇ ನಿಂತು ಈ ಅಂತರ್ಜಾತಿಯ ವಿವಾಹ ನೆರವೇರಿಸಿ ಹೆಮ್ಮೆ ಪಡುತ್ತಿದ್ದೆ" ಎಂದಾಗ ದೇಶಪಾಂಡೆಯವರಿಗೆ ಸಂಕಟವಾಯಿತು. ಕಿಸೆಯಿಂದ ಪತ್ರ ತೆಗೆದು ಅಪ್ಟೆಯವರ ಕೈಯಲ್ಲಿಟ್ಟು ಓದಲು ಹೇಳಿದರು. ಅವರು ಓದಿ ಮುಗಿಸುತ್ತ ತಲೆ ತೂಗುತ್ತ. "ಅಭಿನಂದನೆಗಳು ದೇಶಪಾಂಡೆಯವರೇ, ಇಂತಹ ಅಳಿಯನನ್ನು ಪಡೆದ ನೀವೇ ಭಾಗ್ಯಶಾಲಿಗಳು. ಕೆಲವು ತಿಂಗಳ ಹಿಂದೆ ವರ್ತಮಾನಪತ್ರದಲ್ಲಿ ಡಾ. ಅರುಣರ ಭಾವಚಿತ್ರ ಮತ್ತು ಅವರ ಸಂಶೋಧನೆಯ ಪ್ರಶಂಸೆ ಬಂದಿತ್ತು. ಅಮೇರಿಕೆಯ ಜಿ.ಈ. (General Electric) ಮತ್ತು ಬೆಲ್ ಟೆಲಿಫೋನ ಕಂಪನಿಯಂತಹ ದೊಡ್ಡ ದೊಡ್ಡ ಸಂಸ್ಥೆಗಳು ನೌಕರಿ ಮಾಡಲು ಬಂದರೂ ಆತ ನಿರಾಕರಿಸಿ ಭಾರತಕ್ಕೆ ಬಂದರೆಂದು ಅದರಲ್ಲಿ ಹೇಳಿದೆ. ನಿಮ್ಮ ಆಶಾಳಿಗೆ ಇವನಿಗಿಂತ ಯೋಗ್ಯ ವರ ಯಾರು ಸಿಕ್ಕಾರು?"

ಎಂದರು, ದೇಶಪಾಂಡೆಯವರಿಗೂ ಹೌದೆನಿಸಿತು. ಸಂಜೆ ಗೆಲುವಿನಿಂದಲೇ ಮನೆಗೆ ಹೊರಟರು. ಪತ್ನಿ-ಮಗ ಅಳಿಯನಿಗೆ ಇದೆಲ್ಲವನ್ನು ಮನಗಾಣಿಸಿ ಹೇಗೆ ಹೇಳುವದು ಎಂಬ ದೊಡ್ಡ ಪ್ರಶ್ನೆ ಅವರೆದುರು ನಿಂತಿತ್ತು.

ಸಂಜೆ ಚಹಾಪಾಣಿ ಮುಗಿದ ಮೇಲೆ, ನಿಧಾನವಾಗಿ ಹೆಂಡತಿಯನ್ನು ಕರೆದು ಅಂದಿನ ಪತ್ರದ ಸಾರಾಂಶವನ್ನು ಹೇಳಿದರು. ಆಕೆ ಗೆಲುವಾಗುವದರ ಬದಲು ಕೆಂಡವನ್ನೇ ಕಾರಲು ಪ್ರಾರಂಭಿಸಿದಳು. "ನೀವೊಬ್ಬರು ಧರ್ಮರಾಯನ ಅವತಾರದಂತೆ ಇದ್ದೀರಿ. ನ್ಯಾಯಾಧೀಶರಂತೆ ತೀರ್ಪು ಕೊಡುವದರಲ್ಲಿ ಸರಿ. ಬಾಕಿ ಲೋಕವ್ಯವಹಾರವನ್ನು ಕಂಡೂ ಕಾಣದ ಕುರುಡರಾಗಿದ್ದೀರಿ. ನಿಮ್ಮ ಮನೆಯಲ್ಲಿ ಇಷ್ಟು ರಂಭಾಟವಾಗುತ್ತದೆ! ಎಂದು ಅಷ್ಟು ದೂರ ಕುಳಿತವನಿಗೆ ಹೇಗೆ ತಿಳಿಯಬೇಕು? ಇದೆಲ್ಲ ನಿಮ್ಮ ಸೊಸೆಯ ಕಾರಭಾರ. ಮೇಲಿಂದ ಮೇಲೆ ಒಂದಿಲ್ಲೊಂದು ನೆವ ತೆಗೆದು ತವರಿಗೆ ಹೋಗುತ್ತಾಳೆ....ನನಗೆ ಮೊದಲೇ ಗೊತ್ತಾಗಿತ್ತು. ಆಶಾ ಮತ್ತು ಈಕೆ ಕೂಡಿ ಏನೋ ಕುತಂತ್ರ ನಡೆಸಿದ್ದಾರೆಂದು ಇಷ್ಟೆಲ್ಲ ಭಾನಗಡಿ ಮಾಡಿ ನಮ್ಮ ಮನೆಯ ಶಾಂತತೆ ಕೆಡಿಸಿದ ಕಾರಸ್ಥಾನಿಗೆ ಮಗಳನ್ನು ಧಾರೆಯೆರೆಯಲು ಹೊರಟಿದ್ದಾರೆ ಈ ಧರ್ಮರಾಯರು!"

"ನಾನು ಹೇಳುವದನ್ನಾದರೂ ಕೇಳಬಾರದೇ?"

"ಇಷ್ಟೆಲ್ಲ ವರ್ಷ ನಿಮ್ಮ ಮಾತು ಕೇಳಿ ನಾನೇನು ಸುಖಪಟ್ಟೆ? ಈ ಸೊಸೆ ಬೇಡವೆಂದಾಗ ನನ್ನ ಮಾತು ಕೇಳಿದಿರಾ? ನೀವು ಈಗ ಏನೇ ಹೇಳಿದರೂ ನಾನು ಕೇಳುವವಳಲ್ಲ. ಆಶಾಳ ಮದುವೆ ಆ ಶೆಟ್ಟಿಯೊಡನೆ ಆಗಬೇಕಾದರೆ ಅದಕ್ಕೂ ಮೊದಲು ನನ್ನ ಶವಸಂಸ್ಕಾರವಾಗಬೇಕು" ಎಂದು ಸ್ಪಷ್ಟವಾಗಿ ತನ್ನ ನಿರ್ಧಾರವನ್ನು ತಿಳಿಸಿ ಕೆಂಡ ಕಾರುತ್ತ ಅಡಿಗೆಯ ಮನೆ ಸೇರಿದಳು.

ರಾತ್ರಿ ಬಂದ ಮಗನಿಗೆ ಬಡಿಸುತ್ತಿದ್ದಂತೆ ಸಂಜೆ ನಡೆದ ಮಾತುಕತೆಗಳನ್ನು ತಾಯಿ ತಿಳಿಸಿದಳು. ಮಗ ತಾಯ ಧೋರಣೆಯನ್ನು ಅನುಮೋದಿಸಿದ್ದಲ್ಲದೇ ಹೆಂಡತಿಯ ಮೇಲೂ ರೇಗಿದ. ಆದರೆ ಹೆಂಡತಿ ತವರುಮನೆಗೆ ಹೋಗಿದ್ದಳಾದ್ದರಿಂದ ಅವಳಿಗೆ ಯಾವುದರ ಸುಳಿವೂ ಇರಲಿಲ್ಲ. ತಂದೆ ತಾಯಿಗಳ ಸಂಭಾಷಣೆಯನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದ ಆಶಾ ತಂದೆಯವರ ಜೇಬಿನಿಂದ ಪತ್ರ ತೆಗೆದು ಓದಿದಳು. ತನ್ನ ಮನದ ದುಗುಡ ಹೇಳಿಕೊಳ್ಳಲು ವೈನಿಯಿದ್ದಿದ್ದರೆ! ಎಂದು ವ್ಯಥೆಪಟ್ಟಳು. ವೈನಿ ಮರುದಿನ ಬೆಳಿಗ್ಗೆಯೇ ತಿರುಗಿ ಬಂದಳು. ಅಣ್ಣ ಅವಳಿಗೆ ಒಂದೇ ಸವನೇ ಪ್ರಶ್ನೆಗಳನ್ನು ಕೇಳಲಾರಂಭಿಸಿದ. ಏನೂ ಹಿನ್ನೆಲೆಯರಿಯದ ಆಕೆ ಶಿಲಾವಿಗ್ರಹದಂತೆ ನಿಂತುಬಿಟ್ಟಳು.

ಆಕೆ ಮಾತನಾಡದ್ದರಿಂದ ಸಿಟ್ಟು ಏರಿದ ಅಣ್ಣ, "ಮಾತನಾಡಲ್ಲ" ಎಂದು ಗರ್ಜಿಸಿ ಎರಡು ಏಟು ಬಿಗಿದ. ಇದೆಲ್ಲದರ ಅನುಭವವಿಲ್ಲದ ಆಕೆ ಒಂದೇ ಸವನೇ ಅಳಲಾರಂಭಿಸಿದಳು. ಅತ್ತು ಅತ್ತು ಪಾಪ ಬವಳಿ ಬಂದಿತವಳಿಗೆ. ಇದೆಲ್ಲ ನೋಡುತ್ತಿದ್ದ ಆಶಾಳಿಗೆ ತನ್ನ ಮೇಲೆಯೇ ಜಿಗುಪ್ಸೆ ಹುಟ್ಟಿತು. ತನ್ನಿಂದಲೇ ಮನೆಯಲ್ಲಿ ರಾದ್ಧಾಂತವಾಯಿತು ಎಂದು ಆಫೀಸಿಗೆ ಹೊರಟು ನಿಂತ ತಂದೆಯ ಪಕ್ಕದಲ್ಲಿ ಹೋಗಿ ಕಾರು ಪ್ರಾರಂಭಿಸಿದಾಗ ಕಿವಿಯಲ್ಲಿ ಏನೋ ಹೇಳಿದಳು.

## ೧೧

"ಪೋಷ್ಟಮನ್ನನು ಬಂದಾಗ ತಂದೆಯ ಬೆನ್ನಿಗೆ ಎಣ್ಣೆ ಸವರುತ್ತ ಕುಳಿತಿದ್ದೆ. ಎರಡು ಪತ್ರಗಳಿದ್ದುದರಿಂದ ಲಗುಬಗೆಯಿಂದ ಕೈ ತೊಳೆದುಕೊಂಡು ನೋಡಿದ್ದೆ. ಒಂದು ಮುಂಬೈ ಕಸ್ಟಮ್ ಆಫೀಸಿನಿಂದ ಬಂದಿತ್ತು" "ಅಮೇರಿಕೆಯಿಂದ ನಿಮ್ಮ ಸಾಮಾನುಗಳು ಬಂದು ಮುಟ್ಟಿವೆ. ಹತ್ತು ದಿನಗಳೊಳಗೆ ಬಿಡಿಸಿಕೊಳ್ಳಿ" ಎಂದು ಬರೆಯಲಾಗಿತ್ತು ಇನ್ನೊಂದು ಪತ್ರ ದೇಶಪಾಂಡೆಯವರದಿತ್ತು. ಅಳುಕುತ್ತಲೇ ಒಡೆದಿದ್ದೆ.

ಪ್ರಿಯ ಅರುಣನಿಗೆ

ಆಶೀರ್ವಾದಗಳು

ನಿಮ್ಮ ಪತ್ರ ಕೈ ಸೇರಿದೆ. ಪತ್ರದಲ್ಲಿ ವ್ಯಕ್ತವಾದ ನಿಮ್ಮ ಸರಳತೆ, ಧೈರ್ಯಗಳನ್ನು ಮೆಚ್ಚಿಕೊಂಡೆ. ಆಶಾಳ ಮದುವೆಯ ವಿಷಯದಲ್ಲಿ ಬಹಳಷ್ಟು ಪ್ರಶ್ನೆಗಳು ಏಳುತ್ತವೆ. ಅವುಗಳನ್ನೆಲ್ಲ ಸಮಕ್ಷಮ ಕುಳಿತು ಇತ್ಯರ್ಥಮಾಡಿದಾಗಲೇ ವಾಸಿ ಎಂದು ನನಗನಿಸುತ್ತದೆ. ಆದ್ದರಿಂದ ನೀವು ಬಿಡುವು ಮಾಡಿಕೊಂಡು ಮುಂಬೈಗೆ ಬಂದಾಗ ಭೆಟ್ಟಿಯಾಗಿ ವಿಚಾರ ವಿಮರ್ಶೆ ಮಾಡೋಣವಂತೆ. ನಿಮ್ಮ ತಂದೆಗೆ ನನ್ನ ನಮಸ್ಕಾರ.

ಎನ್.ಆರ್. ದೇಶಪಾಂಡೆ

ಈ ಪತ್ರದಿಂದ ಒಪ್ಪಿಗೆಯನ್ನು ಸೂಚಿಸಿದಂತಾಯಿತೋ ಅಥವಾ ಅಲ್ಲಗಳೆದಂತಾಯಿತೋ ಎಂದು ನನಗೆ ತಿಳಿಯಲಿಲ್ಲ. ಆದ್ದರಿಂದ ತಿರುತಿರುಗಿ ಓದಿದೆ. ಹೆಚ್ಚು ಅರ್ಥ ಹೊರಡದು. ಹೇಗಿದ್ದರೂ ಸಾಮಾನು ಬಿಡಿಸಿ ತರಲು ಹೋಗಲೇಬೇಕಾಗಿತ್ತು. ಮುಂಬೈಗೆ ಹೋಗುವ ದಿನಾಂಕ ನಿರ್ಧರಿಸಿ ದೇಶಪಾಂಡೆಯವರಿಗೆ ತಂತಿ ಕಳಿಸಿದ್ದೆ. ಮಾರುತ್ತರವಾಗಿ ಶುಕ್ರವಾರ ನಾಲ್ಕು ಗಂಟೆಗೆ ಆಫೀಸಿನಲ್ಲೆ ಭೆಟ್ಟಿಯಾಗುವಂತೆ ದೇಶಪಾಂಡೆಯವರ ಮರುತಂತಿಯೂ ಬಂದಿತ್ತು.

ಅಬ್ಬ! ಮುಂಬೈ ಕಸ್ಟಮ್ ಆಫೀಸಿನ ಅನುಭವವೇ! ಅಲ್ಲಿದ್ದ ನೌಕರ ವರ್ಗವೆಲ್ಲ ಸಾಯಲು ಬಿದ್ದ ಶರೀರಕ್ಕೆ ಎಸಗುವ ಹದ್ದುಗಳಂತೆ ಕಂಡರು. "ಅಲ್ಲಿ ಹೋಗು. ಇಲ್ಲಿ ಹೋಗು, ಅದನ್ನು ಮಾಡು, ಇದನ್ನು ಮಾಡು!" ಎಂದು ಓಡಾಡಿಸಿದರು. ಅಲ್ಲಿದ್ದ ಸಿಪಾಯಿಯೊಬ್ಬ "ಕಸ್ಟಮ್ ಆಫೀಸರರಿಗೆ ನೂರು ರೂಪಾಯಿ ಕೊಟ್ಟು ಬಿಡಿ. ಎಲ್ಲ ಕೆಲಸ ಸುಲಭವಾಗುತ್ತದೆ" ಎಂದ. ಮೊದಲಿನಿಂದ ಇಂಥ ಪದ್ಧತಿಗಳನ್ನೆಲ್ಲ ನಾನು ವಿರೋಧಿಸಿದ್ದೆನಾದ್ದರಿಂದ ಆತನ ಮಾತಿಗೆ ಕಿವಿಗೊಡಲಿಲ್ಲ. ಆದ್ದರಿಂದ ಊಟದ ಬಗ್ಗೆಯೂ ಗಮನವಿಲ್ಲದೆ ಒಂದೇ ಸವನೆ ಓಡಾಡುತ್ತಲೇ ಇದ್ದೆ. ಅಂತೂ ಕೊನಗೆ ಸಂಜೆ ನಾಲ್ಕು ಗಂಟೆಗೆ ನನ್ನ ದೊಡ್ಡ ಟ್ರಂಕ ಹೊರಗೆ ಬಂದಿತು. ಬೀಗ ತೆಗೆದಾಗ ಅರ್ಧ ಟ್ರಂಕು ಖಾಲಿಯಾದದ್ದು ನೋಡಿ ಹೌಹಾರಿದ್ದೆ. ಅಧಿಕಾರಿಯನ್ನು ಪ್ರಶ್ನಿಸಿದಾಗ "ನಮಗೆ ಇದೇ ಸ್ಥಿತಿಯಲ್ಲಿ ಮುಟ್ಟಿತ್ತು......ನೀವು ವಿಮೆ ಇಳಿಸಿದ್ದರೆ ಪಂಚನಾಮೆ ಮಾಡಬಹುದು" ಎಂದು ಅದರ ವಿಮೆ ಇಲ್ಲವೆಂದು ತಿಳಿದಿದ್ದ ಅಧಿಕಾರಿ ನಿರ್ವಿಕಾರವಾಗಿ ಹೇಳಿದ. ಅಮೇರಿಕೆಯಿಂದ ಅಷ್ಟೊಂದು ಸಾಮಾನುಗಳನ್ನು ತಂದದ್ದೇ ತಪ್ಪಾಯಿತೆಂದು ಕಿವಿ ಹಿಂಡಿಕೊಂಡೆ ನಂತರ ಇದ್ದು ಬಿದ್ದ ಸಾಮಾನುಗಳನ್ನು ಬಿಚ್ಚಿ ಪರೀಕ್ಷೆಗೆಂದು ಇಟ್ಟೆ. ಪರೀಕ್ಷಿಸುವ ಅಧಿಕಾರ ಪೆನ್ ಇಲ್ಲವೆಂದು ಸಾಮಾನಿನೊಳಗಿದ್ದ ಪಾರಕರ್ ಬಾಲ್‌ಪೆನ್ ಎತ್ತಿಕೊಂಡ. ನೆಕಟಾಯ್ ಒಂದನ್ನು ಪ್ರಶಂಸಿಸುತ್ತ ಬದಿಗೆ ಸರಿಸಿದ. ಇತರ ಅಧಿಕಾರಿಗಳೂ ಬಂದು ಮುತ್ತಿಕೊಂಡರು. ನಾನು ಏನೂ ಮಾಡುವಂತಿರಲಿಲ್ಲ. ನೂರು ರೂಪಾಯಿ ಕೊಡಲು ನಿರಾಕರಿಸಿದ್ದಕ್ಕೆ ಅದಕ್ಕೂ ಮಿಕ್ಕಿದ ಬೆಲೆಯ ಸಾಮಾನುಗಳನ್ನು ಕಳೆದುಕೊಂಡಿದ್ದೆ. ವೃಥಾ ಒಂದು ದಿನ ಹಾಳು ಮಾಡಿಕೊಂಡೆನೆಂದು ವ್ಯಥೆಯಾಯಿತು. ಭಾರತೀಯ ಅಧಿಕಾರಿಗಳ ಸ್ಥಿತಿಗತಿ ಹೆಚ್ಚಿನ ನೋವನ್ನುಂಟು ಮಾಡಿತ್ತು.

ಮರುದಿನ ಸರಿಯಾಗಿ ನಾಲ್ಕು ಗಂಟೆಗೆ ದೇಶಪಾಂಡೆಯವರ ಆಫೀಸಿನಲ್ಲಿದ್ದೆ. ಆಳಿನ ಹತ್ತಿರ ಪರಿಚಯದ ಚೀಟಿ ಕಳಿಸಿದಾಗ ದೇಶಪಾಂಡೆಯವರು ಸ್ವತಃ ಬಂದು ಕೈ ಕುಲುಕಿ ಆಫೀಸಿನ ತಮ್ಮ ಕೋಣೆಗೆ ಕರೆದೊಯ್ದು "ಇವರು ನನ್ನ ಅಳಿಯ ಮಿ. ನಾಡಕರ್ಣಿ. ಕರಜತದಲ್ಲಿದ್ದಾರೆ" ಎಂದು ಅಲ್ಲಿ ಕುಳಿತಿದ್ದ ಒಬ್ಬರ ಪರಿಚಯ ಮಾಡಿಕೊಟ್ಟರು. ಬಹುಶಃ ಕೌರವ ಪಂಗಡದವರು ಧರ್ಮರಾಜನಲ್ಲಿ ಪೂರ್ಣ ವಿಶ್ವಾಸವಿಡದೇ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಈತನನ್ನು ಕಳಿಸಿರಬೇಕೆಂದು ಮನಸ್ಸಿನಲ್ಲೇ ಲೆಕ್ಕಾಚಾರ ಹಾಕಿಕೊಂಡೆ.

"ಅರುಣ, ನಾನು ಹಿಂದೆ ನೋಡಿದ್ದಕ್ಕಿಂತ ಸಾಕಷ್ಟು ಬದಲಾಗಿರುವಿ. ಬಹುಶಃ ಅಮೇರಿಕನ್ ಹವೆ, ಆಹಾರ ಮೈಗೆ ಹತ್ತಿರಬೇಕು. ಅದಿರಲಿ, ನಿನ್ನ ಪತ್ರ ಓದಿ ನನಗೆ

ಸಂತೋಷವಾಯಿತು. ಆಶಾಳಿಗೆ ಯೋಗ್ಯ ವರ ಸಿಕ್ಕಿರುವ" ಎಂದಾಗ ಹಿರಿ ಅಳಿಯನ ಮುಖ ಕಪ್ಪಿಟ್ಟಿತು. ದೇಶಪಾಂಡೆಯುವರ ಪ್ರಸ್ತಾವನೆಯಿಂದ ನಾನು ಕೆಲಸ ಸುಲಭವಾಯಿತೆಂದು ಲೆಕ್ಕಾಚಾರ ಹಾಕುತ್ತಿದ್ದಾಗ ದೇಶಪಾಂಡೆಯುವರು ಮುಂದುವರಿಸಿದರು. "ನಾವು ಪ್ರಗತಿಪಥದಲ್ಲಿ ಮುಂದುವರಿಯಬೇಕು ಎಂದು ಇಚ್ಛಿಸಿದರೂ ನಮ್ಮ ಸಮಾಜ ಅನುಕೂಲವಾಗಿಲ್ಲ. ಇದೇ ವಿಷಯವಾಗಿ ಮೊನ್ನೆ ಆಶಾಳೊಂದಿಗೆ ಬಹಳ ಹೊತ್ತು ಚರ್ಚಿಸಿದೆ. ಬಹುಶಃ ನಮ್ಮಲ್ಲಿ ಒಮ್ಮತ ಇದೆಯೆಂದು ತೋರಿತು........ಅಂದಹಾಗೆ ಒಂದು ಪ್ರಶ್ನೆ. ಭಾರತದಲ್ಲಿದ್ದು ಮುಂದೇನು ಮಾಡಬೇಕೆಂದಿರುವಿ?"

"ಹತ್ತಾರು ಕಡೆ ನೌಕರಿಗಾಗಿ ಅರ್ಜಿ ಕಳಿಸಿರುವೆ. ಇನ್ನೂ ಯಾವ ನಿರ್ಧಾರವೂ ಆಗಿಲ್ಲ. ಭಾರತದಲ್ಲಿ ನೌಕರಿ ದೊರೆಯುವದು ಅಷ್ಟು ಸುಲಭವಲ್ಲವೆಂದು ನೀವೂ ತಿಳಿದುಕೊಂಡ ಮಾತು. ವಿಜ್ಞಾನಿಗಳ ಪಂಗಡ (Scientists Pool) ಕ್ಕೂ ಅರ್ಜಿ ಸಲ್ಲಿಸಿರುವೆ. ಎಲ್ಲೂ ಸಿಗದಿದ್ದರೆ ಈ Poolದ ನೌಕರಿ ಸಿಕ್ಕೇ ಸಿಗುವದು" ಎಂದು ಆಶಾಳೊಡನೆ ಸಂಸಾರ ಮಾಡುವ ಯೋಗ್ಯತೆ ಇದೆ ಎಂದು ತೋರಿಸಿಕೊಳ್ಳಲು ಯತ್ನಿಸಿದ್ದೆ. "ನೌಕರಿ ಹುಡುಕುವದರಲ್ಲಿ ನನ್ನದೇನಾದರೂ ಸಹಾಯ ಬೇಕಿದ್ದರೆ ಹೇಳು. ಸಹಾಯ ಮಾಡಲು ನಾನು ಸದಾ ಸಿದ್ಧ.........ಅಂದ ಹಾಗೆ ನಾನು ಏನು ಹೇಳುತ್ತಿದ್ದೆ? ಹೌದು ಸಮಾಜದ ವಿಷಯವಾಗಿ ಹೇಳುತ್ತಿದ್ದೆ. ನಾವು ಮುಂದುವರಿದವರಂತೆ ವಿದೇಶಿಯ ವಸ್ತ್ರಗಳನ್ನು ಧರಿಸಲಾರಂಭಿಸಿದರೂ ನಮ್ಮ ಆಚಾರ ವಿಚಾರಗಳು ಇನ್ನೂ ಬಾದರಾಯಣ ಕಾಲದವೇ ಆಗಿ ಉಳಿದಿವೆ. ನಿನ್ನ ಮತ್ತು ಆಶಾಳ ಮದುವೆ ಆಗಬಹುದೆಂಬ ಗಾಳಿ ಸುದ್ದಿಯಿಂದಲೇ ನಮ್ಮ ಚಿಕ್ಕ ಸಮಾಜದಲ್ಲಿ ಅಲ್ಲೋಲಕಲ್ಲೋಲವೆದ್ದಿದೆ. ಆಪ್ತರಿಂದ ದುಗುಡದ ಪತ್ರಗಳು ಬರುತ್ತಿವೆ. ಜಾತಿಯವನನ್ನೇ ಹುಡುಕಿ ಕೊಡುವೆವೆಂದು ಗೆಳೆಯರ ಆಶ್ವಾಸನ ಪತ್ರಗಳು ಬರುತ್ತಿವೆ. ಈ ಮದುವೆಗೆ ನಮ್ಮ ಸ್ವಾಮಿಗಳ ಆಶೀರ್ವಾದ ದೊರೆಯಲಿಕ್ಕಿಲ್ಲವೆಂದು ನಮ್ಮ ರಾಯಸದ ಅಧಿಕಾರಿ ಅಪ್ಪಣೆ ಕೊಡಿಸಿದ್ದಾರೆ. ಇಷ್ಟಾದರೂ ನಾನು ಬಗ್ಗಿರಲಿಲ್ಲ. ಆದರೆ ನಮ್ಮಾಕೆ ಸರ್ವಥಾ ಈ ಮದುವೆ ನಡೆಯಗೊಡುವದಿಲ್ಲವೆಂದು ಪಟ್ಟು ಹಿಡಿದಿದ್ದಾಳೆ. ಮನೆಯಲ್ಲಂತೂ ರಣರಂಗದ ಭೀಷಣತೆ ನೆಲೆಸಿದೆ. ಈ ನಿಮಿತ್ತ ಮಗ-ಸೊಸೆಗೂ ಮನಸ್ತಾಪವಾಗಿ ಮಗನ ಕೈ ಸೊಸೆಯ ತನಕ ಬೀಸಿತು. ಇದನ್ನೆಲ್ಲ ಕಂಡು ಆಶಾ ರೋಸಿಹೋಗಿದ್ದಾಳೆ. ತನ್ನೊಬ್ಬಳ ಸುಖಕ್ಕಾಗಿ ಉಳಿದೆಲ್ಲವರ ಸುಖ ಹಾಳು ಮಾಡಲು ಸಿದ್ಧಳಿಲ್ಲವೆಂದು ನನಗೆ ಹೇಳಿದ್ದಾಳೆ. ಅಲ್ಲದೇ ಈ ವಿಷಯವಾಗಿ ನಿನಗೂ ಒಂದು ಪತ್ರ ಕಳಿಸಿದ್ದಾಳೆ" ಎಂದು ಕಿಸೆಯಿಂದ ಒಂದು ಪತ್ರವನ್ನು ಎಳೆದು ನನ್ನ ಕೈಗೆ ಕೊಟ್ಟರು.

"ಅರುಣ,

ಕಳೆದ ಎರಡು-ಮೂರು ವಾರಗಳಿಂದ ನಡೆದ ಘಟನೆಗಳಿಂದಾಗಿ ನನಗೆ ಬಹಳ ನಿರಾಶೆಯಾಗಿದೆ. ಎಲ್ಲರ ವಿರುದ್ಧವಾಗಿ ನಿಂತು ನಾವು ಮದುವೆಯಾದರೆ ಸುಖಿಯಾಗಬಲ್ಲೆವೇ ಎಂದು ದೀರ್ಘವಾಗಿ ಯೋಚಿಸಿದೆ.

ಎದ್ದು ನಿಂತ ಸಮಾಜ, ಇಷ್ಟು ಸುಲಭದಲ್ಲಿ ತನ್ನ ಸೋಲನ್ನು ಒಪ್ಪಿಕೊಂಡೀತು ಎಂದು ನನಗನಿಸುವದಿಲ್ಲ. ನಮ್ಮನ್ನು ಎಲ್ಲಿದ್ದರೂ ಬೆನ್ನಟ್ಟಿ ಬಂದು ಕಾಡಬಹುದು. ಜೀವನದ ಸಮಸ್ಯೆಯನ್ನು ಯಾವ ವಿಧದಲ್ಲೂ ಬಿಡಿಸಲಾಗದ ಮದುವೆಯಿಂದ ಏನು ಪ್ರಯೋಜನ? ನನ್ನ ಸ್ವಾರ್ಥಕ್ಕಾಗಿ ಮನೆಯ ಇತರರಿಗೆಲ್ಲ ದುಃಖಕ್ಕೊಳಪಡಿಸಲಾರೆ. ನೀವು ಇಷ್ಟೆಲ್ಲ ಕಲಿತಿದ್ದೀರಿ, ಉತ್ತಮ ಭವಿಷ್ಯವಿದೆ. ನಿಮಗೆ ನನಗಿಂತ ಉತ್ತಮ ಪತ್ನಿ ಸಿಗವದರಲ್ಲಿ ಯಾವ ಸಂದೇಹವಿಲ್ಲ. ಆದ್ದರಿಂದ ನೀವು ನನ್ನನ್ನು ಮರೆತು ಬಿಡಿ. ದೇವರು ಸದಾ ನಿಮ್ಮನ್ನು ಸುಖಿಯಾಗಿಡಲಿ ಎಂದು ಬಯಸುವೆ."

ಆಶಾ

ಪತ್ರ ಓದಿ ಮುಗಿಸಿ ಇಬ್ಬರನ್ನೂ ದಿಟ್ಟಿಸಿದೆ. ದೇಶಪಾಂಡೆಯವರು ಮುಖ ಕೆಳಗೆ ಮಾಡಿ ಕುಳಿತಿದ್ದರು. ಅಳಿಯಂದಿರು ಮಾಡಿನ ಹಂಚು ಎಣಿಸುತ್ತಿದ್ದರು.

"ನೋಡಿ, ಹಸ್ತಾಕ್ಷರಗಳೇನೋ ಆಶಾಳವೇ. ಆದರೆ ಪತ್ರದ ಒಕ್ಕಣಿಕೆ ಮಾತ್ರ ಅವಳದಲ್ಲ ಎಂದು ನನಗೆ ಗೊತ್ತು. ಇದನ್ನು ಯಾರು ಬರೆಸಿದರು?" ನನ್ನ ಪ್ರಶ್ನೆಗೆ ದೇಶಪಾಂಡೆಯವರು ಉತ್ತರ ಕೊಡುವದರಲ್ಲಿದ್ದರು. ನಡುವೆಯೇ ಅಳಿಯಂದಿರು "ಆಶಾಳನ್ನು ನೀವು ಮಂಕು ಕವಿಸಿದಂತಿದೆ. ಆಶಾಳ ಒಕ್ಕಣಿಕೆಯ ಪರಿಚಯವಿದೆಯೆಂದರೆ ಬಹಳ ದಿನಗಳಿಂದ ಪತ್ರವ್ಯವಹಾರವಿದೆಯೆಂದು ಅಂದಹಾಗಾಯಿತು ಯಾರು ಬರೆಸಿದರು, ಯಾರು ಬರೆದರು ಎಂದೆಲ್ಲ ಅಧಿಕ ಪ್ರಸಂಗ ನಿನಗೆ ಯಾಕೆ? ಪತ್ರದಲ್ಲಿ ಬರೆದಂತೆ ಆಶಾಳನ್ನು ಮರೆತು ಬಿಡಬೇಕು ನೀನು" ಎಂದು ಗುಡುಗಿದರು. "ಮರೆಯದಿದ್ದರೇ?" ಕೂಡಲೇ ನಾನೆಂದೆ.

"ಇಷ್ಟೊಂದು ಜಂಭವೇ ನಿನಗೆ? ಹುಡುಗಿಯನ್ನು ಮೋಸಗೊಳಿಸಿ ಓಡಿಸಿಕೊಂಡು ಹೋಗಲೆತ್ನಿಸಿದ ಆರೋಪ ನಿನ್ನ ಮೇಲೆ ಬಂದೀತು! ಜೈಲಿನಲ್ಲಿ ಬೆಚ್ಚಗೆ ಇರಬೇಕಾದೀತು!" ಎಂದು ಭುಜ ಹಾರಿಸಿದನಾತ.

"ಅಳಿಯ ಮಹಾಶಯ-ಕಾಯದೆ ಕಾನೂನುಗಳೆಲ್ಲ ನಿಮ್ಮಲ್ಲಿಗೇ ಮುಗಿಯಲಿಲ್ಲ. ನನಗೂ ಸ್ವಲ್ಪ ಮಟ್ಟಿಗೆ ತಿಳಿದಿವೆ. ಆಶಾಳು ಪ್ರೌಢಳಾಗಿದ್ದಾಳೆ. ಅಲ್ಪ ವಯಸ್ಕಳಲ್ಲ. ಅವಳು ಒಪ್ಪಿದವನೊಡನೆ ವಿವಾಹ ಮಾಡಿಕೊಳ್ಳುವ ಅಧಿಕಾರ ಅವಳಿಗಿದೆ. ಅಲ್ಲದೇ

ನನ್ನನ್ನು ಮದುವೆಯಾಗುತ್ತೇನೆಂದು ಆಕೆ ನನಗೆ ಬರೆದ ಹತ್ತಾರು ಕಾಗದಗಳಿವೆ. ಇವನ್ನೆಲ್ಲ ಆಧಾರವಾಗಿ ಕೋರ್ಟಿನಲ್ಲಿ ಮೊಕದ್ದಮೆ ಹೂಡಿದರೆ ನೀವು. ನಿಮ್ಮ ತ್ತೆ, ನಿಮ್ಮ ಇತರ ಜನರೆಲ್ಲ ನನ್ನ ಕಾಲು ಹಿಡಿಯುವ ಸಂದರ್ಭ ಬಂದೀತು! ನಾನು ಸುಸಂಸ್ಕೃತನಾದ್ದರಿಂದ ಇಂಥ ಹೀನ ಕೆಲಸ ಮಾಡಲಾರೆ. ಆದರೆ ಹೆಚ್ಚು ಕಡಿಮೆ ಮಾತನಾಡಿದರೆ ಸಹಿಸಲಾರೆ" ಎಂದು ನಾನೂ ಗರ್ಜಿಸಿದೆ.

ವಿಷಯ ಮಿತಿಮೀರಿ ಹೋಗುವದನ್ನು ನೋಡಿ ದೇಶಪಾಂಡೆಯವರು ಅಳಿಯನಿಗೆ ಬಾಯಿಮುಚ್ಚುವಂತೆ ಆಜ್ಞೆಯಿತ್ತರು. ಅಳಿಯನಿಗೆ ಅಪಮಾನವೆನಿಸಿ ಅವನು ಎದ್ದು ಸರಸರನೇ ಹೋಗಿಬಿಟ್ಟ.

"ಕ್ಷಮಿಸಿರಿ ಅರುಣ, ನನ್ನ ಅಳಿಯ ಮುಂಗೋಪಿ. ಅವನಿಗೆ ಇಲ್ಲಿ ಬರಲು ಕೊಡಲೇಬಾರದಿತ್ತು. ನನ್ನ ಎರಡನೇ ಅಳಿಯನಾದರೂ ನಿನ್ನಂತಹ ಶಾಂತ ಸ್ವಭಾವದವನು ದೊರೆಕಿಯಾನೆಂದು ಆಶಿಸಿದ್ದೆ.....ಆದರೆ ಇಂಥ ಯೋಗ ನನ್ನ ಹಣೆಯಲ್ಲಿ ಬರೆಯಲಿಲ್ಲವೆಂದು ತೋರುತ್ತದೆ. ಆಶಾ, ಊಟ ನಿದ್ರೆಗಳನ್ನೂ ಸರಿಯಾಗಿ ಮಾಡದೇ ಬಡಕಲಾಗಿ ಹೋಗಿದ್ದಾಳೆ. ಆಶಾ, ನನ್ನ ಅಕ್ಕರೆಯ ಮಗಳು. ಆದರೆ ಆಕೆ ಪ್ರೀತಿಸಿದವನನ್ನು ಮದುವೆಯಾಗಲು ಒಪ್ಪಿಗೆ ಕೊಡುವಷ್ಟು ಸ್ವಾತಂತ್ರ್ಯ ನನಗಿಲ್ಲದೇ ಹೋಗಿದೆ. ನನ್ನ ಪತ್ನಿ-ಅಳಿಯ-ಮಗ ಕೂಡಿ ಆಶಾಳ ಮೇಲೆ ಯುದ್ಧವನ್ನೇ ಹೂಡಿದ್ದಾರೆ. ಪಾಪ ಆಶಾ ಏನು ಮಾಡಬೇಕು? ನನ್ನ ಇಚ್ಛೆಯ ವಿರುದ್ಧವಾಗಿ ಈ ಮದುವೆ ನಡೆಯದಿರಲೆಂದು ಸಮ್ಮತಿಸಿದ್ದಾಳೆ. ನನ್ನನ್ನು, ನನ್ನ ಆಶಾಳನ್ನೂ ಕ್ಷಮಿಸು ಅರುಣ" ಗದ್ಗದಿತ ಕಂಠರಾಗಿ ನನ್ನನ್ನು ತಬ್ಬಿಕೊಂಡರು.

"ಆಶಾಳನ್ನು ಸುಖಿಯಾಗಿಡುವುದಕ್ಕಿಂತ ಹೆಚ್ಚಿನ ಆಪೇಕ್ಷೆ ನನಗಿಲ್ಲ. ನನ್ನ ತ್ಯಾಗದಿಂದ ಅವಳು ಸುಖಿಯಾಗುವದಿದ್ದರೆ ನಿಮ್ಮೆಲ್ಲರ ಸೂಚನೆಗೆ ನನ್ನ ಅನುಮೋದನೆ ಇದೆ" ಎಂದು ಎದ್ದು ನಿಂತೆ. ದೇಶಪಾಂಡೆಯವರು ಇನ್ನೊಮ್ಮೆ ನನ್ನನ್ನು ತಬ್ಬಿಕೊಂಡು ಕಣ್ಣೀರು ಹಾಕಿದರು.

ಹೊರಟು ನಿಂತಾಗ 'ನೀವೆಲ್ಲಿ ಹೋಗಬೇಕು. ಕಾರಿನಲ್ಲಿ ಬಿಟ್ಟು ಬರುವೆ' ಅಂದಾಗ "ಧನ್ಯವಾದಗಳು, ನನಗೆ ಸ್ವಲ್ಪ ಏಕಾಂತ ಬೇಕು" ಎಂದು ಯಾವದೋ ರಸ್ತೆ ಹಿಡಿದು ಗೊತ್ತುಗುರಿಯಿಲ್ಲದೇ ನಡೆದು ಬಿಟ್ಟಿದ್ದೆ.

ಮರೀನ ಡ್ರಾಯಿವ್‌ಗೆ ಬಂದೆ. ಕಾಲು ಸೋತು ಹೋಗಿದ್ದವು. ಚೌಪಾಟಿಯ ಜನಜಂಗುಳಿ ಬಿಟ್ಟು ಕಡಲಿನ ಅಂಚಿನಲ್ಲಿ ನಡೆಯುತ್ತ ಒಂದೆಡೆಗೆ ಹೋಗಿ ಕುಳಿತಿದ್ದೆ. ದಂಡೆಗೆ ಬಂದು ಬಂದು ಅಪ್ಪಳಿಸುವ ತೆರೆಗಳನ್ನೇ ನೋಡಿದ್ದೆ. ಈ ತೆರೆಗಳು

ಅಪ್ಪಳಿಸಿದಷ್ಟು ತಿರುಗಿ ಏಳುವವು. ತೆರೆಗಳಿಗೆ ಸಮೀಪವಾಗಿದ್ದ ಟೆಟ್ರಾಪೊಡದ ಮೇಲೆ ಕುಳಿತಿದ್ದೆ. ಅಬ್ಬರದ ತೆರೆಗಳು ಹತ್ತಿರ ಬಂದು ಮೆತ್ತಗಾಗಿ ನನ್ನ ಕಾಲುಗಳನ್ನು ಚುಂಬಿಸಿ ಮರಳುತ್ತಿದ್ದವು.

ಮಾನವ ಕೊಟ್ಟ ದುಃಖಗಳಿಗೆ ನಿಸರ್ಗ ಸಾಂತ್ವನಗೆಯ್ಯುವಂತೆ ತೋರಿತು. ಒಮ್ಮೊಮ್ಮೆ ತೆರೆಗಳು ತುಂಬಿದ ಆತ್ಮೀಯತೆಯಿಂದ ಬಂದು ಬಟ್ಟೆಗಳನ್ನೂ ತೊಯ್ಯಿಸಿ ಬಿಡುತ್ತಿದ್ದವು. ಇದೆಲ್ಲದರ ಪರಿವೆಯಿಲ್ಲದೇ ಆಲೋಚನಾಮಗ್ನನಾಗಿದ್ದೆ.

“ವಿಜಯನಂತಹ ಪೋಲಿ ಹುಡುಗ ಹತ್ತೆಂಟು ಹುಡುಗಿಯರೊಡನೆ ತಿರುಗಾಡಿ ನಾಲ್ಕೈದು ಹುಡುಗಿಯರೊಡನೆ ಶರೀರ ಸಂಬಂಧ ಬೆಳೆಸಿದ. ಸಿಗರೇಟು ಸೇದಲು ಕಲಿತ, ಸೆರೆ ರೂಢಿ ಮಾಡಿಕೊಂಡ, ಹುಡುಗಿಯರೊಡನೆ ಮೋಜಾಗಿದ್ದ. ಹುಡುಗಿಯರೊಂದಿಗೆ ತಿರುಗಾಡಲೆಂದೇ ಕಾರನ್ನು ಖರೀದಿಸಿದ. ದೊಡ್ಡ ಮನೆಯನ್ನು ವಿಲಾಸಕ್ಕೆಂದು ಬಾಡಿಗೆಗೆ ಹಿಡಿದ ವಿದ್ಯಾಭ್ಯಾಸದಲ್ಲಿ ಹಿಂದೆ ಬಿದ್ದ. ಆದರೆ ಅವನಿಗೆ ಯಾವ ದುಃಖವೇ ಇಲ್ಲ. ಇಷ್ಟೆಲ್ಲ ಕಾರಭಾರ ಮಾಡಿಯೂ ಒಬ್ಬ ಹುಡುಗಿಯೂ ಬಲೆಗೆ ಬೀಳಲಿಲ್ಲ. ಅವನ ತಂದೆ ತಾಯಿಗಳೇ ಅವನಿಗೊಂದು ಕನ್ಯೆ ಗೊತ್ತು ಮಾಡಿ ಭಾರತಕ್ಕೆ ಬರುವಂತೆ ತಿಳಿಸಿದರು ಮದುವೆಯಾಗಿ ಈಗ ನೂತನ ದಂಪತಿಗಳು ಸ್ವೀಝರ್ಲಂಡಿಗೆ ಮಧುಚಂದ್ರಕ್ಕೆ ಹೋಗಿದ್ದರಂತೆ. ಆ ಮೇಲೆ ಕೆನಡಾದಲ್ಲಿ ನೌಕರಿ ಸಿಕ್ಕಿದ್ದರಿಂದ ಅಲ್ಲಿಯೇ ನೆಲೆಸುತ್ತಾರಂತೆ. ಆದರೆ ನಾನೇನು ಮಾಡಿದೆ ಜೀವನದಲ್ಲಿ? ಮೆಚ್ಚಿಬಂದ ಹುಡುಗಿಯನ್ನು ನಂಬಿ, ಆದರ್ಶವಾದದ ಹಿಂದೆ ಬಿದ್ದು ಬ್ರಹ್ಮಚಾರಿಯ ಜೀವನ ನಡೆಸಿದೆ. ಅಮೇರಿಕೆಯಂತಹ ದೇಶದಲ್ಲಿ ಕಠೋರ ಸಾಧನೆ ಮಾಡಿ ವಿದ್ಯಾಭ್ಯಾಸದಲ್ಲಿ ತೊಡಗಿ ಉಚ್ಚ ಪದವಿ ಪಡೆದೆ. ಸಂಶೋಧನೆಗಳನ್ನು ಮಾಡಿದೆ. ನಿಜ. ಆದರೆ ಏತಕ್ಕಾಗಿ? ಎಂದು ಒಮ್ಮೆಯಾದರೂ ಯೋಚಿಸಿದೆನೇ? ಮಾನಸಿಕ ಶಾಂತಿ ಕೊಡದ ಪದವಿ-ಸಂಶೋಧನೆಗಳಿಂದ ಏನಾಗಬೇಕು? ನನ್ನ ಭಾರತ, ನನ್ನ ದೇಶಬಾಂಧವರು, ನನ್ನ ಹುಟ್ಟುನಾಡಿನ ಸೇವೆ ಮಾಡಬೇಕು! ಎಂಬ ಜೊಳ್ಳು ಹಂಬಲ, ಆದರ್ಶಗಳು ನನ್ನನ್ನು ಭಾರತಕ್ಕೆ ಮರಳುವಂತೆ ಮಾಡಿದವು. ನೂರು ರೂಪಾಯಿ ಕಸ್ಟಮ ಆಫೀಸರನಿಗೆ ಕೊಡಲು ನಿರಾಕರಿಸಿ ನೂರಾರು ರೂಪಾಯಿಯ ಒಳ್ಳೆಯ ಸಾಮಾನು ಕಳಕೊಂಡೆ. ಅವರೆಲ್ಲ ನನ್ನನ್ನು ಎಂತಹ ಮೂರ್ಖ! ಎಂದುಕೊಂಡಿರಬೇಕು. ಆಶಾಳ ವಿಷಯವೂ ಅಷ್ಟೆ. ತಿಳಿದೂ ತಿಳಿದೂ ಪ್ರೇಮಬಂಧನದಲ್ಲಿ ಸಿಕ್ಕಿಬಿದ್ದೆ. ಅವಳು ರಜಿಸ್ಟರ ಮದುವೆ ಮಾಡಿಕೊಳ್ಳೋಣವೆಂದು ಹಲವಾರು ಬಾರಿ ಸೂಚಿಸಿದರೂ ನಾನೇ ಬೇಡವೆಂದೆ. ಈಗಲಾದರೂ ಅಷ್ಟೆ. ಕೋರ್ಟಿಗೆ ಹೋಗುತ್ತೇನೆಂದರೆ ಅವರೆಲ್ಲ ಮದುವೆಗೆ ಒಪ್ಪಲೇಬೇಕಾಗಿತ್ತು. ಸಂಭಾವಿತನಂತೆ ಅವರು ಹೇಳಿದ್ದಕ್ಕೆಲ್ಲ ತಲೆದೂಗಿ, ಬೆಪ್ಪನಂತೆ

ತಿರುಗಿ ಬಂದೆ. ಇದೇ ತಾನೇ ನನ್ನ ಸಾಧನೆ. ಏನು ಮಾಡಿದಂತಾಯಿತು? ಇಷ್ಟೆಲ್ಲ ವರ್ಷ ಏನು ಮಾಡಿದಂತಾಯಿತು......ನಾನು ಇದ್ದರೂ ಅಷ್ಟೆ, ಸತ್ತರೂ ಅಷ್ಟೆ" ಎಂದುಕೊಳ್ಳುತ್ತಿದ್ದಾಗ ದೊಡ್ಡ ತೆರೆಯೊಂದು ಧಾವಿಸಿ ಬರುತ್ತಿತ್ತು.

* * *

ಊರಿಗೆ ಮರಳಿ ಬಂದೆ. ಒಂದೇ ತಿಂಗಳಿನಲ್ಲಿ ದುಂಡುದುಂಡಗೆ ಗಟ್ಟಿ ಮುಟ್ಟಾದವನು ಸೊರಗಿ ಹೋಗಿದ್ದೆ. ತಂದೆಯವರು ಹೀಗೇಕೆ? ಎಂದು ಯೋಚಿಸಿ ಕಂಗಾಲಾದರು. ಬಹುಶಃ ನೌಕರಿ ಸಿಗದ್ದರಿಂದ ಹಿಗಿರಬಹುದು ಎಂದುಕೊಂಡಿರಬೇಕು. ಎರಡು ಕಡೆ ಹೋಗಿ "ಇಂಟರ್‌ವ್ಯೂ" ಕೊಟ್ಟಿದ್ದಾಯಿತು. ಆದರೆ ಯಾವ ದೊಡ್ಡ ಮನುಷ್ಯರ ಶಿಫಾರಸು, ಪರಿಚಯ ಪತ್ರ ವಸೀಲಿಗಳಿಲ್ಲದ ನನಗೆ ಯಾರು ಕೇಳಬೇಕು? ಎಲ್ಲಕಡೆ ನಿರಾಶೆಯೇ!

ಮೂರು ನಾಲ್ಕು ತಿಂಗಳು ಕಾದನಂತರ 'ವಿಜ್ಞಾನಿ ಪಂಗಡದ (Scientst's pool officer)' ಅಧಿಕಾರಿಯಾಗಿ ನೇಮಿಸಿದ್ದಾಗ ಪತ್ರ ಬಂದಿತು ಪತ್ರ ಮುಟ್ಟಿದ ೧೫ ದಿವಸಗಳೊಳಗಾಗಿ ಬೆಂಗಳೂರಿನ ಸಂಸ್ಥೆಯೊಂದರಲ್ಲಿ ಹಾಜರಾಗಬೇಕೆಂದು ಭಾರತ ಸರ್ಕಾರ ನಿರ್ದೇಶ ಕೊಟ್ಟಿತ್ತು. ಅಂತೂ ಕೊನೆಗೆ ಮಾಡಲು ಕೆಲಸವಿದ್ದರೆ ಇಲ್ಲಸಲ್ಲದ ವಿಚಾರಗಳಿಂದ ಬಿಡುವು ಸಿಕ್ಕೀತೆಂದು ಆನಂದವಾಗಿತ್ತು. ಎರಡು ದಿನಗಳಲ್ಲಿ ಹೊರಟು ಬೆಂಗಳೂರು ಸೇರಿಕೊಂಡದ್ದಾಗಿತ್ತು. ಅಲ್ಲಿಯ ಜನರು ನನ್ನನ್ನು ಅಷ್ಟೊಂದು ಉತ್ಸುಕತೆಯಿಂದ ಬರಮಾಡಿಕೊಳ್ಳಲಿಲ್ಲ. ಅಲ್ಲೂ ಪಂಗಡಗಳು. ಒಬ್ಬರಿಗೊಬ್ಬರು ಕಡೆಗಾಣಿಸಿ ನೋಡುವದೇ ಅವರ ವಿನೋದವಾಗಿತ್ತು.

ನಾನು ಯಾವ ಪಂಗಡಕ್ಕೂ ಸೇರಲಿಲ್ಲ. ಎರಡೂ ಕಡೆ ಅಲಕ್ಷ್ಯ ತೋರಿದ್ದರಿಂದ ನಾನೊಬ್ಬನೇ ಸಂಸ್ಥೆಯಲ್ಲಿ ಬೇರ್ಪಟ್ಟ ಪ್ರಾಣಿಯಾಗಿ ಉಳಿದೆ.

ಸಂಸ್ಥೆಯ ಮೇಲಧಿಕಾರಿಗಳನ್ನು ಭೆಟ್ಟಿಯಾಗಿ ನಂತರ ನನ್ನ ಅಧಿಕಾರಿಯನ್ನು ಭೆಟ್ಟಿಯಾಗಲು ಹೋದಾಗ ಉತ್ತಮ ಸೂಟ ಧರಿಸಿದ, ಪೇಠಾಧಾರಿ ಹಣೆಗೆ ತಿಲಕವಿಟ್ಟ ವ್ಯಕ್ತಿ ಕನ್ನಡಕ ಮೇಲಕ್ಕೇರಿಸಿ ನನ್ನನ್ನು ತೀಕ್ಷ್ಣವಾಗಿ ನೋಡಿತ್ತು. ಕೈಗೆ ಕಾಗದ ಕೊಟ್ಟೆ. ಅದನ್ನು ಓದಿ, ನನಗೆ ಎದುರಿಗಿನ ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೇಳಿ ನಿಟ್ಟುಸಿರು ಬಿಟ್ಟು, 'ನೀವೇ ಎಸ್. ಅರುಣರೇ! ಸರಕಾರದ ಅಳಿಯತನ ಒಪ್ಪುವ ತನಕ ನಿಮಗೆ ಇನ್ನೆಲ್ಲಿಯೂ ನೌಕರಿ ದೊರೆಯಲಿಲ್ಲವೇ?' ಇಲ್ಲಿ ನಿಮ್ಮ ವಿಷಯದಲ್ಲಿ ಸಂಶೋಧನೆಯೇ ನಡೆಯುವದಿಲ್ಲ.......ನೀವೇನು ಮಾಡಬೇಕೆಂದಿರುವಿರಿ?

.....ಏನೋ ಸರಕಾರ Scientst poolದ ಅನ್ನಸತ್ರ ನಡೆಸುತ್ತಿದೆ. ಅದಕ್ಕೇ ಜನ ಧಾವಿಸಿಬರುವದು! ಎಂದರು. ಕಪಾಳಿಗೆ ಹೊಡೆಯುವಂತಿದ್ದ ಈ ಮಾತಿನಿಂದ ಬೆಪ್ಪಾದೆ. 'ನೋಡಿ', ಸರಕಾರ ನನ್ನ ಸೇವೆಯನ್ನು ನಿಮ್ಮ ಸಂಸ್ಥೆಗೆ ಕೊಡಮಾಡಿದೆ. ಸಂಬಳವನ್ನೇನೂ ನೀವು ವೈಯಕ್ತಿಕವಾಗಿ ಕೊಡಬೇಕಾಗಿಲ್ಲವಲ್ಲ? ಎಂದು ಮರುಸವಾಲು ಹಾಕಿದಾಗ ಗಂಟೆ ಬಾರಿಸಿದರು.

"ನೋಡಪ್ಪ, ಈ ಸಾಹೇಬರಿಗೆ ಪಕ್ಕದ ಕೋಣೆಗೆ ಕರೆದುಕೊಂಡು ಹೋಗು. ಸುಖವಾಗಿ ಕೂಡ್ರಲಿ" ಎಂದು ಬಂದ ಪ್ಯೂನನಿಗೆ ಅಪ್ಪಣೆ ಕೊಡಿಸಿದರು. ನನ್ನ ಕೋಪ ನೆತ್ತಿಗೇರಿತ್ತು. ಆದರೂ ಮರು ಮಾತಿಲ್ಲದೇ ಎದ್ದು ಹೋಗಿ ನನಗೆ ತೋರಿಸಿದ ಕೋಣೆಯಲ್ಲಿ ಕೂಡ್ರಲಾರಂಭಿಸಿದ್ದೆ.

ಯಾರೋ ಉತ್ತರ ಕರ್ನಾಟಕದ ವ್ಯಕ್ತಿ ಬಂದಿದ್ದರೆಂದು ಕೇಳಿ ತಿಳಿದ ಇಬ್ಬರು ಉತ್ತರ ಕನ್ನಡಿಗರು ಹುಡುಕುತ್ತ ನಾನಿದ್ದಲ್ಲಿ ಬಂದರು. ತಮ್ಮ ಪರಿಚಯ ಮಾಡಿಕೊಟ್ಟು ಕಾಫಿಗೆ ಕರೆದೊಯ್ದು ಸಂಸ್ಥೆಯ ಒಳನೋಟದ ಪರಿಚಯ ಮಾಡಿಕೊಟ್ಟರು. ನಾನು ನನ್ನ ಮೊದಲ ಅನುಭವವನ್ನು ವಿಚಾರಿಸಿದಾಗ ಅಲ್ಲಿ ಉತ್ತರ ಕರ್ನಾಟಕದವರ ಬಗ್ಗೆ ಸಹನೆಯಿಲ್ಲ. ನಿಮ್ಮ ಬಾಸ್ (Boss) ಅಂತೂ ಪಕ್ಕಾ ತಲೆತಿರುಕ. ಮಂತ್ರಿಯವರ ಅಳಿಯನಾದ್ದರಿಂದ ದೊಡ್ಡ ಅಧಿಕಾರಿಯಾಗಿರುವ. ಎದೆ ಸೀಳಿದರೆ ಒಂದಕ್ಷರ ದೊರೆಯದು. ಅವರನ್ನು ಸಾರ್! ಸಾರ್! ಎಂದು ಸಂಬೋಧಿಸಿ ಕೋಣೆಯತ್ತ ಬಂದಾಗ ಎದ್ದು ನಿಂತಾಗ ತುಂಬ ಖುಷಿಯಾಗುತ್ತದೆ ಪ್ರಾಣಿಗೆ! ಎಂದು ಸೂಚ್ಯವಾಗಿ ಹೇಳಿದರು.

ಸಂಸ್ಥೆಯಲ್ಲಿ ಕೆಲಸವಿಲ್ಲದೇ ಕಾಲಹರಣ ಮಾಡುವದು, ಒಂದು ಸಮಸ್ಯೆಯಾಯಿತು. ಸಂಸ್ಥೆಯಲ್ಲಿ ಹರಟೆಯಲ್ಲಿ ಹೆಚ್ಚಿನ ವೇಳೆ ಹೋಗುತ್ತಿರುವದು ವೈಶಿಷ್ಟ್ಯವಾಗಿತ್ತು. ಕೆಲಸ ಸುರು ಮಾಡಲೆಂದು ಸಾಮುಗ್ರಿಗಳನ್ನು ಜೋಡಿಸುವದರಲ್ಲಿದ್ದಾಗ "ದಮ್ಮಿನಿಂದ ತಂದೆಯವರು ತುಂಬ ಅಶಕ್ತರಾಗಿದ್ದಾರೆ. ಸಾಧ್ಯವಾದರೆ ಕೆಲ ದಿನಗಳ ಮಟ್ಟಿಗೆ ಬಂದು ಹೋಗು" ಎಂದು ಅಕ್ಕನ ಪತ್ರ ಬಂದಿತ್ತು. ಅನುಮಾನಿಸುತ್ತಲೇ ನಂಜುಂಡಯ್ಯನವರ ಹತ್ತಿರ ಹೋದಾಗ "ನನಗೆ ಗೊತ್ತು ನಿಮ್ಮ ಗಳ ಹಣೆಬರಹ! ಸಂಸ್ಥೆ ಸೇರಿ ವಾರ ಕೂಡ ಕಳೆದಿಲ್ಲ. ಈಗಾಗಲೇ ರಜೆ ಕೇಳುತ್ತಿದ್ದಾರೆ" ಎಂದು ನಂಜಿನ ಮಾತು ಕೇಳಿ ಹಿಂದಿರುಗಿದ್ದಾಯಿತು. ಏನು ಮಾಡುವದೆಂದು ಕಳವಳದಲ್ಲಿ ಒಂದೆರಡು ದಿನ ಕಳೆದೆ. "ತಂದೆಯವರು ಅಂತ್ಯಾವಸ್ಥೆಯಲ್ಲಿದ್ದಾರೆ ಹೊರಟು ಬಾ" ಎಂದು ತಂತಿ ಬಂದಿತು. ತಿರುಗಿ ನಂಜುಂಡಯ್ಯನವರ ಹತ್ತಿರ ಹೋಗುವ ಗೊಡವೆಗೇ ಹೋಗದೇ ತಂತಿಯನ್ನು ರಜೆಯ ಅರ್ಜಿಯೊಂದಿಗೆ ಅವರ

ಟೇಬಲಿನ ಮೇಲೆ ಇರಿಸುವಂತೆ ಮಾಡಿ ಊರಿಗೆ ಹೊರಟು ಬಿಟ್ಟಿದ್ದೆ. ಮನೆ ಮುಟ್ಟಿದಾಗ ತಂದೆಯವರು ಕೇವಲ ನನ್ನ ಬರುವಿಗಾಗಿ ಜೀವ ಹಿಡಿದು ಇದ್ದದ್ದು ಸ್ಪಷ್ಟವಾಗಿತ್ತು. ಅವರ ಧ್ವನಿ ತೀರ ಕ್ಷೀಣವಾಗಿ ನನ್ನನ್ನು ನೋಡಿದಾಗ ಕಣ್ಣಿನಲ್ಲಿ ಹೊಳಪು ಕಾಣಿಸಿತು.

ಏನೋ ಹೇಳಲೆಂದು ಬಾಯಿ ತೆಗೆದರು. ಆದರೆ ಧ್ವನಿ ಏಳಲಿಲ್ಲ. ಅವರ ಮುಖಕ್ಕೆ ಕಿವಿ ಹಚ್ಚಿದೆ. 'ಮದುವೆ' ಶಬ್ದ ಕ್ಷೀಣವಾಗಿ ಕೇಳಿಸಿತು. ಸುಖವಾಗಿರು ಎನ್ನುವಂತೆ ಹರಸಲು ಕೈಯೆತ್ತಿ ನನ್ನನ್ನು ನೇವರಿಸಿದರು. ಕೆಲ ಹೊತ್ತು ಕೈಯಾಡಿಸುತ್ತಲೇ ಇದ್ದರು. ಕೇವಲ ಐದು ನಿಮಿಷಗಳ ತರುವಾಯ ಬಿಕ್ಕು ಹತ್ತಿತವರಿಗೆ. ದೊಡ್ಡದೊಂದು ಆಕಳಿಕೆ ಬಂದಾಗ ಅವರ ಪ್ರಾಣಪಕ್ಷಿ ಹಾರಿಹೋಗಿತ್ತು. ಅಂತ್ಯಕ್ರಿಯೆಗಳಿಗಾಗಿ ಊರಲ್ಲಿ ೧೩ ದಿನಗಳವರೆಗೆ ಇರುವದು ಅವಶ್ಯವಿತ್ತು. ರಜೆ ಬೆಳೆಸಲು ತಂತಿ ಕೊಟ್ಟೆ. ತಿರುಗಿ ಬೆಂಗಳೂರಿಗೆ ಹೋದಾಗ ನನ್ನ ವಿರುದ್ಧ ೬ ಪುಟಗಳ ರಿಪೋರ್ಟನ್ನು ನಂಜುಂಡಯ್ಯನವರು ಕೊಟ್ಟಿದ್ದಾರೆಂದು ತಿಳಿಯಿತು. ನಾನು ಕೆಲಸಕ್ಕೆ ತಿರುಗಿ ಹಾಜರಾದ ಕೂಡಲೇ ಡಾಯರೆಕ್ಟರರ ಕರೆ ಬಂದಿತು, ಇದ್ದ ಸಂಗತಿಯನ್ನೆಲ್ಲ ಅವರಿಗೆ ಇದ್ದ ಹಾಗೇ ಹೇಳಿದಾಗ ಅವರಿಗೂ ಮರುಕ ಬಂದಿತು. ಆದ್ದರಿಂದ ಆ ರಿಪೋರ್ಟಿನ ಬಗ್ಗೆ ಹೆಚ್ಚು ಲಕ್ಷ ಕೊಡಲಿಲ್ಲ. ಆದರೂ ನಂಜುಂಡಯ್ಯನವರು ನನಗೆ ನೆಮ್ಮದಿಯಿಂದ ಇರಲು ಅವಕಾಶವನ್ನೇ ಕೊಡಲಿಲ್ಲ.

ನೋವಿದ್ದ ಬೆರಳಿಗೆ ಮತ್ತೆ ಮತ್ತೆ ನೋವಾಗುವಂತೆ ನೊಂದ ಮನಸ್ಸಿಗೆ ತಿರುಗಿ ತಿರುಗಿ ಏಟು ಬೀಳುತ್ತಿದ್ದವು. ಆದ್ದರಿಂದ ಇದನ್ನು ಮರೆಯಲು ಯಾವದಾದರೊಂದು ಕೆಲಸದಲ್ಲಿ ಮನಸ್ಸು ಹಾಕುವದು ಅತೀ ಅವಶ್ಯವಾಗಿತ್ತು. ಏನಾದರೂ ರಚನಾತ್ಮಕ ಕೆಲಸ ಮಾಡಿದರೆ ನಂಜುಂಡಯ್ಯನವರು ಸಂತುಷ್ಟರಾದಾರೆಂದು ಮೂರು ತಿಂಗಳು ಹಗಲಿರುಳು ಶ್ರಮಿಸಿ ಒಂದು ಸಂಶೋಧನೆ ಮುಗಿಸಿದೆ. ಅದರ ಪರಿಣಾಮವನ್ನು ತೆಗೆದು ಬರೆದು, ಅವರಿಗೆ ತೋರಿಸಿದಾಗ ಅವರು ತಮ್ಮ ಹೆಸರನ್ನು ಅದರಲ್ಲಿ ಸೇರಿಸಿ ಪ್ರಕಟನೆಗೆ ಕೊಡಲು ಆಜ್ಞೆಯಿತ್ತರು. ನಾನು ಮಾಡಿದ ಕೆಲಸಕ್ಕೂ ಅವರ ಹೆಸರೇ ಎಂದು ಅನಿಸಿತು. ತಕ್ಷಣ ನೆನಪಿಗೆ ಬಂದಿತು-ನಾನು ಭಾರತದಲ್ಲಿ ಇದ್ದೇನೆ.....ಅಮೇರಿಕೆಯಲ್ಲಿ ಇಲ್ಲವೆಂದು. ಸುಮ್ಮನಾದೆ. ಆ ಮೇಲೆ ಬರೆದ ಎರಡೂ ಪ್ರಬಂಧಗಳದೂ ಇದೇ ಹಾಡಾಯಿತು ಹೀಗಾದರೆ ಕೆಲಸವನ್ನು ಮಾಡಿಯಾದರೂ ಪ್ರಯೋಜನವೇನು ಎಂದು ವಿರಕ್ತಿ ಮಾಡಿತು ನನ್ನಲ್ಲಿ. ಇಂತಹ ಮನಃಸ್ಥಿತಿಯಲ್ಲೆ ಇದ್ದಾಗಲಲ್ಲವೇ ಆಶಾಳ ಪತ್ರ ಬಂದದ್ದು? ಆಶಾಳ ಪತ್ರ ಕೈಗೆ ಬಂದಾಗ ನನ್ನ ಕಣ್ಣು ನಾನೇ ನಂಬಲಾರದೇ ಹೋಗಿದ್ದೆ.......

* * *

ಅರುಣನಿಗೆ ಮೈಯೆಚ್ಚರ ಉಳಿದಿರಲಿಲ್ಲ. ಹಿಂದಿನ ಪತ್ರಗಳನ್ನೆಲ್ಲ ಓದುತ್ತ ನಡುನಡುವೆ ನಡೆದ ಘಟನೆಗಳನ್ನೆಲ್ಲ ನೆನೆಯುತ್ತ ಕುಳಿತು ಬಿಟ್ಟಿದ್ದ. ಜಿಬ್ರಾಲ್ಟರ ದಾಟಿ ಹಡಗ ಭರದಿಂದ ಹೊರಟಿತ್ತು.....

೧೨

ಪ್ರಿಯ ಅರುಣ,

"ಪ್ರಿಯನೆಂದು ಸಂಬೋಧಿಸುವ ಅಧಿಕಾರ ನನಗಿನ್ನು ಇದೆಯೋ ಇಲ್ಲವೋ ಗೊತ್ತಿಲ್ಲ. ಆದರೆ ಅಭ್ಯಾಸ ಬಲದಿಂದ ಬರೆಯುತ್ತಿದ್ದೇನೆ. ಈ ಅಧಿಕಾರವನ್ನು ನಾನು ಕಳೆದುಕೊಂಡಿದ್ದರೆ ಅದಕ್ಕೆ ನಾನೇ ಹೊಣೆಯಲ್ಲವೇ? ಅರುಣ, ನಾನು ಅಪರಾಧಿನಿ. ಯಾರೂ ಕ್ಷಮಿಸಲಾರದಷ್ಟು ದೊಡ್ಡ ಅಪರಾಧವನ್ನು ನಾನು ಮಾಡಿರುವೆ. ಮತ್ತು ನನ್ನ ಅಪರಾಧಕ್ಕಾಗಿ ನಿಮಗೆ ಶಿಕ್ಷೆಯಾಗುತ್ತಿದೆ. ಮನೆಯವರ ಬೆದರಿಕೆಗೇ ಅರೆಜೀವವಾಗಿ, ದೊರಕಿದ ಅಮೂಲ್ಯ ರತ್ನವನ್ನು ತೆಗೆದೊಗೆದು ಬಿಟ್ಟಿದ್ದೇನೆ. ನೀವು ಎಂದಾದರೂ ಒಂದು ದಿನ ನನ್ನನ್ನು ಕ್ಷಮಿಸುವಿರಲ್ಲವೇ? ನಿಮ್ಮ ಹೃದಯವೈಶಾಲ್ಯದ ಒಂದಂಶವಾದರೂ ನನ್ನ ಮೇಲೆ ಬಿದ್ದಿದ್ದರೆ ನನ್ನ ಜೀವನ ಸಾರ್ಥಕವಾಗುತ್ತಿತ್ತು. ನೀವು ತಂದೆಯವರಿಗೆ ಬರೆದ ಪತ್ರ, ತಂತಿ, ನಂತರ ನಿಮ್ಮ ಭೆಟ್ಟಿ, ಇವುಗಳಿಂದ ತಂದೆಯವರು ಸಂಪೂರ್ಣ ಬದಲಾಗಿ ಬಿಟ್ಟಿದ್ದಾರೆ. "೩೦ ವರ್ಷ ನ್ಯಾಯದಾನ ಮಾಡಿ-ಮಾಡಿ ಅರುಣನಿಗೆ ಮಾತ್ರ ಅನ್ಯಾಯ ಮಾಡುವ ಸಂದರ್ಭ ಬಂದಿತು" ಎಂದು ಅನ್ನುತ್ತಿದ್ದರು.

ನಿಮ್ಮ ಅಂದಿನ ಭೆಟ್ಟಿಯ ನಂತರ ತಂದೆಯವರು ಬಹಳ ಹತಪ್ರಭರಾಗಿ ಮನೆಗೆ ಬಂದರು. ಅವರಿಗಿಂತ ಮುಂದಾಗಿ ಬಂದ ಭಾವನವರು ಅಣ್ಣ-ಆಯಿಯವರಿಗೆ ಎಲ್ಲವನ್ನೂ ಹೇಳಿಬಿಟ್ಟಿದ್ದರಿಂದ ಯಾರೂ ಅವರಿಗೆ ತಿರುಗಿ ಕೇಳಲು ಹೋಗಲಿಲ್ಲ. ಪಿಟ್ಟೆನ್ನದೇ 'ಬಾಬಾ'ರು ಒಂದೆಡೆಗೆ ಕುಳಿತು ಬಿಟ್ಟಿದ್ದರು. ಕೈಯಲ್ಲಿ ಪೇಪರ ಹಿಡಿದು. ರಾತ್ರಿ ಊಟಮಾಡಿ ಸ್ವಲ್ಪ ಹೊತ್ತು ನೀವು ತಯಾರಿಸಿದ ರೇಡಿಯೋಗ್ರಾಮಿನ ಮೇಲೆ ಶಾಸ್ತ್ರೀಯ ಸಂಗೀತ ಕೇಳುವದು ಅವರ ವಾಡಿಕೆ. ಆದರೆ ಅಂದು ಮಾತ್ರ ಅತ್ತ ಲಕ್ಷ್ಯವೇ ಇರಲಿಲ್ಲ. ಮಲಗಲು ಹೋಗಲು ಎದ್ದಾಗ ಆಯಿಯವರು, 'ಅಳಿಯನು ಹೊರಟು ಬಂದ ಮೇಲೆ ಏನು ಮಾತುಕತೆಗಳು ನಡೆದವು? ಆಶಾಳನ್ನು ಮರೆಯಲು ಒಪ್ಪಿದನೇ?" ಎಂದು ಕೇಳಿದಾಗ "ಹೌದು. ನಿನ್ನ ಆಶಾಳನ್ನು ಬೇಕಾದವರಿಗೆ ಮದುವೆ ಮಾಡಿಕೊಡಲು ಅವನಿಂದ ಯಾವ ಆತಂಕವೂ ಬರಲಾರದು" ಎಂದು ಹೇಳಿ ಸರಸರನೆ ತಮ್ಮ ಕೋಣೆಗೆ ಹೋಗಿಬಿಟ್ಟರು.

ರಾತ್ರಿ ಹನ್ನೆರಡು ಗಂಟೆಯಾಗಿರಬಹುದು. ನಿಮ್ಮ ಪ್ರತಿಯೊಂದು ಮಾತು, ಸಂದರ್ಭ, ಪ್ರತಿಯೊಂದು ವಿನೋದ ನಾವು ಜೋಡಿಯಾಗಿ ಕಟ್ಟಿದ ಕನಸುಗಳು ಎಲ್ಲವನ್ನು ನೆನೆಯುತ್ತ ಕಣ್ಣೀರು ಇಡುತ್ತಿದ್ದೆ. ಎದ್ದು ದೀಪ ಹಾಕಿ ಈ ಮೂರು ವರ್ಷಗಳಲ್ಲಿ ಒಟ್ಟಾಗಿ ನೀವು ಬರೆದ ಪತ್ರಗಳ ಫಾಯಿಲ್ ತೆಗೆದು ಓದಲಾರಂಭಿಸಿದೆ. ಓದುತ್ತಿದ್ದಂತೆ ದುಃಖ ಇನ್ನಷ್ಟು ಹೆಚ್ಚಾಯಿತು. ನಡುವೆಯೇ ಯಾರೋ ಬಾಗಿಲು ಬಡಿದರು. ಆಯಿ ದೀಪ ನೋಡಿ ಮಲಗದ್ದಕ್ಕೆ ಬೈಯ್ಯಲು ಬಂದಿರಬೇಕೆಂದು ಬೇಗ ಪತ್ರಗಳನ್ನು ಮುಚ್ಚಿಟ್ಟು ಬಾಗಿಲು ತೆಗೆದೆ. ಎದುರಿಗೆ ಸಹಸ್ರ ಜನರಿಗೆ ನ್ಯಾಯದಾನ ಮಾಡಿ ತಾವು ಮಾಡಿದ 'ಅನ್ಯಾಯ'ಕ್ಕೆ ದಿಕ್ಕೆಟ್ಟು ನೀರು ತುಂಬಿದ ಕಣ್ಣುಗಳ ನ್ಯಾಯಾಧೀಶರು ನಿಂತಿದ್ದರು! ಕೋಣೆಯ ಒಳಗೆ ಬಂದವರು ಬಾಗಿಲನ್ನು ಮುಂದೆ ಮಾಡಿ ನನ್ನನ್ನು ಚಿಕ್ಕ ಮಗುವಿನಂತೆ ತಬ್ಬಿಕೆಂಡು ಅತ್ತು ಬಿಟ್ಟರು. "ಆಶಾ, ನನ್ನಿಂದ ನಿಮ್ಮಿಬ್ಬರಿಗೂ ಅನ್ಯಾಯವಾಗಿದೆ. ನ್ಯಾಯಾಧೀಶನಾಗಿ ನಾನು ನಿರಪರಾಧಿಗಳಿಗೆ ಶಿಕ್ಷೆ ಕೊಡುವಂತಾಯಿತು. ನಿನ್ನ ಅಪರಾಧ ಏನು ಗೊತ್ತೆ? ಅಣ್ಣ, ಅಮ್ಮ, ಭಾವ ಮತ್ತು ಮನೆಯ ಶಾಂತಿ ಸಮಾಧಾನಗಳಿಗಾಗಿ ನಿನ್ನ ಶಾಂತಿಯನ್ನು ಬಲಿಕೊಟ್ಟಿದ್ದು. ಅರುಣನ ಅಪರಾಧ ಇದಕ್ಕೂ ದೊಡ್ಡದು. ಕಾಲೇಜಿನಲ್ಲಿದ್ದಾಗಲೇ ಮದುವೆಯಾಗದೇ ಅಮೇರಿಕೆಗೆ ಹೋದಾಗ ಅಲ್ಲೂ ಯಾವ ಕನ್ನೆಗೂ ಮರುಳಾಗದೇ ಆಶಾಳಿಗಾಗಿ ತಾನು! ಎಂಬ ದೃಢ ನಂಬಿಕೆಯಿಂದ ಮರಳಿ ಬಂದು ನಿನ್ನನ್ನು ಮದುವೆಯಾಗಲು ನಮ್ಮೆಲ್ಲರ ಅಪ್ಪಣೆ ಕೇಳಿದ್ದು, ಅವನ ಮಹಾ ಅಪರಾಧ. ಈಗ ಆತ ಯಾವ ನ್ಯಾಯಾಲಯಕ್ಕೆ ಹೋದರೂ ಅವನಿಗೆ ಯಶ ಸಿಗುವದು ಖಂಡಿತ! ಆದರೂ ತನ್ನ ಈ ತ್ಯಾಗದಿಂದ ಆಶಾ ಸುಖಿಯಾಗುವಂತಿದ್ದರೆ ಅದಕ್ಕೂ ತನ್ನ ಒಪ್ಪಿಗೆ ಎಂದು ತಲೆಬಾಗಿದ. ಇಂತಹ ದೇವರಂತಹ ಹುಡುಗನನ್ನು ಅಳಿಯನನ್ನಾಗಿ ಪಡೆಯುವ ಭಾಗ್ಯ ನನಗಿಲ್ಲದೇ ಹೋಯಿತು" ಎಂದು ಬಿಕ್ಕಿ ಬಿಕ್ಕಿ ಅತ್ತರು. ಇಬ್ಬರೂ ಬಹಳ ಹೊತ್ತು ಒಬ್ಬರ ತೆಕ್ಕೆಯಲ್ಲಿ ಇನ್ನೊಬ್ಬರು ಅಳುತ್ತಲೇ ಇದ್ದೆವು. ಸ್ವಲ್ಪ ಆವೇಗ ಕಡಿಮೆಯಾದ ಮೇಲೆ ಎದ್ದು ಹೋಗಿ ತಮ್ಮ ಹಾಸಿಗೆಯಲ್ಲಿ ಬಿದ್ದುಕೊಂಡರು. ಆ ದಿನದಿಂದ ನಾವೆಂದೂ ಕಣ್ಣೀರು ಹಾಕಲಿಲ್ಲ. ಆದರೆ ನಮಗಾದ ನೋವು ಕಣ್ಣೀರಿಗಿಂತ ಆಳವಾಗಿದೆ.

ಕಳೆದ ಒಂದು ತಿಂಗಳಿನಿಂದ ಬಾಬಾ ರಿಟಾಯರ ಆಗಿದ್ದಾರೆ. ರಿಟಾಯರ ಆದಾಗಿನಿಂದ ಅವರ ಮೊದಲಿನ ವರ್ಚಸ್ಸೂ ಕಡಿಮೆಯಾಗಿ ಹೋಗಿದೆ. ಮನೆಯಲ್ಲಿ ಆಯಿ-ಅಣ್ಣ-ಭಾವ ಮಾಡಿದ್ದೇ ನ್ಯಾಯವಾಗಿ ಬಿಟ್ಟಿದೆ. ಹೆಚ್ಚಿನ ವೇಳೆ ಬಾಬಾ ಅವರು ಅಂತರ್‌ಮುಖಿಯಾಗಿಯೇ ಇರುತ್ತಾರೆ. ಮಾತು ಬಹಳ ಕಡಿಮೆಯಾಗಿದೆ. ಕೆಲವೊಮ್ಮೆ ನನ್ನೊಡನೆ, ಯಾವಾಗಾದರೊಮ್ಮೆ ಸೊಸೆಯೊಡನೆ ಮಾತು ಅಷ್ಟೆ. ಹೆಚ್ಚು ಮಾತನಾಡಿದರೆ ನಮ್ಮಿಬ್ಬರನ್ನು ಕೆಡಿಸಿದವರೇ ತಂದೆಯವರು, ಎಂದು ಅವರಿಗೆ

ಹೂವೇರಿಸುತ್ತಾರೆ. ಈಗ ನನ್ನ ಮದುವೆಯ ಯೋಜನೆ ಹಾಕಿದ್ದಾರೆ. ಭಾವ ಎಲ್ಲೆಲ್ಲಿಂದಲೋ ವರಗಳ ಜಾತಕಗಳನ್ನು ತರುತ್ತಲೇ ಇದ್ದಾರೆ-ಅಂತಿಂತಹ ವರ ಆಯಿಯ ಮನಸ್ಸಿಗೆ ಹೋಗುವಂತಿಲ್ಲ. ನಿಕಟವರ್ತಿಯಾದ ವರರಿಗೆ ಈಗಲೇ ಅವರ ಗೊಡವೆಯಿಲ್ಲ. ಕೊನೆಗೂ ದಾಂಡೇಲಿಯಿಂದಲೋ ಯಲ್ಲಾಪುರದಿಂದಲೋ ಯಾವನೋ ವರನನ್ನು ಹುಡುಕಿ ತಂದಿದ್ದಾರೆ. ತಂದೆಗೆ ಒಬ್ಬನೇ ಮಗನಂತೆ. ಬಹಳಷ್ಟು ತೋಟ ಗದ್ದೆಗಳಿವೆಯಂತೆ. ಅಲ್ಲದೇ ಹಿಟ್ಟು, ಅಕ್ಕಿ, ಎಣ್ಣೆಯ ಗಿರಣಿಗಳಿವೆಯಂತೆ. ಟ್ರ್ಯಾಕ್ಟರಗಳಿಂದ ಹೊಲ ಸಾಗುವಳಿ ನಡೆದಿದೆಯಂತೆ. ವರ ಬಿ.ಎ.ವರೆಗೆ ಓದಿದಾನಂತೆ. ವರನಂತೂ "ಪ್ರಸಿದ್ಧ ನ್ಯಾಯಾಧೀಶರ ಮಗಳು. ಬಿ.ಎಸ್.ಸಿ. ಪದವೀಧರೆ, ತನ್ನ ಪತ್ನಿಯಾಗುವಳೆಂದು ಹಿಗ್ಗಿ ಹೀರೆಕಾಯಾಗಿರುವ. ತನ್ನ ಟ್ರ್ಯಾಕ್ಟರ ನಡೆಸಲೊ ಅಥವಾ ಹೊಲದಾಳುಗಳ ಮೇಲ್ವಿಚಾರಣೆಗೆ ನನ್ನಿಂದ ಒಳ್ಳೆ ಸಹಾಯ ದೊರಕೀತೆಂದು ಅವನ ಹಿರಿಯಾಸೆಯಂತೆ!"

ನನ್ನನ್ನು ನೋಡಲು ಮುಂಬೈತನಕವೂ ಪ್ರಯಾಣ ಬೆಳೆಸಿದ್ದ ಈ ಸಾಹುಕಾರ. ಅಮ್ಮ ಅಕ್ಕನ ಒತ್ತಾಯಕ್ಕೆ ಜರತಾರಿ ಸೀರೆ, ಒಡವೆ ಧರಿಸಿ ಮುಖಕ್ಕೆ ಪೌಡರ-ಬಣ್ಣ ಸವರಿದ್ದೆ. ಪ್ರದರ್ಶನಕ್ಕೆ ಹೋಗುವ ಮೊದಲು ಕನ್ನಡಿಯಲ್ಲಿ ನೋಡಿದಾಗ ಶವಕ್ಕೆ ಸಿಂಗಾರ ಮಾಡಿದಂತೆ ಇತ್ತು ಮುಖ! ಆದರೂ ಪ್ರಾಣಿ, ಹಲವಾರು ಅರ್ಥವಿಲ್ಲದ ಪ್ರಶ್ನೆಗಳನ್ನು ಕೇಳಿದ. ಎಲ್ಲದಕ್ಕೂ ತಲೆಯಲ್ಲಾಡಿಸಿ ಮೂಕಿಯಂತೆ ಕುಳಿತುಬಿಟ್ಟಿದ್ದೆ. ಆದರೂ ಬಿಡಲೊಲ್ಲ ನಾನೊಮ್ಮೆ ತಲೆಯೆತ್ತಿ ಅವನನ್ನು ದಿಟ್ಟಿಸಿ ನೋಡಿದೆ. ನ್ಯಾಯಾಧೀಶರ ಮಗಳು ಎಲ್ಲಿ ಕೈ ಬಿಟ್ಟು ಹೋಗುವಳೋ ಎಂದು ಆಗಲೇ ತನ್ನ ಒಪ್ಪಿಗೆಯನ್ನು ತಿಳಿಸಿಯೂ ಬಿಟ್ಟ. ಸಮಾಜದ ಟೊಳ್ಳು ಪ್ರತಿಷ್ಠೆಗಾಗಿ ಎಷ್ಟೊಂದು ಹಾತೊರೆಯುತ್ತಾರಲ್ಲವೇ ಜನ!

ಯೋಗ್ಯ ವರ ದೊರೆತದ್ದಕ್ಕಾಗಿ ಮನೆಯ ಜನಕ್ಕೆ ಹೊಸ ರೆಕ್ಕೆ ಬಂದಂತಾಗಿದೆ. ವರ ಮಹೇಶ್ವರ ಪ್ರಭು ಮಹೇಶ್ವರನ ಮುಂದಿನ ನಂದಿಯಂತಿದ್ದಾನೆ! ಆದರೂ ಶ್ರೀಮಂತನೆಂದೂ, ಕಲಿತವನೆಂದು ಒಳ್ಳೆಯ ಕುಟುಂಬದವನೆಂದು ನಮ್ಮ ಆಯಿ ಬಹಳ ಹರ್ಷಿತಳಾಗಿದ್ದಾಳೆ. ಅವಳ ಉತ್ಸಾಹ ಹೆಚ್ಚಿದಂತೆ ನನ್ನ ಕಳವಳ ಹೆಚ್ಚಾಗುತ್ತಿದೆ. ನಾನು ಮದುವೆ ಬೇಡವೆಂದರೆ "ಈಗ ಹಾಗೆನ್ನುತ್ತಿ. ಮದುವೆಯಾದರೆ ಎಲ್ಲ ಮರೆತುಬಿಡುತ್ತಿಯಾ" ಎಂದು ಬಾರಿಬಾರಿಗೆ ಹೇಳುತ್ತಾರೆ. ಮೊದಲಾದರೆ ಇಂತ ಪ್ರಸಂಗದಲ್ಲಿ ನಿಮ್ಮ ಸಲಹೆ ಪಡೆಯುತ್ತಿದ್ದೆ. ಈಗ ನಿಮ್ಮನ್ನೇ ಕಳೆದುಕೊಂಡ ನಂತರ ನನಗೆಲ್ಲಿಯ ಶರಣು? ನಿರಪರಾಧಿಗಳಾದ ನಿಮ್ಮ ಕನಸಿನ ಸಾಮ್ರಾಜ್ಯವನ್ನು ಒಡೆದು ಚೂರುಮಾಡಿದ್ದೇನೆ. ಈ ಅಪರಾಧಕ್ಕಾಗಿ ನನಗೆ ಶಾಸ್ತಿಯಾಗುವ ಮೊದಲೇ ನನ್ನಿಂದ

ಇನ್ನೊಂದು ಅಪರಾಧ ಮಾಡಿಸಲು ಹೊರಟಿದ್ದಾರೆ ಮನೆಯವರು. ನನ್ನ ಕೈ ಹಿಡಿಯಲು ಬಂದವನಿಗೆ ಸುಖ ಸಮಾಧಾನಗಳನ್ನು ನಾನು ಕೊಡುವದು ಅಸಾಧ್ಯವೆಂದು ತಿಳಿದೂ ತಿಳಿದೂ ಅವನ ಜೀವನವನ್ನು ಕೆಡಿಸಲು ಹೊರಟಿದ್ದಾರೆ. ಇನ್ನೊಬ್ಬನ ಸಂಸಾರವನ್ನು ಹಾಳು ಮಾಡಲು ನನಗೆ ಏನು ಅಧಿಕಾರವಿದೆ?

ದೊಡ್ಡವರ ಮಗಳೆಂದು ನನ್ನನ್ನು ಆತ ಪ್ರತಿಷ್ಠೆಗಾಗಿ ಮದುವೆಯಾಗಿ ಜೀವನದುದ್ದಕ್ಕೂ ಪಶ್ಚಾತ್ತಾಪ ಪಡುವದಕ್ಕಿಂತ ಯಾವಳಾದರೂ ಮುಗ್ಧೆಯೊಬ್ಬಳನ್ನು ಮದುವೆಯಾದರೆ ಉಚಿತವಲ್ಲವೇ? ನಿಮ್ಮ ಸ್ನೇಹದಿಂದ ಒಂದು ಪಾಠವನ್ನು ನಾನು ಕಲಿತಿರುವೆ. ಇನ್ನೊಬ್ಬರ ಸುಖಕ್ಕಾಗಿ ಸ್ವಂತದ ತ್ಯಾಗ. ಇದು ಎಷ್ಟು ಕಠೋರವೆಂಬುದು ಬಲ್ಲೆ. ನಮ್ಮ ಮನೆಯ ಶಾಂತಿಗಾಗಿ ನಿಮ್ಮ ಸುಖಶಾಂತಿಗಳನ್ನು ತ್ಯಜಿಸಲಿಲ್ಲವೇ ನೀವು? ಮುಂದಿನ ಜನ್ಮದಲ್ಲಿಯಾದರೂ ನಿಮ್ಮ ಪತ್ನಿಯಾಗುವ ಹಿರಿಯಾಸೆ ನನ್ನದು. ನಿಮಗೆ ಅನುರೂಪಳಾದ ಪತ್ನಿಯಾಗಬೇಕಾದರೆ ಇಂತಹ ತ್ಯಾಗ ನನ್ನಿಂದ ಬೇಡವೇ?

ನಿಮಗೆ ಯೋಗ್ಯಳಾದ ಪತ್ನಿ ಎಂದು ಸಿದ್ಧಪಡಿಸುವದು ಹೇಗೆ? ಎಂದು ತುಂಬ ಯೋಚಿಸಿದೆ. ಹೊಳೆದದ್ದು ಒಂದೇ ಒಂದು ಮಾರ್ಗ ಆ ಬಡ ಮಹೇಶ್ವರನ ಜೀವನ ಹಾಳಾಗದಂತೆ ನೋಡಿಕೊಳ್ಳುವದು. ಅದು ನಾನು ಈ ಜಗತ್ತಿನಿಂದ ಮಾಯವಾದಾಗ ಮಾತ್ರ ಸಾಧ್ಯ. ನಾನು ಆತ್ಮಹತ್ಯೆಯೆಂದರೆ ಮಹಾಪಾಪ-ಅದಕ್ಕೆ ಎಳೆಸುವವರು ತಮ್ಮ ಮೇಲೆಯೇ ನಿಯಂತ್ರಣವಿಲ್ಲದವರು ಎಂದು ನಂಬಿದವಳು. ಆದರೆ ಈ ಪ್ರಸಂಗದಲ್ಲಿ ನಾನು ಇಂಥವರಿಂದ ಭಿನ್ನಳಾಗಿಲ್ಲ. ನಾನು ಜೀವದಾನ ಮಾಡಿ ಇನ್ನೊಬ್ಬ ವ್ಯಕ್ತಿಯ ಸಂಸಾರ ಉಳಿಸುವೆ. ನೀವು ಪತ್ರ ಓದುತ್ತಿರುವಾಗ ನಾನು ನಿಮ್ಮನ್ನು, ಎಲ್ಲರನ್ನು, ಜಗತ್ತನ್ನು, ಬಿಟ್ಟು ಬಹುದೂರ ಹೋಗಿರುತ್ತೇನೆ. ಆ ಜಗತ್ತಿನಲ್ಲಿ, ಜಾತಿ, ಸ್ವಾರ್ಥ, ಟೊಳ್ಳು ಪ್ರತಿಷ್ಠೆ ಮುಂತಾದವುಗಳಿಗೆ ಸ್ಥಳವಿಲ್ಲವಂತೆ.

ದೊರೆ, ಕೊನೆಯದಾಗಿ ನಿಮ್ಮಲ್ಲಿ ಎರಡು ವಿನಂತಿಗಳು. ಮೊದಲನೆಯದೆಂದರೆ ನಡೆದ ಘಟನೆಗಳನ್ನೆಲ್ಲ ಮರೆತು ಸುಶಿಕ್ಷಿತಳೊಬ್ಬಳನ್ನು ಮದುವೆಯಾಗಿ ನಾನು ಮಾಡಿದ ಎಲ್ಲ ತಪ್ಪುಗಳಿಗೆ ಕ್ಷಮೆಯನ್ನು ನೀಡಿ ಮುಂದಿನ ಜನ್ಮದಲ್ಲಿ ನಿಮ್ಮನ್ನು ವರಿಸಲು ನನಗೆ ಸಮ್ಮತಿ ಕೊಡಬೇಕು. ನೀವದಕ್ಕೆ ಒಪ್ಪುವಿರಲ್ಲವೇ? ನನ್ನ ಎರಡೂ ಮಾತುಗಳನ್ನು ನಡೆಸಿಕೊಡುವಿರಲ್ಲವೇ? ಅಂದರೆ ನಾನು ಎಳ್ಳಷ್ಟೂ ಅಳುಕವಿಲ್ಲದೇ ಈ ಜಗತ್ತನ್ನು ಬಿಡಬಲ್ಲೆ.

ಜನ್ಮಾಂತರಗಳಲ್ಲಿ ನಿಮ್ಮ ಚರಣದಾಸಿಯಾಗಬಯಸುವ
ಆಶಾ

ಪತ್ರ ಓದಿ ಮುಗಿಸಿ ಅದರ ತಾರೀಖಿನತ್ತ ನೋಡಿದೆ. ಒಂದು ವಾರದ ಹಿಂದೆ ಬರೆದದ್ದು. ಊರಿನ ಪತ್ತೆಗೆ ಬರೆದದ್ದರಿಂದ ಅಲ್ಲಿಗೆ ಹೋಗಿ ರಿಡಾಯರೆಕ್ಟ್ ಆಗಿ ಬೆಂಗಳೂರಿಗೆ ಬಂದಿತ್ತು. ಪತ್ರದಲ್ಲಿ ಬರೆದಂತೆ ನಿಜಕ್ಕೂ ಆಶಾ ಜೀವತ್ಯಾಗ ಮಾಡಿರಬಹುದೇ? ಪತ್ತೆ ಹಚ್ಚುವದು ಹೇಗೆ? ಎಂದು ಕಳವಳದಿಂದ ಯೋಚಿಸುತ್ತ ಕುಳಿತಾಗಲೇ ಎಕ್ಸಪ್ರೆಸ್ ತಂತಿ ಒಂದು ಬಂದಿತ್ತು. ಒಡೆದು ಓದಿದೆ- "ಆಶಾಳು ಆತ್ಮಹತ್ಯೆ ಪ್ರಯತ್ನದಲ್ಲಿ ಗಂಡಾಂತರದಲ್ಲಿದ್ದಾಳೆ. ಹೊರಡು" ದೇಶಪಾಂಡೆ. ಎಂದಿತ್ತು. ಈ ತಂತಿಯೂ ಊರಿಗೆ ಹೋಗಿ ಮೂರು ದಿನಗಳ ಮೇಲೆ ಕೈಸೇರಿತ್ತು. ಈಗ ಮುಂಬೈ ತನಕ ಪ್ರಯಾಣ ಬೆಳೆಸಿ ಪ್ರಯೋಜನವಿದೆಯೇ ಎಂದು ತಿಳಿಯಲು ದೇಶಪಾಂಡೆಯವರ ಹೆಸರಿಗಾಗಿ ಟ್ರಂಕ್‌ಕಾಲ ಬುಕ್ ಮಾಡಿಸಿ ಸರದಿಗಾಗಿ ಕಾದು ಕುಳಿತೆ. ಮೂರು ಗಂಟೆ ಕಾದ ನಂತರ ದೇಶಪಾಂಡೆಯವರೊಡನೆ ಮಾತನಾಡುವ ಸಂಧಿ ದೊರಕಿತ್ತು. ಮೊದಲೇ ಸರಿಯಾಗಿ ಕೇಳದ ಫೋನ ಮೇಲೆ ದೇಶಪಾಂಡೆಯವರ ಧ್ವನಿ ಬಹಳೇ ಕ್ಷೀಣವಾಗಿತ್ತು. ಕ್ಷಮಿಸಿ, ಕ್ಷಮಿಸಿ, ಇನ್ನೊಮ್ಮೆ ಹೇಳಿ ಎಂದು ಮುಖ್ಯ ಮಾತುಗಳನ್ನು ತಿಳಿದುಕೊಂಡೆ. ಆಶಾ ನನಗೆ ಪತ್ರ ಬರೆದ ಮರುದಿನವೇ ನೇಣು ಹಾಕಿಕೊಂಡಳಂತೆ. ಮರುದಿನ ನೌಕರಳು ಬಾಗಿಲು ಬಡಿದು, ಬಾಗಿಲು ತೆರೆಯದಾಗಲು, ಅನುಮಾನದಿಂದ ಮನೆಯವರೆಲ್ಲ ಓಡಿಬರುವಂತೆ ಆಯಿತು. ಬಾಗಿಲು ಒಡೆದು ಹೋದಾಗ ಆಶಾಳ ದೇಹ ತೂಗಾಡುತ್ತಿತ್ತು. ಆದರೆ ಕಾಲು ನೆಲಕ್ಕೆ ತಾಗುತ್ತಿದ್ದರಿಂದ ಕುತ್ತಿಗೆಯ ಮೇಲೆ ಪೂರ್ಣ ಭಾರ ಬೀಳದೇ ಮಂದ ಮಂದ ಶ್ವಾಸೋಛ್ವಾಸ ನಡೆದೇ ಇತ್ತು. ನನ್ನ ಹುಟ್ಟುಹಬ್ಬ ಶುಭಚಿಂತನೆಯ ಪತ್ರ ಎದೆಗೆ ಅವುಚಿ ಹಿಡಿದಿದ್ದಳಂತೆ. ಕಾರಿನಲ್ಲಿ ಕೂಡಲೇ ಆಸ್ಪತ್ರೆಗೆ ಒಯ್ದು ಔಷಧೋಪಚಾರ ಮಾಡಿದಾಗ ಸ್ಮೃತಿ ಬಂದಿತಂತೆ. ತೊದಲು ತೊದಲು ಮಾತಿನಲ್ಲಿ ನನ್ನ ಹೆಸರು ತೆಗೆಯುತ್ತಿದ್ದಳಂತೆ. ಆರು ತಾಸು ಅರೆ ಜಾಗ್ರತಾವಸ್ಥೆಯಲ್ಲಿದ್ದ ಮೇಲೆ ಪುನಃ ಸ್ಮೃತಿ ತಪ್ಪಿತಂತೆ. ಹಾಗೇ ಮೂವತ್ತು ನಿಮಿಷಗಳಲ್ಲಿ ಆಕೆಯ ಪ್ರಾಣಪಕ್ಷಿ ಹಾರಿಹೋಯಿತು. ಆಶಾಳಲ್ಲಿ ಆತ್ಮಹತ್ಯೆಯ ಬೋಧ ತುಂಬಿದವನು ನಾನೇ! ಎಂದು ಮನೆಯ ಇತರರು ನಂಬಿದ್ದರಂತೆ!

ಫೋನ್ ಇಡುತ್ತಿದ್ದಂತೆ ಬವಳಿ ಬಂದಿತ್ತು ನನಗೆ. ಹಾಗೇ ತೆತ್ತರ ವೆತ್ತರ ಕಾಲು ಹಾಕುತ್ತ ಪಕ್ಕದ ಪಾರ್ಕಿಗೆ ಹೋಗಿ ಕುಳಿತಿದ್ದೆ. "ಎಂಥ ಜೀವನ ನನ್ನದು. ಕಳೆದ ಜನ್ಮದಲ್ಲಿ ನಾನೆಂಥ ಪಾಪ ಮಾಡಿದ್ದೆನೋ! ಈ ಜನ್ಮದಲ್ಲಿ ಈ ಶಿಕ್ಷೆ ಅನುಭವಿಸಿದೆ. ಆಶಾಳೇನೋ ನನ್ನಗಲಿ ಹೋದಳು. ಆದರೆ ನಾನು! ಪ್ರತಿ ಕ್ಷಣಕ್ಕೆ ಸಾಯುತ್ತಿರುವೆ. ಸತ್ತು ಬದುಕಿರುವೆ. ಏಕೆ? ಮತ್ತೆ ಮತ್ತೆ ಜೀವನದ ಕಹಿಯುಣಲೆಂದೇ? ಪ್ರಿನ್ಸಿಪಾಲರನ್ನು

ಕಳೆದುಕೊಂಡೆ. ತಂದೆಯವರನ್ನು ಕಳೆದುಕೊಂಡೆ. ಆಶಾಳನ್ನೂ ಕಳೆದುಕೊಂಡೆ. ಇನ್ನೇನು ಕಾದಿದೆ? ಮೇಲಧಿಕಾರಿಯ ಕಹಿ ವರ್ತನೆ. ಶೂನ್ಯ ಭವಿಷ್ಯ. ಅಕ್ಕರೆ ಸಹಾನುಭೂತಿಗಳಿಲ್ಲದ ಜೀವನ ಹರಿದ ಗಾಳಿಪಟದಂತೆ. ಜೀವಿಸಲು ಒಂದಿಷ್ಟೂ ಅಧಿಕಾರವಿಲ್ಲದವರು, ಸುಖ-ಸೌಲಭ್ಯಗಳಲ್ಲಿ ಮುಳುಗಿ ಏಳುತ್ತಿದ್ದಾರೆ. ಯಾರಿಗೂ ಕೇಡು ಮಾಡದ-ನಾಲ್ಕು ಜನರಿಗೆ ನ್ಯಾಯದಾನ ಮಾಡಿದ ದೇಶಪಾಂಡೆಯವರ ಮಗಳನ್ನು ಕಸಿದುಕೊಂಡು ಅವರಿಗೆ ದುಃಖಕ್ಕೀಡು ಮಾಡಿದೆ ದೈವ. ನಾನು ಯಾರೊಬ್ಬರಿಗೂ ದುಃಖ ಕೊಡದೇ ನ್ಯಾಯಬುದ್ಧಿ, ಪ್ರಾಮಾಣಿಕತೆಗಳಿಂದ ಜೀವಿಸಲು ಯತ್ನಿಸಿದರೂ ನನ್ನ ಸತ್ವಪರೀಕ್ಷೆ ನಡೆಸಿಯೇ ಇದೆ ದೈವ. ಈಸಬೇಕು, ಇದ್ದು ಜೈಸಬೇಕು ಎಂಬ ತತ್ವದವನಾದ್ದರಿಂದ ಸಮಾಜದೊಂದಿಗೆ ಜೀವನದೊಂದಿಗೆ ಹೋರಾಡುವೆ......ಹೋರಾಡುತ್ತಲೇ ಸಾಯುವೆ" ಎಂದು ಪ್ರತಿಜ್ಞೆ ಮಾಡಿ ಆಫೀಸಿಗೆ ಮರಳಿದ್ದೆ. ನಾನು ೩-೪ ತಾಸುಗಳವರಗೆ ಖುರ್ಚಿಯಲ್ಲಿ ಇಲ್ಲದ್ದನ್ನು ನೋಡಿದ ನಂಜುಂಡಯ್ಯನವರು ಸ್ವತಃ ಮೇಲಧಿಕಾರಿಗಳ ಹತ್ತಿರ ಹೋಗಿ ಅವರನ್ನು ಕರೆತಂದು ನನ್ನ ಖಾಲಿ ಕೋಣೆಯನ್ನು ತೋರಿಸುತ್ತಿರುವಾಗಲೇ ನಾನಲ್ಲಿ ತಲುಪಿದ್ದೆ. ಹಕ್ಕಿ ಸಿಕ್ಕಿಬಿತ್ತು ಎಂಬ ಹರ್ಷದಿಂದ "ಅವರನ್ನೆ ವಿಚಾರಿಸಿ" ಎಂದು ನನ್ನನ್ನು ಎದುರಿಗೆ ಬರಮಾಡಿಕೊಂಡರು. ನಾನು ಏನೂ ಮಾತನಾಡದೇ ಪತ್ರ, ತಂತಿಗಳನ್ನು ಅಧಿಕಾರಿಗಳ ಕೈಯಲ್ಲಿಟ್ಟು, "ಟ್ರಂಕ ಕಾಲು ಸಿಗುವದರಲ್ಲೇ ತುಂಬ ಸಮಯ ಹಿಡಿಯಿತು ಸರ್, ನಾನು ಹೊರಡಬೇಕೇ ಎಂದು ಕೇಳುವದಿತ್ತು.....ಈಗ ಹೊರಡುವ ಅಗತ್ಯವಿಲ್ಲ.....ಎಲ್ಲವೂ ಮುಗಿದು ಹೋಗಿದೆ. ನಂಜುಂಡಯ್ಯನವರ ಕಾಲು ಹಿಡಿದು ರಜ ಕೇಳುವ ಪ್ರಸಂಗ ತಪ್ಪಿತು" ಎನ್ನುತ್ತಿರುವಾಗ ನನ್ನ ಕಣ್ಣಿನಿಂದ ಎರಡು ಹನಿ ಜಾರಿಬಿದ್ದದ್ದು ಅವರಿಗೆ ಕಾಣಿಸದೇ ಇರಲಿಲ್ಲ 'ಕ್ಷಮಿಸಿ' ಎಂದು ಅವರು ಅಲ್ಲಿಂದ ಹೊರಟೇಬಿಟ್ಟರು.

ಮರುದಿನ ನಂಜುಂಡಯ್ಯನವರನ್ನು ಕರೆಸಿ ಬಹಳ ತೀಕ್ಷ್ಣವಾಗಿ ಅವರ ವರ್ತನೆಯನ್ನು ಖಂಡಿಸಿದರಂತೆ. ನೀವು ಅರುಣನ ಸ್ಥಾನದಲ್ಲಿದ್ದು ಅರುಣ ನಿಮ್ಮ ಸ್ಥಳದಲ್ಲಿದ್ದರೆ ನಿಮ್ಮ ಭಾವನೆಗಳು ಹೇಗಿರುತ್ತಿದ್ದವು? ಯೋಚಿಸಿ ನೋಡಿ ಎಂದರತೆ. ಆದರೆ ಈ ಘಟನೆಯಿಂದ ನಂಜುಂಡಯ್ಯನವರಿಗೆ ಅವಮಾನವಾದಂತಾಗಿ ಅವರಲ್ಲಿ ಪರಿವರ್ತನೆಯಾಗುವದರ ಬದಲು ಕಿಡಿ ಕೆಂಡವಾಯಿತು. ಚುಚ್ಚು ಮಾತುಗಳನ್ನು ದಿನಾಲು ಕೇಳುವಂತಾಯಿತು. ಅರ್ಧ ವಾರ್ಷಿಕ ರಿಪೋರ್ಟಿನಲ್ಲಿ ಕೆಟ್ಟ ಅಂತರಂಗದ ರಿಪೋರ್ಟನ್ನೇ ಕಾಣಬೇಕಾಯಿತು. ಅಮೇರಿಕೆಯಿಂದ ಮರಳಿದ ಒಂದೇ ವರ್ಷದಲ್ಲಿ ನಾನು ಯಾವ ಪ್ರಯೋಜನಕ್ಕೂ ಬಾರದವ! ಎನಿಸಲಾರಂಭಿಸಿತು. ಬೇರೆ ನೌಕರಿಗಾಗಿ ಪ್ರಯತ್ನಸಿದರೂ ಎಲ್ಲೆಡೆ ನಿರಾಶೆಯೇ ಕಾದಿತ್ತು.

ಬಹಳ ಕಡೆಗೆ ಇಂಟರವ್ಯೂಗೇ ಕರೆಯುತ್ತಿರಲಿಲ್ಲ, ಕರೆದಲ್ಲಿ ಆಯ್ಕೆ ಮೊದಲೇ ನಿರ್ಧಾರವಾದದ್ದು ಇರುತ್ತಿತ್ತು. ಮುಂದೇನು? ಎಂಬ ಪ್ರಶ್ನೆ ನನ್ನನ್ನು ಕಾಡಲಾರಂಭಿಸಿತು. ಸಾಲದ್ದಕ್ಕೆ CSIRದವರು ಒಂದು ನೋಟೀಸನ್ನೂ ಕಳಿಸಿದರು. "ನಿಮಗೆ ತಾತ್ಪೂರ್ತಿಕ ನೌಕರಿಯನ್ನು ಕೊಟ್ಟು ವರ್ಷದ ಮೇಲಾಯಿತು. ಈ ಅವಧಿಯಲ್ಲಿ ನೀವು ಬೇರೆ ನೌಕರಿ ದೊರಕಿಸಿಕೊಳ್ಳಬೇಕಾಗಿತ್ತು. ನಿಮ್ಮ ಮೇಲಧಿಕಾರಿಗಳ ರಿಪೋರ್ಟಿನ ಪ್ರಕಾರ ನೀವು ಈ ಬಗ್ಗೆ ಪ್ರಯತ್ನಿಸಿದ್ದು ಕಾಣುವದಿಲ್ಲ. ಅಲ್ಲದೇ ನಿಮ್ಮ ಒಂದು ವರ್ಷದ ಕೆಲಸವೂ ಸಮಾಧಾನಕಾರಿಯಾಗಿಲ್ಲವಂತೆ. ಆದ್ದರಿಂದ ನೀವು ಇನ್ನು ೩ ತಿಂಗಳಲ್ಲಿ ಹೊಸ ನೌಕರಿ ದೊರಕಿಸಿಕೊಳ್ಳದಿದ್ದರೆ ಇದೇ ಕೊನೆಯ ನೋಟೀಸು" ಎಂದು ಅದರಲ್ಲಿತ್ತು.

ಈ ಪತ್ರ ಬಂದನಂತರ ನಾನೊಂದು ದೃಢ ನಿರ್ಧಾರಕ್ಕೆ ಬರದೇ ಗತ್ಯಂತರವಿರಲಿಲ್ಲ. ಬಂದ ನೋಟಿಸಿಗೆ ಉತ್ತರ ಬರೆದೆ.

"ಪ್ರಿಯ ಮಹಾಶಯ,

ನನಗೆ ಪೂರ್ವಜರ ಪುಣ್ಯದ ಪ್ರಭಾವದಿಂದ ತಾವು ಒಂದು ವರ್ಷದ ತನಕ ನನಗೆ ಅನ್ನ ಹಾಕಿದಿರಿ. ತಮ್ಮಂತಹ ಉದಾರ ಹೃದಯಿಗಳು ಭಾರತದಲ್ಲಿ ಜನಿಸದಿದ್ದರೆ ನನ್ನಂತಹ ನಿರುಪಯೋಗಿ ನಿರುದ್ಯೋಗಿಗಳು ಯಾವದೋ ಮರದ ನೆರಳಲ್ಲಿ ಮಲಗಿ ಹಸಿವೆಯಿಂದ ಬಳಲಿ ಬಳಲಿ ನರಕ ಕಾಣುತ್ತಿದ್ದೆವೋ ಏನೊ! ಒಂದಿಷ್ಟೂ ಕೆಲಸ ಮಾಡದೇ ಸರಕಾರದ ಹಣದ ಮೇಲೆ ಜೀವನ ನಡೆಸುವವರನ್ನು ಯಮಧರ್ಮರಾಯ ತನ್ನ ಕೋಣನ ಮೇಲೆ ಕೂಡ್ರಿಸಿ ನರಕ ಲೋಕಕ್ಕೆ ಕರೆದೊಯ್ಯುತ್ತಾನೆಂದು ಈ ಮಂದಮತಿ ನಂಬಿರುವ. ನಿಮ್ಮ ಹೃದಯ ಯಮಧರ್ಮರಾಯನ ಹೃದಯಕ್ಕಿಂತ ಕಠೋರವಿಲ್ಲವೆಂದು ತಿಳಿದಿರುವೆ, ನನ್ನ ನ್ಯಾಯ ನಿವಾರಣೆ ನೀವು ಮಾಡಬೇಕೆಂದು ನನ್ನ ನಮ್ರ ವಿನಂತಿ."

ನನ್ನ ಶಾಲಾದಿನಗಳಿಂದ ಹಿಡಿದು ಮೆಟ್ರಿಕ್‌ವರೆಗೆ ಯಾವಾಗಲೂ ರ್‍ಯಾಂಕ್ ತಪ್ಪಿರಲಿಲ್ಲ. ಮುಂಬೈ ವಿಲ್ಸನ್ ಕಾಲೇಜಿನಲ್ಲಿ ಶಿಷ್ಯವೇತನ ದೊರೆಯಿತು. ಬಿ.ಎಸ್.ಸಿಯಲ್ಲಿ ವಿಶ್ವವಿದ್ಯಾಲಯಕ್ಕೆ ಮೊದಲನೇ ನಂಬರ ಬಂದಿದ್ದರಿಂದ ಮುಂದೆ ಅಮೇರಿಕೆಯಲ್ಲಿ ಸಹಜವಾಗಿಯೇ ಶಿಷ್ಯವೇತನ ದೊರೆಯಿತು. ಅಲ್ಲಿಂದ ಮೂರೇ ವರ್ಷಗಳಲ್ಲಿ ಮಾಸ್ಟರ್ಸ ಮತ್ತು ಪಿಎಚ್.ಡಿ. ಮುಗಿಸಿದೆ. ನನ್ನ ಸಂಶೋಧನೆ, ಅಮೇರಿಕೆಯಲ್ಲಿ ಬಹಳ ಮನ್ನಣೆಗೆ ಪಾತ್ರವಾಗಿದೆ. ಭಾರತದ ವರ್ತಮಾನ ಪತ್ರಗಳಲ್ಲೂ ಇದರ ಉಲ್ಲೇಖ ಬಂದಿತ್ತು, ನಾಲ್ಕಾರು ಅಮೇರಿಕನ್ ಕಂಪನಿಗಳು ನನಗೆ ನೌಕರಿ

ಕೊಡಲು ಮುಂದೆ ಬಂದವು. ಅವರು ಕೊಡುವ ಸಂಬಳದಲ್ಲಿ ಮಹಾರಾಜನಂತೆ ಇರಬಹುದಾಗಿದ್ದರೂ ಭಾರತಕ್ಕಾಗಿಯೇ ನನ್ನ ಸೇವೆ ಮೀಸಲಿರಿಸಲೆಂದು ಓಡಿ ಬಂದೆ. ಓಡಿ ಬಂದದ್ದಕ್ಕೆ ನೌಕರಿ ಇಲ್ಲದೇ, ಹಣವಿಲ್ಲದೇ ಮೂರು ನಾಲ್ಕು ತಿಂಗಳು ಹೀಗೇ ಕಳೆಯುವದೆಂದು ನವಭಾರತದಲ್ಲಿ ಮೊದಲ ಪಾಠ ಕಲಿತೆ. ಆದರೆ ತಾವು ಒಂದು ನನ್ನ ಉದರ ನಿರ್ವಹಣೆಗಾಗಿ ತಾತ್ಪೂರ್ತಿಕ ನೌಕರಿಯೊಂದನ್ನು ಕೊಡಮಾಡಿದಿರಿ. ಇದು ನಾನು ನನ್ನ ಮಕ್ಕಳು, ನನ್ನ ಮರಿಮಕ್ಕಳು ನಿಮಗೆ ಚಿರಋಣಿಯಾಗಿರುವಂತೆ ಮಾಡಿದೆ.

ನನಗೆ ಕೊಡುವ ಪಗಾರ 'ಪೋಟಗಿ' ಎಂದು ತಾವು ಕೊಡುತ್ತಿರಬಹುದು. ಉಳಿದವರೂ ಅದನ್ನೇ ನಂಬುತ್ತಿರಬಹುದು. ಆದರೆ ನಾನು ಸರ್ವಥಾ ಹಾಗೆ ನಂಬಿಲ್ಲ. ನನಗೆ ಕೊಟ್ಟ ಪ್ರತಿಯೊಂದು ನಯಾಪೈಸಾವೂ ಸಾರ್ಥಕವಾಗುವಂತೆ ಕೆಲಸ ಮಾಡುವ ಹಂಬಲವಿದೆ ನನಗೆ. ಆದರೆ ನನ್ನ ಈ ಹಂಬಲ ಕೈಗೂಡದಿದ್ದರೆ ಅವಕ್ಕೆ ಹಲವಾರು ಕಾರಣಗಳುಂಟು. ನನ್ನನ್ನು ಒಂದು ಸಂಸ್ಥೆಗೆ ಸೇರಿಸಿದಿರಿ. ಅಂದರೆ ಅಲ್ಲಿಯ ಅಧಿಕಾರಿಗಳೆಲ್ಲ ನನ್ನೊಂದಿಗೆ ಸಹಕರಿಸುತ್ತಾರೆ, ಎಂಬ ನಿಯಮವಿಲ್ಲ. ಆ ಸಂಸ್ಥೆಯಲ್ಲಿ ಬೇಕಾದ ಉಪಕರಣ, ಸಲಕರಣೆಗಳಿರಲಿಕ್ಕಿಲ್ಲ. ಎಲ್ಲಕ್ಕೂ ಹೆಚ್ಚಾಗಿ ತಾವೇ ಸರ್ವಾಧಿಕಾರಿಯೆಂದು ನಂಬಿರುವ ಮೇಲಧಿಕಾರಿಗಳು ನಮ್ಮಂತಹವರ ಕ್ರಿಯಾಶಕ್ತಿಯನ್ನು ಕುಗ್ಗಿಸಲು ಹಿಂದೆ ಮುಂದೆ ನೋಡುವದಿಲ್ಲ. ನಾವೇನೇ ಶೋಧನೆ ಮಾಡಿದರೆ, ಪ್ರಬಂಧ ಬರೆದರೆ ಅದು ಅವರ ಹೆಸರಿನಲ್ಲಿ ಅಚ್ಚಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಕ್ರಿಯಾತ್ಮಕ ಕೆಲಸವಾಗದಿದ್ದರೆ ಯಾರನ್ನು ತಾನೆ ದೂರುವದು?

ಇನ್ನು ನೌಕರಿಗಾಗಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಪ್ರತಿದಿನ ಮುಂಜಾನೆ ಎದ್ದಕೂಡಲೇ ಜಾಹೀರಾತುಗಳನ್ನು ನೋಡುವದು. ಬಂದ ಜಾಹೀರಾತುಗಳಿಗೆ ಅರ್ಜಿಗಳನ್ನು ಸಲ್ಲಿಸುವದರಲ್ಲಿಯೇ ನನ್ನ ಅರ್ಧ ಸಮಯ ಮತ್ತು ನೀವು ಕೊಡುವ ಪೋಟಗಿ ಖರ್ಚಾಗುತ್ತಿತ್ತು. ಮಾಡಿದ ಅರ್ಜಿಗಳಿಗೆ ಉತ್ತರ ಬರಲು ಆರು ತಿಂಗಳುಗಳೇ ಹಿಡಿಯುವವು. ನಂತರ ಇಂಟರವ್ಯೂದ ನಾಟಕ "ನೀನು ಯಾವಾಗ ಮಾಟ್ರಿಕ್ ಪಾಸಾದಿ? ಬಿ.ಎಸ್.ಸಿಗೆ ಯಾವ ವಿಷಯ ತೆಗೆದುಕೊಂಡಿದ್ದಿ? ಅಮೇರಿಕೆಯಲ್ಲಿ ಯಾವ ವಿಶ್ವವಿದ್ಯಾಲಯದಲ್ಲಿದ್ದಿ? ಎಷ್ಟು ಪಗಾರ ನಿರೀಕ್ಷಿಸುತ್ತಿ? ಹಾಜರಾಗಲು ಎಷ್ಟು ಸಮಯ ತೆಗೆದುಕೊಳ್ಳುತ್ತಿ?" ಮುಂತಾದ ಅರ್ಥವಿಲ್ಲದ ಪ್ರಶ್ನೆಗಳು. ನಾಟಕದ ಕೊನೆಯಲ್ಲಿ ಮೊದಲೇ ನಿರ್ದಿಷ್ಟವಾದ ಪಾತ್ರಧಾರಿಗೆ ಮೊದಲನೆ ನಂಬರ! ಎಂದು ಫಲಿತಾಂಶ ಹೊರಡಿಸಿ ಅವನ ಕೊರಳಿಗೇ ವಿಜಯಮಾಲೆ ಹಾಕುವದು. ಇಂತಹ ಭಾರತದಲ್ಲಿ ನಂಟಸ್ತಿಕೆ, ವಸೀಲಿ, ಶಿಫಾರಸುಗಳಿಲ್ಲದೇ ಯಾರಾದರೂ ಯಶಸ್ವಿಯಾಗುವದುಂಟೆ? ತಾವೇ ಎಷ್ಟೊಂದು ಸ್ಥಳಕ್ಕೆ ಅರ್ಜಿ ಹಾಕೆಂದು

ಫಾರ್ಮುಗಳನ್ನು ಕಳಿಸಿರಲಿಲ್ಲ? ಯಾವುದಕ್ಕೆ ನನ್ನ ಆಯ್ಕೆಯಾಯಿತು? ಕೊನೆಗೆ ಎಲ್ಲ ದೃಷ್ಟಿಯಲ್ಲೂ ನನಗಿಂತ ಕಡಿಮೆ ಅರ್ಹತೆಯುವರನ್ನು ತೆಗೆದುಕೊಳ್ಳಲಾಯಿತು.....ಸರಕಾರಕ್ಕೆ ಭಾರವಾಗಿ ಜನಸಾಮಾನ್ಯರ ಮೇಲೆ ಕರವಾಗಿ-ಕೀಟದಂತೆ ಜೀವಿಸುವ ಇಚ್ಛೆ ನನಗಿಲ್ಲ. ನಾನು ನೌಕರಿ ಇಲ್ಲದೇ, ರೊಕ್ಕವಿಲ್ಲದೇ, ಆಹಾರವಿಲ್ಲದೇ, ಮರದ ನೆರಳಿನಲ್ಲಿ ಬಿದ್ದು ಸತ್ತರೂ ಚಿಂತೆಯಿಲ್ಲ. ಆದರೆ ಈ ಪೋಟಗಿ ನನಗೆ ಬೇಕಾಗಿಲ್ಲ. ಆದ್ದರಿಂದ ಇಂದೆಯೇ ಇದೇ ನನ್ನ ರಾಜೀನಾಮಯೆಂದು ತಿಳಿದುಕೊಳ್ಳಲು ಅಡ್ಡಿಯಿಲ್ಲ. ಇದಕ್ಕಾಗಿ ಮೂರು ತಿಂಗಳು ಕಾಯುವ ಅವಶ್ಯಕತೆ ಇಲ್ಲ. ಒಂದು ವರ್ಷದವರೆಗೆ ದಯಪಾಲಿಸಿದ ನಿಮ್ಮ ಪೋಟಗಿಗೆ ಆಭಾರಿಯಾಗಿರುವೆ.

ಇಂತೀ

ಎಸ್. ಅರುಣ

ಪತ್ರವನ್ನು ಇನ್ನೊಮ್ಮೆ ಓದಿ ಕವರಿನಲ್ಲಿ ಹಾಕಿದ್ದಾಯಿತು. ನೌಕರಯನ್ನಂತೂ ಬಿಟ್ಟದ್ದಾಯಿತು. ಇನ್ನು ಮುಂದೇನು? ಭಾರತಾಂಬೆಗೆ ನಾನು ಬೇಡವಾದರೆ ನನಗಾದರೂ ಅವಳು ಏಕೆ ಬೇಕು? ಇಷ್ಟು ಕಷ್ಟಗಳನ್ನು ಅನುಭವಿಸಿ ಭಾರತದಲ್ಲಿ ಇದ್ದಾದರೂ ಪ್ರಯೋಜನವೇನು? ಇವುಗಳಿಂದ ದೂರ ದೂರ ಹೋಗಬೇಕು. ಎಲ್ಲಿಗೆ? ಜೀವನದಲ್ಲಿ ಹಲವಾರು ಮಾರ್ಗಗಳನ್ನು ಕೊಡಮಾಡಿದ ಅಮೇರಿಕೆಗೆ......ಎಂತಹ ದುಃಖವನ್ನೂ ಮರೆಮಾಡುವ ಹೆಣ್ಣು, ಹೊನ್ನು, ಹೆಂಡಗಳಿರುವ ದೇಶಕ್ಕೆ. ಹೌದು ಅಮೇರಿಕೆಗೆ ಹೋಗಬೇಕು. ವಿಜಯನಂತೆ ಮಸ್ತಾಗಿ ಇರಬೇಕು. ನಮ್ಮ ಜೀವನ ಕ್ಷಣಿಕ. ಇದ್ದಷ್ಟು ಕಾಲ ಮೋಜಾಗಿರಬೇಕು. ಹೌದು! ಅಮೇರಿಕೆಗೆ ಧಾವಿಸಬೇಕು. ಅದೇ ಸರಿಯಾಗ ಮಾರ್ಗ.

ಅಮೇರಿಕೆಗೆ ಮರಳಿ ಹೋಗಬೇಕೆಂದು ನಿರ್ಧರಿಸಿದಾಗ ಎಲ್ಲಕ್ಕಿಂತ ಮೊದಲು ಅಮೇರಿಕೆಯ ಪ್ರಾಧ್ಯಾಪಕರು ಕಣ್ಣೆದುರು ಬಂದರು. ಅವರು ಇನ್ನು ಒಂದೆರಡು ವರ್ಷ ಇದ್ದು ಹೋಗೆಂದು ಎಷ್ಟು ಹೇಳಿದ್ದರು! ಆದರೆ ನಾನೇ ಹುಚ್ಚನಂತೆ, ಈ ಭಾರತಕ್ಕಾಗಿ, ಆಶಾಳಿಗಾಗಿ ನನ್ನ ದೇಶ, ನನ್ನ ಬಾಂಧವರಿಗಾಗಿ ಎಂದು ಓಡಿ ಬಂದಿದ್ದೆ.

* * *

ಹಿಂದಿನ ಕಹಿ ನೆನಪುಗಳು ಮರುಕಳಿಸಿದಂತೆ ಅರುಣನಿಗೆ ಅದನ್ನು ಮರೆಯಲು ಏನು ಮಾಡಬೇಕೆಂಬುದು ತೋಚದಾಯಿತು. ಸೆರೆ ಸೇವಿಸಿದರೆ ಸ್ವಲ್ಪ ನೆಮ್ಮದಿಯಾಗಬಹುದೆಂದು ಅನಿಸಿತು. ರೂಢಿ ಇಲ್ಲದ್ದರಿಂದ ಈ ಮೊದಲಿನ ಬಿಯರ್ ಸೇವನೆಯೇ ತಲೆಗೇರಿಬಿಟ್ಟಿತ್ತು. ಇನ್ನಷ್ಟು ಸೇವಿಸಿ ಮೋಜು ನೋಡೋಣವೆಂದು

ಹಡಗದ ಬಾರಿ (ಬಾರ್)ಗೆ ಹೋಗಿ ಒಂದು ಸ್ಕಾಚ್ ಮತ್ತು ಸೋಡಾಕ್ಕೆ ಆರ್ಡರ ಕೊಟ್ಟ. ಒಂದು ಸೋಡಾ ಸ್ಕಾಚ್‌ದೊಂದಿಗೆ ಬೆರೆಸಿದರೂ ಸೇವಿಸಲು ಸಾಧ್ಯವಾಗದೇ ಇನ್ನೊಂದು ಸೋಡಾ ಸೇವಿಸಿದ. ಮೆಲ್ಲಮೆಲ್ಲಗೆ ಸೇವಿಸುತ್ತಿದ್ದಂತೆ ಅರೆ ಜಾಗ್ರತಾವಸ್ಥೆಯಲ್ಲಿ ಇದ್ದ ಹಿಂದಿನ ನೆನಪುಗಳು ಕೆದಕಿದಂತಾಗಿ ಹುಚ್ಚೆದ್ದು ಕುಣಿಯತೊಡಗಿದವು. ಅರ್ಧ ಸೆರೆ ಹಾಗೆಯೇ ಬಿಟ್ಟು, ಹಣ ತೆತ್ತು ಮತ್ತೆ ಹಡಗದ ಡೆಕ್ಕಿಗೆ ಬಂದು ಮೂಲೆಯಲ್ಲಿ ಕುಳಿತು ತನ್ನಲ್ಲೆ ಮಾತನಾಡಿಕೊಳ್ಳಲಾರಂಭಿಸಿದ.

"ನಾನು, ನಾನು ಪ್ರಾಧ್ಯಾಪಕರಿಗೆ ಒಂದು ಪತ್ರ ಬರೆದು ಆ ಮಗ ನಂಜುಂಡಯ್ಯನ ಹತ್ತಿರ ಹೋದೆ. ಅವನ ಟೇಬಲ್ಲಿನ ಮೇಲೆ ರಾಜೀನಾಮೆ ಪತ್ರ ಒಗೆದಾಗ ಬೆಪ್ಪಾಗಿ ಹೋದ. ನೀನು ಕೊಟ್ಟ ತಾಪತ್ರಯಗಳಿಗೆಲ್ಲ ಧನ್ಯವಾದ" ಎಂದಾಗ ಮೂಕವಾಗಿದ್ದ. "ಮಗನೇ, ನಿನ್ನಂತಹ ನಿರುಪಯೋಗಿ ಆಫೀಸರರನ್ನು ಸಾಕಷ್ಟು ಕಂಡಿದೀನಿ ಕಣೊ.......ನೀವೆಲ್ಲ ನಿಮ್ಮ ಬಿಲದಲ್ಲಿ ಹುದುಗಿ ಕೂಡ್ರುವ ಇಲಿಗಳಂತೆ. ಬಿಲ ಬಿಟ್ಟು ಬಂದರೆ ಯಾವನೂ ಕೇಳದೇ ನಾಯಿ ಬೆಕ್ಕುಗಳ ಪಾಲಾಗುತ್ತೀರಿ. ನಾನು ಹುಲಿಯ ಮರಿ. ಹುಲಿಮರಿ ಕಾಣೊ, ನಂಜಣ್ಣ! ಬೇಕಾದವರ ಎದುರು ನಿಂತು ಹೋರಾಡುತ್ತೇನೆ. ನನಗೆ ಯಾರ ಬೆದರಿಕೆಯೂ ಇಲ್ಲ. ನಿನ್ನಂತಹ ಹತ್ತಾರು ಇಲಿಗಳನ್ನು ಸಾಕಬಲ್ಲೆ. ನನಗೆ ನಿಮ್ಮ ಮಾನ ಮರ್ಯಾದೆ, ಗೌರವವಿಲ್ಲದ ಅರಣ್ಯದಲ್ಲಿಯೇ ಇರಬೇಕೆಂದಿಲ್ಲ. ನಾನು ಅಮೇರಿಕೆಗೆ ಹೊರಟಿದ್ದೇನೆ.........ನೀನೊಂದು ಕೀಳು ಹುಳ ಇಲ್ಲಿಯೇ ಹುಟ್ಟಿ, ಇಲ್ಲಿಯೇ ಬದುಕಿ ಇಲ್ಲಿಯೇ ಹುಳದ ಸಾವು ಕಾಣಬೇಕು. ಎಂದಾದರೂ ನನ್ನ ಸಹಾಯ ಬೇಕಾದರೆ ಬರಿ" ಎಂದು ಹೇಳಿ ಬಿಳುಪೇರಿದ ಅವನ ಮುಖ ನೋಡಿ ಹಃ ಹಃ ಹಃ ಎಂದು ನಗುತ್ತ ಮೇಲಿನ ಅಧಿಕಾರಿಗಳ ಆಫೀಸಿಗೆ ಹೋಗಿ ಅವರಿಗೆ ಧನ್ಯವಾದ ಹೇಳಿ ಅಂದೇ ರಾತ್ರಿ ಊರಿಗೆ ಹೊರಟಿದ್ದೆ.

ಅನಿರೀಕ್ಷಿತವಾಗಿ ಬಂದ ನನ್ನನ್ನು ನೋಡಿ ಅಕ್ಕ-ಭಾವ, ಕಾಕಾರವರಿಗೆ ಆಶ್ಚರ್ಯವಾಯಿತು. ನಾನು ನೌಕರಿಗೆ ರಾಜೀನಾಮೆ ಕೊಟ್ಟಿದ್ದೇನೆ. ತಿರುಗಿ ಅಮೇರಿಕೆಗೆ ಹೊರಟಿದ್ದೇನೆ ಎಂದಾಗ ಅವರಿಗೆ ದಿಗಿಲಾಯಿತು. ಪತ್ರ ಹಾಕಿದ ಒಂದು ವಾರದಲ್ಲಿಯೇ ಅಮೇರಿಕೆಯ ಪ್ರಾಧ್ಯಾಪಕರ ಪತ್ರ ಬಂದಿತ್ತು. ಕೂಡಲೇ General Electric ಆಫೀಸಿಗೆ ಹೋಗಿ ನನ್ನ ನೌಕರಿಯ ವ್ಯವಸ್ಥೆ ಮಾಡಿದರಂತೆ. ನನ್ನ ಹತ್ತಿರ ರೊಕ್ಕವಿರಲಿಕ್ಕಿಲ್ಲವೆಂದು ತಿಳಿದ ಅವರು ಅಮೇರಿಕನ್ ಎಕ್ಸಪ್ರೆಸ್‌ದವರೊಂದಿಗೆ ನನ್ನ ಪ್ರಯಾಣದ ವ್ಯವಸ್ಥೆಯನ್ನು ಮಾಡಿದ್ದರಲ್ಲದೇ ಸಾಕಷ್ಟು ಮುಂಗಡ ಹಣವನ್ನು ಒದಗಿಸಿದ್ದರು. ಭಾರತೀಯರಿಂದ ಒಂದು ರತ್ನ ತಾವು ಎಳೆದುಕೊಳ್ಳುತ್ತಿದ್ದೆವೆಯೇ ಎಂದು ಕಳವಳವನ್ನೂ ವ್ಯಕ್ತಪಡಿಸಿದ್ದರು!

ಸರಿ, ತಿರುಗಿ ಪಾಸಪೋರ್ಟಿಗಾಗಿ ಅರ್ಜಿ, ರಿಝರ್ವ ಬ್ಯಾಂಕಿಗೆ ಅರ್ಜಿ ಎಲ್ಲ ಪ್ರಾರಂಭವಾಯಿತು. ಮನೆಯಲ್ಲಿ ನನ್ನ ಮದುವೆಯ ಮಾತು ಕಥೆಗಳು ಪ್ರಾರಂಭವಾದವು. ನಾನೆಷ್ಟು ಬೇಡವೆಂದರೂ ಕೇಳಲಿಲ್ಲ. ಅಲ್ಲದೇ ಗುರುಹಿರಿಯರಿಂದ ಅವೇ ಮಾತುಗಳನ್ನು ಹೇಳಿಸಿದರು. ನಾನಾಗಲೇ ನೊಂದ ಅವರನ್ನು ಇನ್ನಷ್ಟು ನೋಯಿಸುವ ಮನಸ್ಸಿಲ್ಲದೇ ಸುಮ್ಮನಿದ್ದೆ. ಮೌನವನ್ನು ಸಮ್ಮತಿ ಎಂದು ಅವರು ಅರ್ಥಮಾಡಿಕೊಂಡರು. ಎಲ್ಲೆಲ್ಲೂ ವಧು ಶೋಧ ನಡೆಯಿತು. ಅರ್ಧದಷ್ಟು ವಧುಗಳು ಅವರ ಮನಸ್ಸಿಗೆ ಬರಲಿಲ್ಲ. ಅರೆ ಒಪ್ಪಿದ ವಧುಗಳ ತಂದೆತಾಯಿ ಅಷ್ಟು ದೂರದ ದೇಶಕ್ಕೆ ಮಗಳನ್ನು ಕಳಿಸಲು ಒಪ್ಪಲಿಲ್ಲ. ಕೆಲವು ಹುಡುಗಿಯರು ನನ್ನನ್ನೆ ಪಾಸ ಮಾಡಲಿಲ್ಲ! ನಮ್ಮ ಸಣ್ಣ ಜಾತಿಯಲ್ಲಿ ನನಗೆ ಯೋಗ್ಯಳಾದ ವಧು ಸಿಗುವದೇ ಅಸಾಧ್ಯವಾಯಿತು. ಕೊನೆಗೆ ವಧು-ಶೋಧ ಬಹಳ ಗಡಚಿನ ಕೆಲಸವೆಂದು ಎಲ್ಲರೂ ಒಪ್ಪಿದರು!

ಪಾಸಪೋರ್ಟ್ ಸಿದ್ಧವಾಯಿತು. ರಿಝರ್ವ ಬ್ಯಾಂಕಿನಿಂದ ಅಪ್ಪಣೆ ದೊರೆಯಿತು. ಅಮೇರಿಕನ್ ಸರಕಾರದಿಂದ ವಿಸಾವೂ ಸಿಕ್ಕಿತು. ಯಾವ ವಧುವೂ ದೊರೆಯದ್ದರಿಂದ ಒಬ್ಬಂಟಿಗನೇ ಹೋಗಲು ಆಪ್ತೇಷ್ಟರು ಒಪ್ಪಿದರು. ಆದರೆ ಒಂದು ಕರಾರು ಹಾಕಿದರು. ಮುಂದಿನ ವರ್ಷ ಬೇಸಿಗೆಯಲ್ಲಿ ರಜೆ ಪಡೆದು ಭಾರತಕ್ಕೆ ಬಂದು ಮದುವೆಯಾಗಬೇಕು ಎಂದು. ಹೌದು ಅಲ್ಲಿಯ ತನಕ ನಾನು ವಿಜಯನಂತೆ ಮೋಜು ಮಾಡಬೇಕು. ನನ್ನ ಬಲೆಗೆ ಯಾವ ಹುಡುಗಿ ಬೀಳದಿದ್ದರೆ ವಿಜಯನ ಹತ್ತಿರ ಆ ಕಲೆಯನ್ನು ಕಲಿಯಬೇಕು. ಎಷ್ಟೇ ಮಜಾ ಮಾಡಿದರೂ ಯಾವ ಹುಡುಗಿಯೊಂದಿಗೂ ತೊಡಕಿನಲ್ಲಿ ಸಿಕ್ಕು ಬೀಳಬಾರದು. ಒಂದು ವರ್ಷದ ನಂತರ ಭಾರತಕ್ಕೆ ಬಂದು, ಒಳ್ಳೆಯ ಹುಡುಗಿಯೊಬ್ಬಳನ್ನು ಮದುವೆಯಾಗಿ ತಿರುಗಿ ಅಮೇರಿಕೆಗೆ ಹೋಗಬೇಕು. ಆಗ ಈ ಸೂ-ಮಕ್ಕಳು ನನ್ನ ಸುಖಸಂತೋಷಗಳನ್ನು ಹೇಗೆ ಕಸಿದುಕೊಂಡಾರು? ಹ! ಹ! ಹ!

* * *

ಹೊತ್ತು ಏರುತ್ತಿದ್ದಂತೆ ಹೊಟ್ಟೆ ತಾಳ ಹಾಕಲಾರಂಭಿಸಿತು. ಗಡಿಯಾರ ನೋಡಿದಾಗ ಆದಾಗಲೇ ಊಟದ ಹೊತ್ತಾಗಿ ಹೋಗತ್ತು. ಭಾರವಾದ ಕಾಲುಗಳನ್ನು ಹಾಕುತ್ತ ಊಟದ ಮನೆಗೆ ಅರುಣ ಹೋದ. ಚೆನ್ನಾಗಿ ಹಸಿವೆಯಾದ್ದರಿಂದ ಊಟ ಬಹಳ ರುಚಿಯಾಯಿತು. ನೆತ್ತಿಗೆ ಏರಿದ್ದ ಸೆರೆಯ ಅಮಲು ಇಳಿಯಿತು. 'ಈಗ ತಿಳಿಯಿತು ಪಾಶ್ಚಿಮಾತ್ಯರು ಊಟಕ್ಕೆ ಮೊದಲು ಸೆರೆಯ "ಪಂಚ್" ಏಕೆ ಕುಡಿಯುತ್ತಾರೆ ಎಂದು. ಇನ್ನು ದಿನಾಲ ಊಟಕ್ಕೆ ಮೊದಲು ಸ್ವಲ್ಪ ಸೇವಿಸಬೇಕು' ಎಂದು ನಿರ್ಧರಿಸಿ ತನ್ನ ಕೋಣೆಗೆ ಮರಳಿದ.

ಪತ್ರಗಳ ಫಾಯಿಲ್ ಮೆತ್ತಗಿನ ಹಾಸಿಗೆಯ ಮೇಲೆ ಹಾಯಾಗಿ ಮಲಗಿತ್ತು. ಅದನ್ನು ನೋಡುತ್ತಲೇ ಆಶಾ-ದೇಶಪಾಂಡೆಯವರು, ಅವರ ಅಳಿಯ, ಪತ್ನಿ, ಮಗ, ನಂಜುಂಡಯ್ಯ ತಿರುಗಿ ಕಣ್ಣೆದುರು ಕುಣಿಯಲಾರಂಭಿಸಿದರು. ಎಷ್ಟು ಮರೆಯಲು ಯತ್ನಿಸಿದರೂ ತಿರುತಿರುಗಿ ಕಾಡುತ್ತಿವೆ. ಇದಕ್ಕೆಲ್ಲ ಕಾರಣವಾದ ಈ ಪತ್ರ ರಾಶಿಯನ್ನೇ ನಿರ್ನಾಮಮಾಡಬೇಕು ಎಂದು ಅವುಗಳನ್ನೆಲ್ಲ ಒಟ್ಟುಮಾಡಿ ಹಡಗದ ಡೆಕ್ಕಿಗೆ ಧಾವಿಸಿದ. ಕೈಯಲ್ಲಿ ನಾಲ್ಕೈದು ಪತ್ರಗಳನ್ನು ಹಿಡಿದು ಭರದಿಂದ ಬೀಸುವ ಗಾಳಿಯಲ್ಲಿ ಬಿಟ್ಟು ಬಿಟ್ಟ. ಅವು ಒಂದರೊಡನೊಂದು ಸ್ಪರ್ಧಿಸುತ್ತ ನೀರಿಗೆ ಮುಟ್ಟಿದವು. ಹಡಗದಿಂದ ಹುಟ್ಟಿದ ತೆರೆಗಳು ದೂರ ದೂರ ಅವನ್ನೊಯ್ದು ತೇಲಿಸಿದವು. ಯಾವದೋ ಮೀನು ಕಾಗದವನ್ನು ಆಹಾರವೆಂದು ಭ್ರಮಿಸಿ ಬಾಯಲ್ಲಿ ಹಿಡಿದು ಮರೆಯಾಯಿತು. ಕೆಲಸಕ್ಕೆ ಬಾರದ ಕಾಗದವೆಂದು ಮತ್ತೆ ಚೂರು ಮಾಡಿ ಒಗೆಯಿತೇನೋ! ಚೂರುಗಳು ಮತ್ತೆ ತೇಲತೊಡಗಿದವು. ಪತ್ರಗಳ ದುರವಸ್ಥೆಯನ್ನು ನೋಡುವದು ಮೋಜೆನಿಸಿತು. ಒಂದರ ಹಿಂದೊಂದು ಪತ್ರಗಳು ನೀರಿನ ಪಾಲಾದವು. ಎಲ್ಲ ಪತ್ರಗಳನ್ನು ಗಾಳಿಗೆ ತೂರಿ ಬಿಟ್ಟಾಗ ಅದರ ಜೊತೆಗೆ ತನ್ನ ಕನಸಿನ ರಾಜ್ಯವನ್ನೂ ತೂರಿ ಬಿಟ್ಟೆನೆಂಬ ಕಲ್ಪನೆ ಬಂದಿತು. ಕಾಗದಗಳನ್ನು ಕಳೆದುಕೊಂಡು ಒಂಟಿಯಾಗಿ ಉಳಿದ ಕರೇ ಫಾಯಲ್ ತನ್ನ ಒಂಟಿ ಜೀವನದ ನೆನಪನ್ನು ಮಾಡಿಕೊಟ್ಟಿದ್ದರಿಂದ ಅದನ್ನೂ ಬೀಸಿ ಸಮುದ್ರಕ್ಕೆ ಒಗೆದ.

ಪತ್ರಗಳು ನಾಶವಾದರೂ ಅರುಣನ ಕಹಿ ನೆನಪುಗಳು ನಾಶವಾದವೆಂದು ಹೇಳಲಾಗಲಿಲ್ಲ. ಪತ್ರದಲ್ಲಿ ಬರೆದ ವಾಕ್ಯಗಳು ಹೃದಯದಲ್ಲಿ ಅಚ್ಚೊತ್ತಿದಂತೆ ಇದ್ದವು. ಏನು ಮಾಡಬೇಕೆಂದು ತೋಚದೆ ಚಡಪಡಿಸುತ್ತಾ ತಿರುಗಿ ಬಂದು ಹಾಸಿಗೆಯಲ್ಲಿ ಬಿದ್ದುಕೊಂಡ.

"ಗಾಳಿ ಪಟದಂತೆ ಮೇಲಕ್ಕೆ ಏರುವವರು ಈಗ ಹರಿದ ಗಾಳಿಪಟದಂತೆ ಒಮ್ಮೆಲೆ ಭೂಮಿಗೆ ಇಳಿಯಲು ಪ್ರಾರಂಭಿಸಿರುವಿರಾ? ನಿಮ್ಮ ಸ್ಥೈರ್ಯ, ಧೈರ್ಯ, ಕನಸು, ನಿರ್ಧಾರಗಳು ಇಷ್ಟು ಸುಲಭವಾಗಿ ಬಿರುಕು ಬಿಟ್ಟವೇ? ಜೀವದ ಉದ್ದಕ್ಕೂ ಹೋರಾಡುತ್ತಲೇ ಮಡಿಯಬೇಕೆಂದವರು ಯುದ್ಧ ಭೂಮಿಯಿಂದ ಕಾಲು ತೆಗೆಯುತ್ತಿದ್ದೀರಲ್ಲ! ಆಶಾಳಿಲ್ಲದ ಜಗತ್ತಿನಲ್ಲಿ ಭಯವಾಯಿತೇ? ಅರುಣ, ಇಷ್ಟೊಂದು ಪರಿಶ್ರಮದಿಂದ ಗಳಿಸಿದ ಜ್ಞಾನ ಇಷ್ಟು ಸುಲಭವಾಗಿ ನೀರ ಪಾಲು ಮಾಡಲು ಒಪ್ಪಿಕೊಂಡಿರಾ? ನಿಮಗೆ ಆಶಾ ಇಲ್ಲದಿದ್ದರೇನಾಯಿತು? ಕ್ರಿಶ್, ನ್ಯಾನ್ಸಿ, ಜೂಲಿಗಳು ಇದ್ದೆ ಇದ್ದಾರಲ್ಲ. ಇದಕ್ಕೆ ನಿಮ್ಮ ಪುರುಷಾರ್ಥ ಮುಗಿಯಿತೆ?"

ಅವೇ ಆಶಾಳ ಮಾತುಗಳು, ಅದೇ ನಗುಮುಖ, ತಿರುತಿರುಗಿ ನೆನಪಾಗುತ್ತಿದ್ದವು. ಶಿವಶಿವಾ! ಇವುಗಳಿಂದ ಎಂದು ಬಿಡುಗಡೆ ಎಂದಾಗ, "ನೀನು ಈ ಲೋಕ ಬಿಟ್ಟಾಗ"

ಎಂದು ಆಶಾ ಅಂದಂತೆ ಕೇಳಿಸಿತು. "ಹೌದೌದು. ಆಶಾ ಆತ್ಮಹತ್ಯೆ ಮಾಡಿಕೊಂಡರೂ ಅವಳಿಗೆ ಪಾಪ ತಟ್ಟದೇ ಇರುವಾಗ ನನಗೇಕೆ ಪಾಪ ಬಂದೀತು? ಹೌದು ಈ ಕಹಿ ನೆನಪುಗಳಿಂದ ಮುಕ್ತಿಪಡೆಯಲು ಒಂದೆ ಮಾರ್ಗ. ಆತ್ಮಹತ್ಯೆ. ನಾನು ಯಾರಿಗಾಗಿ ಜೀವಿಸಬೇಕು? ಅಕ್ಕ, ಭಾವ, ಕಾಕಾ, ಒಂದು ದಿನ, ಎರಡು ದಿನ ಕಣ್ಣೀರು ಹಾಕಿಯಾರು? ನಂತರ ಎಲ್ಲವೂ ಸರಿಹೋಗುವದು- ಹೌದು ಇದೇ ಮಾರ್ಗ. ಪತ್ರಗಳನ್ನು ಹಿಂಬಾಲಿಸಿ ನಾನೂ ಹೋಗಬೇಕು. ಹೌದು! ಹೌದು! ಆಶಾಳಿದ್ದಲ್ಲಿ ಹೋಗಬೇಕು" ಎಂದು ರಭಸದಿಂದ ಹಡಗದ ಮೇಲ್ಭಾಗಕ್ಕೆ ಮತ್ತೆ ದಾವಿಸಿದ. ಅರುಣನು ಓಡಿದ ರಭಸ ನೋಡಿ ಏನು ಅನಾಹುತವಾಯಿತೆಂದು ತಿಳಿಯದೇ ನೋಡಿದ ಹಲವರು �ೆಪ್ಪಾಗಿ ನಿಂತುಬಿಟ್ಟರು.

೧೩

ದೈವವೇ! ನನ್ನನ್ನೇಕೆ ಇಷ್ಟೊಂದು ಕಠೋರವಾಗಿ ದಂಡಿಸುತ್ತಿರುವಿ? ನನ್ನ ಅಪರಾಧವೇನು? ಬಡ ಕುಟುಂಬದಲ್ಲಿ ಜನ್ಮವೆತ್ತಿದ್ದು ತಪ್ಪೇ? ಬುದ್ಧಿಶಾಲಿಯಾಗಿ, ಕಷ್ಟಪಟ್ಟು ಜೀವನದಲ್ಲಿ ಮುಂದೆ ಬಂದದ್ದು ತಪ್ಪೆ? ಉತ್ತಮ ವಿದ್ಯಾರ್ಥಿಯೆನಿಸಿಕೊಂಡು, ಪಾರಿತೋಷಕ, ಶಿಷ್ಯವೃತ್ತಿ, ಕೀರ್ತಿ, ಶಿಕ್ಷಕರಿಂದ ಆದರ ಪಡೆದದ್ದು ತಪ್ಪೇ? ಸ್ವಪ್ರಯತ್ನದಿಂದ ವಿದೇಶಕ್ಕೆ ಹೋಗಿ ಅಲ್ಲಿ ಜಯಶಾಲಿಯಾಗಿ ಬಂದದ್ದು ತಪ್ಪೇ? ಅಥವಾ ಒಲಿದು ಬಂದ ನಾರಿಗೆ ನನ್ನ ಸರ್ವಸ್ವ ಧಾರೆಯೆರದು ಕೊಡಲು ಸಿದ್ಧನಾದದ್ದು ತಪ್ಪೇ?

ಅಮೇರಿಕೆಯಲ್ಲಿ ನನ್ನ ದುಡಿಮೆ ನೋಡಿ ಎಷ್ಟೊಂದು ಜನರು ಬೊಟ್ಟು ಕಚ್ಚಿರಲಿಲ್ಲ? ಎಷ್ಟೊಂದು ಹುಮ್ಮಸ, ಎಷ್ಟೊಂದು ಹುರುಪಿನಿಂದ ಕಟ್ಟುತ್ತಿದ್ದ ಆಶಾಗೋಪುರಗಳಲ್ಲಿ, ಅವನ್ನು ಪೂರ್ಣಗೊಳಿಸುವ ಪ್ರಯತ್ನದಲ್ಲಿ ದಿನ, ತಿಂಗಳು, ವರ್ಷಗಳು ಹೇಗೆ ಉರುಳಿದವೆಂದು ಗೊತ್ತೇ ಆಗಲಿಲ್ಲ. ನನ್ನ ತ್ಯಾಗಮಯ ಜೀವನ ನೋಡಿದ ನನ್ನೊಡನಿದ್ದ ಭಾರತೀಯ ಮತ್ತು ಪಾಕಿಸ್ತಾನಿ ಬಾಂಧವರು ನಾನೊಬ್ಬ ಸನ್ಯಾಸಿಯೆಂದು ತಿಳಿದಿದ್ದರು. ವಿಕ್ಷಿಪ್ತ ಆದರೆ ನಿರುಪದ್ರವಿ ಪ್ರಾಣಿಯೆಂದು ನಂಬಿದ್ದರು. ಹಲವಾರು ಜನರು ನನ್ನನ್ನು ವಿಶ್ವಾಸಪಾತ್ರನೆಂದು ಕಂಡುಕೊಂಡು ತಮ್ಮ ಜೀವನದ ಹಲವಾರು ರಹಸ್ಯಗಳನ್ನು ತೋಡಿಕೊಂಡಿದ್ದರು. ಅವನ್ನೆಲ್ಲ ತಾಳ್ಮೆಯಿಂದ ಕೇಳಿಕೊಂಡು ಅವರಿಗೆಲ್ಲ ಸಾಕಷ್ಟು ತಿಳಿಹೇಳಿ, ಶಿಸ್ತು ಸಂಯಮಗಳತ್ತ ಅವರನ್ನು ಎಳೆಯಲು ಯತ್ನಿಸಿದ್ದೆ. ಆಗ ನನಗೆ ದೊರೆತ ಮಾನ್ಯತೆ, ಕೃತಜ್ಞತೆಗಳಿಂದ ನಾನು ದೊಡ್ಡ ವಿಜಯ ಗಳಿಸಿದ್ದೇನೆಂದು ನಂಬಿದ್ದೆ. ಆದರೆ ನನಗೇ ಆ ಮಾರ್ಗ ಹುಡುಕುವ ಸಂದರ್ಭ ಬಂದಾಗ

ನಾನೇಕೆ ಕುರುಡನಾಗಿದ್ದೆ? ಬಹುಶಃ ಅವರು ಕೈಕೊಂಡ ಮಾರ್ಗ ಸರಿಯಿದ್ದು ನನ್ನದು ತಪ್ಪಾಗಿರಬಹುದೇ?......ಇರಬೇಕು ಅಂತೇ ಜೀವನದಲ್ಲಿ ಅವರೆಲ್ಲ ಮುಂದೆ ಬಂದಿದ್ದಾರೆ. ನಾನು ಹಿಂದೆ ಬಿದ್ದಿದ್ದೇನೆ. ಪಶುಪಕ್ಷಿಗಳಿಗೂ ಜೀವನದಲ್ಲಿ ಸಿಗಬಹುದಾದ ನೆಮ್ಮದಿ, ತೃಪ್ತಿ ನನ್ನ ಪಾಲಿಗೆ ಇಲ್ಲವಾಗಿವೆ! ನನ್ನ ಜೀವನ ನನಗಾಗಿ ಇಲ್ಲವೇ ಪರರ ನೆಮ್ಮದಿಗಾಗಿ ಮೀಸಲಾಗಬೇಕಿತ್ತು! ನಾನು ಏನು ಸಾಧಿಸಿದಂತಾಯಿತು, ಎಲ್ಲವೂ ನನ್ನ ಹತ್ತಿರ ನಡೆದು ಬರುತ್ತಿದ್ದಾಗ, ಆದರ್ಶದ ಬೆನ್ನು ಹತ್ತಿ ದೂರ ಸರಿದು ನಿಂತೆ. ದೊರೆಯದಾಗ ಹಾತೊರೆದೆ. ನನ್ನನ್ನು ನಂಬಿ ಬಂದವರಿಗೂ ಅನ್ಯಾಯ ಮಾಡಿದೆ. ಹಲವರು ಸುಖವೆಂದು ನಂಬಿ ಮುಂದುವರಿದಾಗ ಅವರಿಗೆ ಹಿಂದೆ ಎಳೆದು ಕವಲುದಾರಿ ನಾನು ತೋರಿಸಿರಬೇಕು. ಅದಕ್ಕೆಂದೇ ಅವರಿಗೆ ಕೊಟ್ಟ ಸುಳ್ಳು ಪ್ರೇರಣೆಗೆ, ನನಗೆ ಇದು ಪ್ರಾಯಶ್ಚಿತ್ತವಿದ್ದಿರಬಹುದೇ!

ಅಮೇರಿಕೆಗೆ ಹೊರಟಾಗ ಹಡಗದಲ್ಲಿ ಸಂಧಿಸಿದ ಆ ಬಡಕಲು ಬಂಗಾಲಿ ಹುಸೇನ್! ಸ್ತ್ರೀಯರಲ್ಲಿ ಅದೆಷ್ಟು ಆಸಕ್ತಿ ಅವನಿಗೆ! ಪೂರ್ವ ಬಂಗಾಲದಲ್ಲಿ ಮನೆಗೊಂದು ಹೊಂಡ, ಕೇರಿಗೊಂದು ಕೆರೆ, ಊರಿಗೊಂದು ಹೊಳೆ ಇದ್ದೇ ಇರುವದಂತೆ. ಮಳೆಗಾಲದಲ್ಲಿ ಹೊಲಗಳೂ ಸರೋವರಗಳಾಗಿ ಬಿಡುತ್ತವಂತೆ. ಆಗ ಎಲ್ಲರೂ ಈ ಸರೋವರದಲ್ಲೆ ಬಿದ್ದು ಈಸುವದು ರೂಢಿಯಂತೆ. ಹಾಗೆ ನೆರೆ ಕೆರೆಯ ಮಹಿಳೆಯರು ನೀರಿಗಿಳಿದಾಗ ಈ ಗೋಪೀಕೃಷ್ಣ, ಜಲಕ್ರೀಡಾಸಕ್ತನಾಗಿ ಅವರನ್ನು ವಿಧವಿಧವಾಗಿ ಪೀಡಿಸುತ್ತಿದ್ದನಂತೆ! ಗೋಪಿಯರಾದರೂ ಇದರ ಬಗ್ಗೆ ಮನೆಯುವರಿಗೂ ತಿಳಿಸಲಾರದೇ ಸುಮ್ಮನೆಯೂ ಇರಲಾರದೇ ನೀರ ಹೊರಗಿನ ಮೀನಿನಂತೆ, ನೀರಿನಲ್ಲಿಯೇ ಚಡಪಡಿಸುತ್ತಿದ್ದರಂತೆ. ಮುಂದೆ ಆತ ಹುಟ್ಟು ಊರು ಬಿಟ್ಟು ಡಾಕ್ಕಾಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಹೋದನಂತೆ. ಕೇಳುವದೇನು? ಹಿಂದು-ಮುಸ್ಲಿಂ ಹುಡುಗಿಯರು ಮನೆಗೆಲಸ ಬಿಟ್ಟರೆ ನಿರುಪಯೋಗಿ! ಎಂದು ನಂಬಿದ್ದರಿಂದ ಒಬ್ಬ ಕ್ರಿಶ್ಚನ್ ಹುಡುಗಿಯ ಸಹವಾಸ ಮಾಡಿದನಂತೆ. ಅನುರಕ್ತಿ ಬೆಳೆದು ಮದುವೆಗೂ ಸಿದ್ಧನಿದ್ದ. ಆದರೆ ವಿದೇಶಕ್ಕೆ ಹೋಗುವ ಸಂದರ್ಭ ದೊರಕಿದ್ದರಿಂದ ಹಿಂದಿರುಗಿ ಬಂದ ಮೇಲೆ ಮದುವೆಯಾಗುತ್ತೇನೆಂದು ಮಾತು ಕೊಟ್ಟ. ಹಡಗಿನಲ್ಲಿ ಹೊರಟಾಗ ತನ್ನ ಪ್ರಣಯದ ಸವಿನೆನಹುಗಳನ್ನು ನೆನೆದು ನಿಟ್ಟುಸುರು ಬಿಡುತ್ತಿದ್ದನಂತೆ.

ಹಡಗದಲ್ಲಿಯೇ ಆತ ನಿರ್ಮಲಾಘೋಷ್‌ಳನ್ನು ಸಂಧಿಸಿದ್ದು. ಅವಳ ಪತಿ ಮದುವೆಯಾದ ಕೂಡಲೇ ಲಂಡನ್ನಿಗೆ ಹೋಗಿ ಬಿಟ್ಟನಂತೆ. ಈಕೆ ಹಿಂದಿನಿಂದ ಆತನಿದ್ದಲ್ಲಿ ಹೊರಟಿದ್ದಳು. ಈ ಸುಂದರಿಗೆ ಬಂಗಾಲಿ ಬಿಟ್ಟರೆ ಇನ್ನಾವ ಭಾಷೆ ಬಾರದು. ಇಂಗ್ಲಿಷ್ ಕೂಡ ಅಷ್ಟಕಷ್ಟೆ. ತನಗೆ ಮಾತನಾಡಲು ಬಾಂಧವ ದೊರೆತನೆಂದು ಹುಸೇನನ

ಹತ್ತಿರ ಬರುತ್ತಿದ್ದಳು. ಆತನ ಕಾಮುಕ ದೃಷ್ಟಿ ತನ್ನ ಮೇಲೆ ಬಿದ್ದದ್ದು ಆ ಮುಗ್ಧೆಗೆ ತಿಳಿಯಲೇ ಇಲ್ಲ. ನಮಗಿಬ್ಬರಿಗೆ ಒಂದೇ ಕೆಬಿನ್ ದೊರೆತಿತ್ತು; ಆಕೆ ಬಂದಾಗ ನನ್ನನ್ನು ಹೊರಗೆ ಕಳಿಸುವಂತೆ ಮಾಡಿದ ಹುಸೇನನ ಪ್ರಯತ್ನಗಳೆಲ್ಲ ವಿಫಲವಾದವು. ಆತನಿಗೆ ಏಕಾಂತ ದೊರೆಯದಂತೆ ಹೆಚ್ಚಿನ ಎಚ್ಚರ ವಹಿಸಿದ್ದೆ. ಲಂಡನ್ನಿನಲ್ಲಿ ಇಳಿಯುತ್ತಿದ್ದಂತೆ, "ಕೈಗೆ ಬಂದ ತುತ್ತು ಬಾಯಿಗೆ ಬರದಂತೆ ತಡೆದ ದುಷ್ಟ ನೀನು! ಜೀವನದಲ್ಲಿ ವಿಲಿವಿಲಿ ಒದ್ದಾಡು!" ಎಂದು ಶಾಪ ಕೊಟ್ಟು ಹೋಗಿರಲಿಲ್ಲವೇ ಹುಸೇನ್? ವಿವಾಹಿತಳೊಬ್ಬಳ ಮಾನ ಕಾಪಾಡಿದೆ ಎಂದು ಗುಂಗಿನಲ್ಲಿದ್ದೆ ನಾನು. ನಿರ್ಮಲಾಘೋಷ್ ಕೂಡ ಆತನ ಸಹವಾಸ ಬಯಸಿದ್ದಳೇ ಎಂದು ತಪ್ಪಿ ಕೂಡ ಆಲೋಚಿಸಿರಲಿಲ್ಲವಲ್ಲ ನಾನು? ಒಂದು ವೇಳೆ ಅವಳೂ ಇಚ್ಛಿಸಿದ್ದರೆ.......ಹಾಗಿದ್ದರೆ ಇಬ್ಬರಿಗೂ ಅನ್ಯಾಯ ಮಾಡಿದಂತಾಗಲಿಲ್ಲವೇ ನಾನು?

ಅಮೇರಿಕೆಗೆ ಬಂದ ಹೊಸದರಲ್ಲಿ, ವಾಸಿಸಲು ಸ್ಥಳ ಹುಡುಕುತ್ತಿದ್ದಾಗ ಹಮೀದನ ಭೆಟ್ಟಿಯಾಗಿತ್ತು. ತನ್ನ ಪರಿಚಯ ಮಾಡಿಕೊಡುತ್ತ ಮಧ್ಯ ಪಾಕಿಸ್ತಾನದವ! ಎಂದಿದ್ದ. ನನಗೆ ಅರ್ಥವಾಗದಿದ್ದಾಗ, ಪಾಕಿಸ್ತಾನದ ಮಧ್ಯ ಇರುವ ಲಖನೌದವನೆಂದು, ಆದರೆ ಇರುವದು ಕರಾಚಿಯಲ್ಲಿ! ಎಂದು ಹೇಳಿದ್ದ.

ತುಂಬ ಆದರದಿಂದ ಮನೆಗೆ ಕರೆದುಕೊಂಡು ಹೋಗಿ ಒಳ್ಳೆಯ ಸ್ಥಳ ಸಿಗುವ ತನಕ ತಮ್ಮೊಡನೆ ಇರು, ಎಂದು ಉಪಚರಿಸಿದ. ಒಂದೇ ಮನೆಯಲ್ಲಿ ಇರುವಂತಾದಾಗ ತೀರ ಹತ್ತಿರದಿಂದ ಅವನನ್ನು ತಿಳಿದುಕೊಳ್ಳುವಂತೆ ಆಗಿತ್ತು. ಪಾಕಿಸ್ತಾನದಲ್ಲಿ ಕಲೆಕ್ಟರನಾಗಿದ್ದನಾತ. ಆಡಳಿತದ ಹೆಚ್ಚಿನ ಅಭ್ಯಾಸಕ್ಕಾಗಿ ಸರಕಾರದ ವತಿಯಿಂದ ಬಂದಿದ್ದ. ಕರಾಚಿಯಲ್ಲಿ ಧರ್ಮಪತ್ನಿ, ಮೂರು ಮಕ್ಕಳು ಇದ್ದರು. ಶಿಷ್ಯವೃತ್ತಿಯ ಹಣ ಹೆಚ್ಚು ದೊರೆತರೆ ಹೆಂಡತಿ ಮಕ್ಕಳನ್ನು ಕರೆತರುತ್ತಿದ್ದೆ! ಎಂದು ಎಷ್ಟೋ ಬಾರಿ ಹಳಹಳಿಸಿದ್ದು ಉಂಟು. ಇಂಥದರಲ್ಲಿ ಆತನಿಗೆ ಫಾತಿಮಾಳ ಪರಿಚಯವಾಯಿತು. ನರ್ಸಿಂಗ ವಿಷಯದಲ್ಲಿ ಹೆಚ್ಚಿನ ತರಬೇತಿ ಪಡೆಯಲು ಪಾಕಿಸ್ತಾನ ಸರಕಾರ ಅವಳನ್ನು ಕಳಿಸಿತ್ತು. ವಯಸ್ಸು ೩೫ ಇರಬಹುದು. ಮದುವೆಯಾಗಿರಲಿಲ್ಲ, ಆಗುವಂತೆಯೂ ಇರಲಿಲ್ಲ. ಹಮೀದನ ಮತ್ತು ಆಕೆಯ ಪರಿಚಯ ಬೆಳೆಯಿತು. ಪರಿಚಯ ಆತ್ಮೀಯತೆಯಲ್ಲಿ ಪರಿವರ್ತನೆಯಾಯಿತು. ಒಮ್ಮೆ ಸೂಚ್ಯವಾಗಿ ಅವನು ಮಾಡುವದು ತಪ್ಪು ಎಂದು ಹೇಳಿದ್ದೆ. ಆಗ ತನ್ನನ್ನು ಸಮರ್ಥಿಸಿಕೊಳ್ಳಲು ಆತ ಆಡಿದ್ದ ಮಾತು ಮೋಜಿನದಾಗಿತ್ತು! "ಫಾತಿಮಾಳಿಗೆ ಗಂಡನಿಲ್ಲ; ನನಗೆ ಹೆಂಡತಿ ಸಮೀಪದಲ್ಲಿಲ್ಲ! ಇಬ್ಬರೂ ಆತ್ಮೀಯರಾಗಿದ್ದಾದರೆ ತಪ್ಪೇನು? ನಮ್ಮ ಧರ್ಮವೇ ನಾಲ್ಕು ಹೆಂಡಂದಿರನ್ನು ಮಾಡಿಕೊಳ್ಳಲು ಅನುಮತಿ ನೀಡಿದೆ" ಎಂದಿದ್ದ. ಆಗ ನಾನು

ನಿಷ್ಠುರತೆಯಿಂದ ಅವನನ್ನು ಖಂಡಿಸಿದ್ದೆ. "ಧರ್ಮ, ನಾಲ್ಕು ಹೆಂಡಂದಿರನ್ನು ಮಾಡಿಕೊಳ್ಳಲು ಅನುಮತಿ ನೀಡಿದೆಯೇ ಹೊರತು ನಾಲ್ಕು ಅನೈತಿಕ ಸಂಬಂಧವನ್ನಲ್ಲ........ ಫಾತಿಮಾ ಬೇಕಾಗಿದ್ದರೆ ಅವಳನ್ನು ಮದುವೆಯಾಗಿ ಬಿಡು. ಆದರೆ ಪತ್ನಿಯನ್ನು ಮರೆಯಲು ಫಾತಿಮಾಳ ಸ್ನೇಹ ಬೆಳೆಸಿದಂತೆ, ತನ್ನ ವಿರಹವನ್ನು ಮರೆಯಲು ನಿನ್ನ ಹೆಂಡತಿ ಇನ್ನಾರದೋ ಸ್ನೇಹ ಬಯಸಿದರೆ?" ನಾನು ಮಾತು ಮುಗಿಸುವಷ್ಟರಲ್ಲಿ ಹುಲಿಯಂತೆ ರೇಗಿ ನನ್ನ ಮೈಮಲೆ ಬಿದ್ದಿದ್ದ 'ನನ್ನ ಪತ್ನಿಯ ಬಗ್ಗೆ ಹೀಗೆಲ್ಲ ಮಾತನಾಡುವ ಅಧಿಕಾರ ನಿನಗೆ ಇಲ್ಲ'ವೆಂದು. "ಅಂತಹ ಪತ್ನಿಯ ಪತಿಯಾಗುವ ಅಧಿಕಾರ ನಿನಗೆ ಇದೆಯೇ?" ಎಂದಾಗ ಕರಗಿ ನೀರಾಗಿಹೋಗಿದ್ದ. ನನ್ನನ್ನು ಅಪ್ಪಿಕೊಂಡು ಕಣ್ಣೀರು ಹಾಕಿದ್ದ. ಅಂದಿನಿಂದ ಪ್ರಯತ್ನಪೂರ್ವಕವಾಗಿ ಫಾತಿಮಾಳಿಂದ ದೂರ ಇರಲಾರಂಭಿಸಿದ್ದ. ಇದಕ್ಕೆಲ್ಲಾ ಕಾರಣನೆಂದು ಫಾತಿಮಾ ಮನವಾರೆ ನನ್ನನ್ನು ಶಪಿಸಿರಬೇಕು! ಮದುವೆಯೆಂದರೆ ಏನು ಎಂದು ಸರಿಯಾಗಿ ತಿಳಿಯದ ನನಗೆ ಅವನ ಆತ್ಮೀಯತೆ ಭಂಗ ಮಾಡುವ ಅಧಿಕಾರವೇನಿತ್ತು? ಬಹುಶಃ ಫಾತಿಮಾಳ ಶಾಪ, ಹುಸೇನನ ಶಾಪ ನನ್ನನ್ನು ಈ ಸ್ಥಿತಿಗೆ ತಂದಿರಬಹುದೇ?

ಅಷ್ಟೇಕೆ? ವಿಜಯನ ಹಲವಾರು ಪ್ರಣಯ ಪ್ರಸಂಗಗಳಲ್ಲಿ ಅವನ ವಿವೇಕ ಜಾಗೃತವಾಗುವಂತೆ ಪ್ರಯತ್ನಿಸಿರಲಿಲ್ಲವೇ? ಜೆಸ್ಸಿಯೊಡನೆಯಂತೂ ಆತ ಶರೀರ ಸಂಬಂಧ ಬೆಳೆಸಿದ್ದ. ಕೊನೆಗೆ ಆಕೆ ಮದುವೆ ಆಗೋಣವೆಂದು ಒತ್ತಾಯ ತಂದಾಗ ಸಲಹೆ ಪಡೆಯಲು ನನ್ನ ಹತ್ತಿರ ಓಡಿ ಬಂದಿದ್ದ. ನಾನು ಶಾಂತನಾಗಿ ಆತ ಹೇಳಿದ್ದನ್ನೆಲ್ಲ ಕೇಳಿಕೊಂಡು ನಮ್ಮ ಸಂಸ್ಕೃತಿಗೂ, ಪಾಶ್ಚಾತ್ಯ ಸಂಸ್ಕೃತಿಗೂ ಇರುವ ಭೇದವನ್ನು (ಅದೂ ನೈತಿಕ ಜೀವನದಲ್ಲಿ) ತಿಳಿಸಿ ನಿಮ್ಮ ಮನೆಯ ಜನ ಈಕೆಯನ್ನು ಒಪ್ಪಿಕೊಂಡಾರೇ? ಜೆಸ್ಸಿ, ಭಾರತೀಯ ಪತ್ನಿಯಂತೆ ನಿನ್ನ ಬಂಧುಬಳಗ ತನ್ನದೂ ಎಂದು ಅರಿತಾಳೇ? ನೀನು ಅವಳೊಡನೆ ಶರೀರಸಂಬಂಧ ಬೆಳೆಸಿರಬಹುದು. ಆದರೆ ಅವಳ ಅಂತರಾಳ ತಿಳಿಯಲು ಯತ್ನಿಸಿದ್ದೀಯಾ? ನೀನು ಅವಳ ಪ್ರಥಮ ಪ್ರಣಯಿ ಎಂದು ಖಚಿತ ಪಡಿಸಿಕೊಂಡಿರುವೆಯಾ? ಎಂದು ಕೇಳಿದ್ದೆ. ನನ್ನಲ್ಲಿ ನಂಬಿಕೆಯಿಟ್ಟು ವಿಜಯ ಅವಳನ್ನು ಹೆಚ್ಚು ಸೂಕ್ಷ್ಮವಾಗಿ ನಿರೀಕ್ಷಿಸತೊಡಗಿದ. ಆ ಮೇಲೆ ಅವಳು ತನಗೆ ಯೋಗ್ಯ ಪತ್ನಿಯಲ್ಲವೆಂದು ನಿರ್ಧಾರಕ್ಕೆ ಬಂದು ಹಾಗೆ ಅವಳಿಗೆ ತಿಳಿಸಿಯೂ ಬಿಟ್ಟ. ಆಗ ಆಕೆ ಗೋಗರೆದು ಅತ್ತಳಂತೆ. ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಹೆದರಿಸಿದಳಂತೆ. ವಿಜಯ ಯಾವುದಕ್ಕೂ ಜಗ್ಗಲಿಲ್ಲ. ಮುಂದೆ ಒಂದೇ ವಾರದ ನಂತರ ಇನ್ನೊಬ್ಬ ಪ್ರಿಯಕರನ ತೆಕ್ಕೆಯಲ್ಲಿ ಅವಳನ್ನು ಕಂಡಿದ್ದ......ಆ ಕ್ಷಣದಿಂದ ವಿಜಯ ನನಗೆ ಕೃತಜ್ಞನಿದ್ದ ನಿಜ......... ಆದರೆ ಇಬ್ಬರ ನಡುವೆ ಒಂದು ಪ್ರಣಯಭಂಗ ಮಾಡಿದ ಪಾಪಿ ನಾನಾದೆನಲ್ಲವೇ?

ಹಾಗೆ ನೋಡಿದರೆ ಥೊಮಸ್‌ನಿಗೂ ಅನ್ಯಾಯ ಮಾಡಿದ್ದೆ. ಲಾಯಬ್ರರಿ ವಿಜ್ಞಾನದ ಹೆಚ್ಚಿನ ವ್ಯಾಸಂಗಕ್ಕಾಗಿ ಕ್ರಿಶ್ಚಿಯನ್ ಶಿಷ್ಯವೃತ್ತಿ ಪಡೆದು ಬಂದಿದ್ದನಾತ. ಪ್ರತಿವಾರ ಚರ್ಚಿಗೆ ಹೋಗುತ್ತಿದ್ದಾಗ ಮೇರಿ-ಬಿಲ್‌ಸ್ಮಿಥ್‌ಳ ಪರಿಚಯವಾಯಿತು ಅವನಿಗೆ. ಮುಂದೆ ಅವರ ಮನೆಯಲ್ಲಿ "ಪೇಯಿಂಗ ಗೆಸ್ಟ್" ಎಂದು ಇರಲಾರಂಭಿಸಿದ. ಬಿಲ್‌ಸ್ಮಿಥ್ ರಿಫ್ರಿಜಿರೇಟರ್ ತಯಾರಿಸುವ ಕಾರ್ಖಾನೆಯೊಂದರಲ್ಲಿ ದೊಡ್ಡ ಅಧಿಕಾರಿಯಾಗಿದ್ದ. ಮೇಲಿಂದ ಮೇಲೆವಿದೇಶಕ್ಕೆ ಹೋಗಬೇಕಾಗುತ್ತಿತ್ತು. ಈ ಸಂದರ್ಭಗಳಲ್ಲೆಲ್ಲ ಒಂಟಿಯಾಗಿದ್ದ ಮೇರಿ ಬೇಸತ್ತಿದ್ದಳು. ಥೊಮಸನ ಸಹವಾಸ ಅವಳಿಗೆ ಹಿತವೆನಿಸಿತು. ಆದರೆ ತನ್ನಿಂದ ಆಕೆ ಏನು ಬಯಸುತ್ತಿದ್ದಾಳೆ? ಎಂದು ಆತ ತಿಳಿಯದೇ ಚಡಪಡಿಸಿದ. ಒಮ್ಮೆ ನನ್ನ ಕಡೆಗೆ ಬಂದಾಗ, ಕಾಫಿ ಸವಿಯುತ್ತ ಮಾತು ನಡೆಸಿದ್ದೆವು. ವಿಷಯ ಧರ್ಮ ಮತ್ತು ಜಾತಿಯತ್ತ ಹೊರಳಿತ್ತು. "ಇಬ್ಬರು ವಿವಾಹಿತರು, ಸ್ವೇಚ್ಛೆಯಿಂದ ವಿವಾಹರಹಿತ ದೇಹಸಂಬಂಧವನ್ನು ತಾತ್ಪೂರ್ತಿಕವಾಗಿ ಇಟ್ಟುಕೊಂಡರೆ ತಪ್ಪೇನು? ಇದು ಕೆಲವೇ ಕಾಲದ್ದು ಅಥವಾ ತಿಂಗಳುಗಳದ್ದು ಇರಬಹುದು ಆದ್ದರಿಂದ ಇಬ್ಬರಿಗೂ ಹಾನಿಯಿಲ್ಲ........ಆದರೂ ಧರ್ಮ ಇದನ್ನೇಕೆ ಖಂಡಿಸುತ್ತದೆ?" ಎಂದು ಕೇಳಿದ್ದ. ಆಗ ನಾನು, "ಈ ಪ್ರಶ್ನೆ ಲಾಭ ಅಥವಾ ಹಾನಿಯದು ಅಲ್ಲ. ನೈತಿಕ ಮಟ್ಟದ್ದು. ಆಡಮ್ ಮತ್ತು ಈವ ಈಡನ್ ಉದ್ಯಾನದಲ್ಲಿ ಇಬ್ಬರೇ ಇದ್ದರು. ಅವರ ದೇಹ ಸಂಬಂಧದಿಂದ ಯಾರಿಗೂ ಹಾನಿಯಾಗುತ್ತಿರಲಿಲ್ಲವಾದರೂ ದೇವರು ಅದನ್ನೇಕೆ ನಿಷೇಧಿಸಿದ್ದ? ಚಂದ್ರಲೋಕದಲ್ಲಿ ಯಾರಿಗೂ ಕಾಣದಂತೆ ಅನೈತಿಕ ಸಂಬಂಧ ಮಾಡಿದರೆ ಅದು ಕ್ಷಮ್ಯವೇ? ನಾವು ಲೋಕವನ್ನು ವಂಚಿಸಬಹುದು. ಆತ್ಮವನ್ನು ವಂಚಿಸಲಾಗದು........ಆದ್ದರಿಂದ ಎಲ್ಲ ಧರ್ಮಗಳಲ್ಲಿಯೂ ಇಂಥ ಸಂಬಂಧ ತ್ಯಾಜ್ಯ"ವೆಂದು ನನ್ನ ನಿರ್ಣಯ ಕೊಟ್ಟು ಬಿಟ್ಟಿದ್ದೆ. ಆಗ ಆತ ತನ್ನ ಕಥೆಯನ್ನು ಹೇಳಿದ. ಆತ್ಮವಂಚನೆಯಾದ ಬಗ್ಗೆ ಹಳಹಳಿಸಿದ್ದ. ತಾನು ಜಾತಿಯಿಂದ ಕ್ರಿಶ್ಚಿಯನ್ ಆದರೂ ನೀನು ನೀತಿಯಿಂದ ಕ್ರಿಶ್ಚಿಯನ್! ಎಂದು ಮನವಾರೆ ನನ್ನನ್ನು ಹೊಗಳಿದ್ದ. ಆಗ ಧರ್ಮ, ನೀತಿಗಳ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲೆನೆಂಬ ಅಹಂಕಾರ ಬಂದಿತ್ತು......ಆದರೆ ಈಗ!"

ಜೀವನದಲ್ಲಿ ಎಲ್ಲ ಕಳೆದುಕೊಂಡು ಅಂಡಲೆಯುತ್ತಿದ್ದೇನೆ. ನನ್ನಿಂದ ಅನೇಕ ಬಾರಿ ಸಲಹೆ ಪಡೆದವರೆಲ್ಲ ಸುಖವಾಗಿ ಬಾಳ್ವೆ ನಡೆಸಿರಬೇಕು. ಆಗ ಉಪದೇಶದ ಹೊರತು ನಾನು ಇನ್ನೇನೂ ಮಾಡಿರಲಿಲ್ಲ...... ಈ ಬಾರಿ ಅಮೇರಿಕೆಗೆ ಹೋಗಿ ನಾನು ಈ ಮೊದಲು ಅರಿಯದ ಹಲವಾರು ಸುಖಗಳನ್ನು ಪಡೆಯಲು ಯತ್ನಿಸುವೆ........ಉಳಿದವರಿಗೆ ನಿಷೇಧಿಸಿದ್ದನ್ನು ನಾನು ಆಚರಣೆಯಲ್ಲಿ ತರುವೆ........ಆಗ ನನ್ನನ್ನು ತಡೆಯುವವರು ಯಾರೂ ಇಲ್ಲ.........ಸೂ...ಮಕ್ಕಳು.

ನನ್ನನ್ನು ಹಿಂಡಿ ಹಿಪ್ಪೆ ಮಾಡಲೆತ್ನಿಸಿದ ಸಮಾಜದಿಂದ, ದೇಶದಿಂದ ದೂರ ಹೋಗುತ್ತಿದ್ದೇನೆ.........ಹ ಹ ಹ! ನನ್ನನ್ನು ತಡೆಯುವವರು ಯಾರು?

## ೧೪

ಮರೆಯಲು ಯತ್ನಿಸಿದಷ್ಟೂ ಹಿಂದಿನ ನೆನಹುಗಳು ನಾಲ್ಕೂ ದಿಕ್ಕಿನಿಂದ ಮುತ್ತಿ ಅರುಣನನ್ನು ಹಣ್ಣು ಮಾಡುತ್ತಿದ್ದವು. ಮನಸ್ಸಿಗೆ ಬಂದಾಗ ಎದ್ದು, ಊಟ, ಚಹ ತೆಗೆದುಕೊಳ್ಳುತ್ತಿದ್ದ. ಹೆಚ್ಚಿನ ಸಮಯ ಕೆಬಿನ್‌ದಲ್ಲೇ ಬಿದ್ದುಕೊಂಡಿರುತ್ತಿದ್ದ. ಸಾವಕಾಶವಾಗಿ ಸೆರೆಯ ರೂಢಿಯನ್ನೂ ಮಾಡಿಕೊಂಡ. ಮನಸ್ಸಿನ ದುಃಖ ಮರೆಯಲು ಸೆರೆ ಸಹಾಯ ಮಾಡುವದೆಂದು ಕಂಡುಕೊಂಡ. ಯಾರೊಡನೆಯೂ ಮಾತನಾಡುತ್ತಿರಲಿಲ್ಲ ಯಾರ ಸಹವಾಸವೂ ಅವನಿಗೆ ಬೇಕಿರಲಿಲ್ಲ. ಹಡಗದವರೆಲ್ಲ ಅವನನ್ನು ಸಮಿೂಪದಿಂದ ಕಂಡವರು ಈತನ ತಲೆ ಕೆಟ್ಟಿರಬೇಕು! ಎಂದುಕೊಂಡು ದೂರವೇ ಇರುತ್ತಿದ್ದರು. ಆತ ತನ್ನಲ್ಲಿ ಮಾತನಾಡಿಕೊಳ್ಳುತ್ತ ಡೆಕ್ಕಿನ ಮೇಲೆ ಗಂಟೆಗಟ್ಟಲೆ ಕುಳಿತಾಗ ನೋಡಿ ಮರುಗುತ್ತಿದ್ದರು. ಐದಾರು ದಿನಗಳು ಹೀಗೇ ಕಳೆದವು.

ಅಂದು ಆಶಾಳ ದುರಂತ ಕೊನೆ, ತನ್ನ ಬರಿದಾದ ಬಾಳುಗಳನ್ನು ನೆನೆ-ನೆನೆದು ರೋದಿಸಿದ್ದ. ಆಶಾಳ ನಗುಮುಖ, ಆ ಮುಗ್ಧ ಸರಳ ಮಾತುಗಳು ಮತ್ತೆ ಮತ್ತೆ ನೆನಪಾಗುತ್ತಿದ್ದವು. ಶಿವಶಿವಾ! ಇವುಗಳಿಂದ ಎಂದು ಬಿಡುಗಡೆ? ಎಂದಾಗ, "ನೀವು ಈ ಲೋಕ ಬಿಟ್ಟಾಗ" ಎಂದು ಆಶಾ ಅಂದಂತೆ ಕೇಳಿಸಿತು. "ಹೌದು. ಆಶಾ ಆತ್ಮಹತ್ಯೆ ಮಾಡಿಕೊಂಡರೂ ಅವಳಿಗೆ ಪಾಪ ತಟ್ಟದೇ ಇದ್ದಾಗ ನನಗೇಕೆ ಪಾಪ ಬಂದೀತು? ಹೌದು ಈ ಕಹಿ ನೆನಪುಗಳಿಂದ ಮುಕ್ತಿ ಪಡೆಯಲು ಒಂದು ಮಾರ್ಗ. ಆತ್ಮಹತ್ಯೆ! ನಾನು ಯಾರಿಗಾಗಿ ಜೀವಿಸಬೇಕು? ಅಕ್ಕ, ಭಾವ, ಚಿಕ್ಕಪ್ಪ, ಒಂದು ದಿನ, ಎರಡು ದಿನ, ಕಣ್ಣೀರು ಹಾಕಿಯಾರು. ನಂತರ ಎಲ್ಲರೂ ಸರಿ ಹೋಗುವದು. ಹೌದು, ಇದೇ ಮಾರ್ಗ. ಪತ್ರಗಳನ್ನು ಹಿಂಬಾಲಿಸಿ ನಾನೂ ಹೋಗಬೇಕು. ಆಶಾಳಿದ್ದಲ್ಲಿ ಹೋಗಬೇಕು. ಆಶಾಳಿದ್ದಲ್ಲಿ ಹೋಗಬೇಕು" ಎಂದುಕೊಂಡು ರಭಸದಿಂದ ಹಡಗದ ಮೇಲ್ಭಾಗಕ್ಕೆ ಧಾವಿಸಿದ. ಇಷ್ಟು ದಿನ ಸಾಮಾನ್ಯವಾಗಿಯೇ ಇರುತ್ತಿದ್ದ ಹುಚ್ಚ ಇಂದೇಕೆ ಹೀಗೆ ಉದ್ವಿಗ್ನನಾಗಿದ್ದಾನೆಂದು ನೋಡಿದವರು ಬೆಪ್ಪಾದರು.

ಕೆಬಿನ್‌ದಿಂದ ಹೊರಬಿದ್ದು ರಭಸದಿಂದ ಮೇಲೇರುತ್ತಿದ್ದಂತೆ ಹಿಂದೆ ಧ್ವನಿಯೊಂದು ಬಂದಂತೆ ಭಾಸವಾಗುತ್ತಿತ್ತು. "ನಿಲ್ರಿ, ಅರುಣ ಸ್ವಲ್ಪ ತಾಳ್ರಿ, ಆತ್ಮಹತ್ಯೆ ಮಾಡಿಕೊಳ್ಳುವದು ಪಾಪವೆಂದು ನೀವೇ ಹಿಂದೆ ಎಷ್ಟೋ ಸಲ ಹೇಳಿರಲಿಲ್ಲವೇ?

ನೀವೇ ಹೀಗೆ ಕಂಗೆಟ್ಟರೆ ಹೇಗೆ?" ಆಶಾಳ ಸವಾಲು. ಹಿಂತಿರುಗಿ ನೋಡಿದಾಗ ಯಾರೂ ಇರಲಿಲ್ಲ. ಇದೆಲ್ಲೊ ತನ್ನ ಭ್ರಮೆಯೆಂದುಕೊಂಡ. ಡೆಕ್ಕಿನ ಮೇಲೆ ಹೋದ. ಕೆಳಗೆ ಇಣಿಕಿ ನೋಡಿದ. ಕಡಲೂ ಕೈ ಮಾಡಿ ಕರೆಯುತ್ತಿತ್ತು. ಈಸು ಚೆನ್ನಾಗಿ ಬಲ್ಲ ತಾನು ಸಾಯುವದು ಸುಲಭವಲ್ಲವೆಂದು ಮನಗಂಡ-ಆದರೂ ಮುಳುಗಲು ಯತ್ನಿಸುವೆನೆಂದ.

ಮತ್ತೆ ಆಶಾಳ ಧ್ವನಿ. "ಆತ್ಮಹತ್ಯೆ ಪಾಪವೆಂದು ಹೇಳಿರಲಿಲ್ಲವೇ? ಜೀವನದಲ್ಲಿ ಏನೇ ಬರಲಿ, ಹೋರಾಡಿ ಸಾಯುತ್ತೇನೆ ಎಂದು ಮಾತು ಕೊಟ್ಟಿರಲಿಲ್ಲವೇ? ನನ್ನಂತೆ ಅಸಹಾಯರೇ ನೀವು? ಹೇಳಿ? ಗಾಳೀಪಟದಂತೆ ಮೇಲಕ್ಕೆ ಏರುವವರು ನೀವಾಗಿದ್ದೀರಿ. ಸಾಕಷ್ಟು ಮೇಲಕ್ಕೆ ಏರಿಯೂ ಇದ್ದೀರಿ. ಈಗ ಹರಿದ ಗಾಳಿಪಟದಂತೆ ಸರ್ರನೆ ನೆಲಕ್ಕೆ ಇಳಿಯಲಾರಂಭಿಸಿದಿರಾ? ನಿಮ್ಮ ಸ್ಥೈರ್ಯ, ಧೈರ್ಯ, ನಿರ್ಧಾರಗಳು ಇಷ್ಟು ಸುಲಭವಾಗಿ ಬಿರುಕು ಬಿಟ್ಟು ಜೀವನದ ಉದ್ದಕ್ಕೂ ಹೋರಾಡುತ್ತಲೇ ಮಡಿಯುತ್ತೇನೆಂದವರು ಈಗ ಹಿಂದೆಗೆಯುತ್ತಿದ್ದೀರಲ್ರೀ? ಎಷ್ಟೊಂದು ಪರಿಶ್ರಮದಿಂದ ಬೆಳೆಸಿದ ವ್ಯಕ್ತಿತ್ವ, ಬುದ್ಧಿಮತ್ತೆ, ಹುಟ್ಟಾ ಪಡೆದ ಪ್ರತಿಭೆಗಳನ್ನೆಲ್ಲ ನೀರಪಾಲು ಮಾಡಲು ಎದ್ದಿರಾ? ಆಶಾಳಿಲ್ಲದಿದ್ರೆ ಏನಾಯಿತು. ನ್ಯಾನ್ಸಿ, ಜೂಲಿ, ಜೆಸ್ಸಿಗಳು ಇದ್ದೇ ಇರುವರಲ್ಲ? ಅವರಲ್ಲಿ ಒಬ್ಬರು ನಮ್ಮ ಬಾಳು ಬೆಳಗರೇ?" ಆಶಾ ಒಂದೇ ಸವನೆ ಕಿವಿಯಲ್ಲಿ ಮಾತನಾಡಿದಂತೆ ಭಾಸ. ಆಶಾಳ ಧ್ವನಿ ಮೀರಿಸಿ ಇನ್ನೊಂದು ಧ್ವನಿ ನುಡಿಯಲಾರಂಭಿಸಿತು. "ದಕ್ಷತೆ! ದಕ್ಷತೆ! ಹಡಗದ ಪ್ರಯಾಣಿಕರಿಗೆಲ್ಲ ಎಚ್ಚರಿಕೆ! ಹವಾಮಾನದ ಮುನ್ಸೂಚನೆಯಂತೆ ಬರುವ ಳಿಲ ಗಂಟೆಗಳಲ್ಲಿ ಬಹು ದೊಡ್ಡ ತುಫಾನ ಬರುವ ನೀರೀಕ್ಷೆಯಿದೆ. ಆದ್ದರಿಂದ ಹಡಗದ ವೇಗವನ್ನು ಹೆಚ್ಚಿಸಲಾಗಿದೆ. ನಾಳೆ ಬೆಳಿಗ್ಗೆ ಲಂಡನ್ ಸೇರುವ ನಿರೀಕ್ಷೆ ಇದೆ.!" ಇದನ್ನು ಕೇಳಿ ಅರುಣನ ಆತ್ಮಹತ್ಯೆಯ ನಿರ್ಧಾರ ಸಡಲಿಸಿತು. "ನಾಳೆ ಬೆಳಿಗ್ಗೆ ಲಂಡನ್ ಮುಟ್ಟಿದರೆ ಚೆನ್ನಾಗಿಯೇ ಆಯಿತಲ್ಲ! ಲಂಡನ್ನಿನಿಂದ ನ್ಯೂಯಾರ್ಕಿಗೆ ಹೋಗಲು ಹಡಗದಿಂದ ಐದಾರು ದಿನ ಬೇಕು. ಅದರ ಬದಲಿಗೆ ಸ್ವಲ್ಪ ಹಣ ಹೆಚ್ಚು ಕೊಟ್ಟು ಹಡಗದ ಟಿಕೀಟನ್ನು ವಿಮಾನ ಟಿಕೇಟಿಗೆ ಪರಿವರ್ತಿಸಿದರೆ ಎಂಟೇ ತಾಸಿನಲ್ಲಿ ನ್ಯೂಯಾರ್ಕ ತಲುಪಬಹುದು" ಎಂದುಕೊಂಡ. ಲಂಡನ್ ಮುಟ್ಟಿದ ಕೂಡಲೇ ಎಲ್ಲಕ್ಕೂ ಮೊದಲು ಆತ ಮಾಡಿದ ಕೆಲಸ ಟಿಕೇಟು ಬದಲಿಸಿದ್ದು. ಟಿಕೇಟು ಪಡೆದು ಹಿಂದಿರುಗುತ್ತಿದ್ದಾಗ ಡೆಕ್ಕಿನ ಬಳಿಗೆ ಕುಳಿತ ವಿಮಾ ಕಂಪನಿಯ ಚೆಲುವೆಯೊಬ್ಬಳು ಮೃದುವಾಗಿ ಕೂಗಿದಳು "ಕ್ಷಮಿಸಿ ನೀವು ಪ್ರವಾಸದ ವಿಮೆ ಇಳಿಸಿಲ್ಲವೇ?" ಎಂದು ಕೇಳಿದಳು. ಹಿಂದಿನ ಪ್ರವಾಸವಾಗಿದ್ದರೆ ಈ ಕರೆ ಕಿವಿಯ ಮೇಲೆ ಹಾಕಿಕೊಳ್ಳದೇ ಹೋಗುತ್ತಿದ್ದನೇನೋ! ಆದರೆ ಈ ಬಾರಿ ಹಾಗಲ್ಲ.

ಹುಡುಗಿಯರತ್ತ ಹೆಚ್ಚು ಗಮನ ಕೊಡುವ ಉದ್ದೇಶ ಇಟ್ಟುಕೊಂಡಿದ್ದ. ವಿಜಯನಂತೆ ಜೀವನ ನಡೆಸಬೇಕೆಂಬ ಪ್ರಯತ್ನ ನಡೆಸಿದ್ದ. ಈ ಉದ್ದೇಶದಿಂದ ೫೦೦ ಪೌಂಡಿನ ವಿಮೆ ಇಳಿಸಲು ಒಪ್ಪಿದ. ೫೦೦ ಪೌಂಡೇ? ಯಾರಾದರೂ ನಕ್ಕಾರು ಎಂದು ಸಾವಿರ ಪೌಂಡಿನ ವಿಮೆ ಇಳಿಸಿಯೇಬಿಟ್ಟಳು. ಅವಳಿಗೆ ರೊಕ್ಕ ಕೊಟ್ಟು ರಸೀದಿ ಪಡೆದು ವಿಮಾ ನಿಲ್ದಾಣಕ್ಕೆ ಧಾವಿಸಿದ. ವಿಮಾನದಲ್ಲಿ ಒಬ್ಬ ಪ್ರಯಾಣಿಕ ಕಡಿಮೆಯೆಂದು ಹೆಸರು ಕೂಗುತ್ತಲೇ ಇದ್ದರು. ತನಗಾಗಿ ಇತರರು ೩ ನಿಮಿಷ ಕಾಯುವಂತಾಯಿತೆಂದು ಅರುಣನಿಗೆ ನಾಚಿಕೆಯಾಯಿತು.

ವಿಮಾನವು ಗಗನದಲ್ಲಿ ಹಾರುತ್ತಿದ್ದಂತೆ ಅರುಣನಿಗೆ ತಲೆನೋವು ಕಾಣಿಸಿಕೊಂಡಿತು. ಬಹುಶಃ ಕಳೆದ ಎರಡು ವಾರಗಳಿಂದ ಸತತವಾಗಿ ಗತ ದಿನಗಳನ್ನು ನೆನೆಯುತ್ತಿದ್ದಂತೆ ತಲೆ ಭಾರವಾಗಿರಬೇಕೆಂದುಕೊಂಡ. ನೋವನ್ನು ಮರೆಯಲು ಏರ್ ಹೊಸ್ಟೆಸ್‌ಗಳನ್ನು ಕರೆದು ಸೆರೆಗೆ ಆರ್ಡರ ಕೊಟ್ಟ. ಇನ್ನೇನು ಈ ಪ್ರಯಾಣ ಸುಖದ ಹೆದ್ದಾರಿ ಎಂದು ತನಗೇ ಸಮಾಧಾನ ಮಾಡಿಕೊಳ್ಳುತ್ತ ಒಮ್ಮೆ ಹೊರಗೆ ನೋಡಿದ. ಸುಂದರವಾದ ಬಿಸಿಲು, ಕೆಳಗೆ ಹರಡಿಕೊಂಡ ಮೋಡಗಳ ರಾಶಿ. ಅದಕ್ಕೂ ಕೆಳಗೆ ಒಮ್ಮೊಮ್ಮೆ ಕಾಣಿಸುತ್ತಿದ್ದ ಮಲಗಿದ ಮಹಾಸಾಗರ. ಅದೆಂತಹ ರಮ್ಯವಾದ ದೃಶ್ಯ ಎಂದು ಅನ್ನುತ್ತಿರುವಾಗಲೇ ವಿಮಾನ ಚಾಲಕನು, "ನಾವು ಸಣ್ಣದೊಂದು ಬಿರುಗಾಳಿಯನ್ನು ಎದುರಿಸಬೇಕಾಗುವದರಿಂದ ನಿಮ್ಮ ನಿಮ್ಮ ಸೊಂಟಪಟ್ಟಿಗಳನ್ನು ಧರಿಸಿರಿ. ಬಿರುಗಾಳಿಯನ್ನು ತಪ್ಪಿಸಿ ಹೋಗಲು ಪ್ರಯತ್ನಿಸುವೆ. ಆದರೂ ಮುಂಜಾಗ್ರತೆ ಅವಶ್ಯ" ಎಂದ. ಅರುಣನು ಪಟ್ಟಿಯನ್ನು ಕಟ್ಟಿಕೊಂಡು ಸೆರೆಯ ಗ್ಲಾಸನ್ನು ಕೈಗೆ ಎತ್ತಿಕೊಂಡ. ಇನ್ನು ಮುಂದೆ ನಾನು ಅಮೃತವೆಂದು ಕುಡಿಯಬೇಕಾದ ಪೇಯ ಇದು ಎಂದು ತನ್ನಲ್ಲೇ ನಕ್ಕ. ಅಸಹ್ಯವಾದ ಗತಸ್ಮೃತಿಗಳನ್ನೆಲ್ಲ ಮರೆತು ಮುಂದಿನ ಸುಖಸ್ವಪ್ನಗಳನ್ನು ನೆನೆಸಲು ಇದಕ್ಕಿಂತ ಮಹಾಪಥ ಇನ್ನೇನಿದೆ? ಸೇವಿಸುತ್ತ ಹೋದಂತೆ ಮಬ್ಬು ಕವಿಯತೊಡಗಿತ್ತು. ತಾನೇನು ವಿಚಾರಿಸುತ್ತಿದ್ದೆನೆಂಬುದೂ ಅಸ್ಪಷ್ಟವಾಯಿತು. ತಲೆಯನ್ನು ಯಾರೋ ಹಿಡಿದು ಅಲ್ಲಾಡಿಸುತ್ತಿದ್ದಂತೆ ಅನಿಸಿತು. ಇದೇನು? ಈ ಮಾಟಗಾರ್ತಿ, ಮಾರ್ಟಿನಿ (ಸೆರೆ)ಯ ಬದಲಾಗಿ ಇನ್ನೇನು ಕೊಟ್ಟಳೋ ಎಂದು ಏರ್‌ಹೊಸ್ಟೆಸ್‌ಳನ್ನು ಕೂಗಬೇಕೆಂದರೆ ಕಣ್ಣೆಗೆಲ್ಲ ಬೆಂಕಿ ಹತ್ತಿದಂತೆ. ಇದುರಿಗೆ ಜ್ವಾಲಾಮುಖಿಯ ಶಿಖೆಗಳು. ಕಣ್ಣು ತಿಕ್ಕಿಕೊಂಡ ತಲೆ ಸಿಡಿಯುವಂತಹ ನೋವು ಎರಡೂ ಕೈಗಳಿಂದ ಗಟ್ಟಿಯಾಗಿ ತಲೆ ಹಿಡಿದುಕೊಂಡ. ಕಠೋರ ಸ್ಫೋಟವಾದ ಸಪ್ಪಳದಿಂದ ಅರುಣನ ಕಿವಿಗಳು ಮಂದವಾಗಿ ಏನೂ ಕೇಳಿಸದಂತಾಯಿತು.

* * *

ದೇಶಪಾಂಡೆಯವರು ಅನ್ಯಮನಸ್ಕರಾಗಿ ರೇಡಿಯೋ ಸಮಾಚಾರ ಕೇಳುತ್ತಿದ್ದರು. ಪ್ರಧಾನ ಮಂತ್ರಿಗಳ ಪ್ರವಾಸ. ಅಧ್ಯಕ್ಷರ ಕಾರ್ಯಕ್ರಮ ವಿವರ. ರಾಷ್ಟ್ರಪತಿಗಳ ಯಾವದೋ ಉದ್ಘಾಟನ ಎಂದು ಏನೇನೋ ಸುದ್ದಿ. ಕೊನೆಗೆ "ತಾಜಾಕಲಮ್" ಏನನ್ನೊ ಹೇಳಲಾಯಿತು. ಆದರೆ ದೇಶಪಾಂಡೆಯವರ ಪೂರ್ಣ ಲಕ್ಷ್ಯವಿರದ್ದರಿಂದ ನಂತರದ ಪ್ರಸಾರಕ್ಕಾಗಿ ಕಾಯಬೇಕಾಯಿತು. ರೇಡಿಯೋಗ್ರಾಮ ಹಚ್ಚಿ ಅದರ ಧನಿ ಏರಿಸಿ ಕುರ್ಚಿಯನ್ನೆಳೆದುಕೊಂಡು ಕುಳಿತರು. ಕುಕ್! ಕುಕ್! ಕುಕ್! ಎಂದು ನಿರ್ದಿಷ್ಟ ವೇಳೆಗೆ ಸಮಾಚಾರ ಬಂದಿತು. ಸಮಾಚಾರದ ಮಧ್ಯದಲ್ಲಿ ಅಂದು ಮುಂಜಾನೆ ಲಂಡನದಿಂದ ನ್ಯೂಯಾರ್ಕಕ್ಕೆ ಹೊರಟ ಜೆಟ್ ವಿಮಾನ ಬಿರುಗಾಳಿಗೆ ಸಿಕ್ಕಿದಾಗ ಅದರ ಪೆಟ್ರೋಲ ಟ್ಯಾಂಕಿಗೆ ಬೆಂಕಿ ಹತ್ತಿ ಮಧ್ಯ ಆಕಾಶದಲ್ಲಿ ಸ್ಫೋಟವಾಗಿ ಚೂರು ಚೂರಾಗಿ ಕುಸಿಯಿತು. ಈ ವಿಮಾನದಲ್ಲಿ ಭಾರತದ ತರುಣ ವಿಜ್ಞಾನಿ ಡಾ.ಎಸ್. ಅರುಣರು ಭಾರತದಿಂದ ನ್ಯೂಯಾರ್ಕಿಗೆ ಹೊರಟಿದ್ದರು. ಡಾ. ಅರುಣರು ಹಡಗದಲ್ಲಿ ಹೋಗುವವರಿದ್ದರೂ ವೇಳೆ ಉಳಿಯಲೆಂದು ಲಂಡನಿನಲ್ಲಿ ಹಡಗದ ತಮ್ಮ ತಿಕೀಟನ್ನು ವಿಮಾನ ಟೀಕೀಟಿಗೆ ಬದಲಾಯಿಸಿ ಈ ಪ್ರಯಾಣ ಕೈಕೊಂಡಿದ್ದರು. ಯಾರೂ ಜೀವಿಸಿರುವ ಆಸೆಯಿಲ್ಲ. ಆದರೂ ಹಡಗಗಳು, ವಿಮಾನಗಳು ಶೋಧವನ್ನು ನಡೆಸಿವೆ......" ಎಂದು ಕೇಳಿದಾಗ ದೇಶಪಾಂಡೆಯವರಿಗೆ ಬವಳಿ ಬಂದಿತು. ಕುರ್ಚಿಯಲ್ಲೇ ಕುಸಿದರು. ಫರ್ನಿಚರ ಸರಿಪಡಿಸುತ್ತಿದ್ದ ಆಳು ನೋಡಿ ಓಡಿಹೋಗಿ ಆಯಿಯವರಿಗೆ ಹೇಳಿದ. ಎಲ್ಲರೂ ಓಡಿ ಬಂದರು. ಬೇಗ ಪಾನಕ ತಯಾರಿಸಿ ಕುಡಿಸಿದ್ದಾಯಿತು. ಸೊಸೆ ಗಾಳಿ ಬೀಸಿದಳು. ಇಬ್ಬರ ಸಹಾಯದಿಂದ ದೇಶಪಾಂಡೆಯವರು ಬಂದು ಹಾಸಿಗೆಯಲ್ಲಿ ಮಲಗಿದರು. ಸ್ವಲ್ಪ ವಿಶ್ರಮಿಸಲೆಂದು ಹೇಳಿ ಆಯಿಯವರು ಅಡಿಗೆಮನೆಗೆ ಹೋದರು. ಸೊಸೆ ಮೆಲ್ಲಗೆ "ಮಾವಯ್ಯ, ಏನಾಯಿತು. ಸಮಾಚಾರ ಕೇಳುತ್ತಿದ್ದವರಿಗೆ ಏನಾಯಿತು?" ಎಂದು ದೈನ್ಯದಿಂದ ಕೇಳಿದಳು. ಕ್ಷೀಣ ಸ್ವರದಲ್ಲಿ "ಆಶಾಳ ಜೀವ ತೆಗೆದುಕೊಂಡದ್ದು ಸಾಲದೆಂದು ದೈವ ಈಗ ಆಶಾ ತನ್ನ ಜೀವಕ್ಕಿಂತ ಹೆಚ್ಚು ಪ್ರೀತಿಸಿದ ಅರುಣನ ಆಹುತಿ ತೆಗೆದುಕೊಂಡಿದೆ" ಎಂದು ಸ್ವಲ್ಪದರಲ್ಲಿ ಅಪಘಾತದ ವಿವರ ಹೇಳಿದರು. "ಇದಕ್ಕೆ ನಾವೇ ಕಾರಣರಲ್ಲವೇ? ಆಶಾಳನ್ನು ಅರುಣ ಮದುವೆಯಾಗಿದ್ದರೆ ಇಲ್ಲೇ ಭಾರತದಲ್ಲೇ ಪತಿ-ಪತ್ನಿಯರಾಗಿ ಸುಖವಾಗಿ ಇರುತ್ತಿದ್ದರು. ಆಶಾಳನ್ನೇ ಕಳೆದುಕೊಂಡ ಮೇಲೆ ಭಾರತದಲ್ಲಿದ್ದು ಪ್ರಯೋಜನವೇನೆಂದು ತಿರುಗಿ ಅಮೇರಿಕೆಗೆ ಹೊರಟಿರಬೇಕು ಅರುಣ. ಆದರೆ ವಿಧಿಗೆ ಅದೂ ಮನಸ್ಸಿರಲಿಲ್ಲವೆಂದು ಕಾಣುತ್ತದೆ.........ಸಾವಿನ ದವಡೆಗೆ ಕರೆದೊಯ್ದಿತು..... ಈ ಎರಡೂ ಸಾವುಗಳಿಗೇ ನಾನೇ ಕಾರಣನಲ್ಲವೇ?" ಎಂದು ಬಿಕ್ಕಿ ಬಿಕ್ಕಿ ಅತ್ತರು. ಅವರನ್ನು ಸಮಾಧಾನಪಡಿಸುವದು ಹೇಗೆ? ಎಂದು ಸೊಸೆಗೆ ತೋಚದಾಯಿತು. ನಂತರದ ವಾರ್ತಾ ಪ್ರಸಾರದಲ್ಲಿ ಅರುಣನ ಶವ ಸಿಕ್ಕಿದೆಯೆಂದೂ

ಅದನ್ನು ವಿಮಾನ ಮಾರ್ಗವಾಗಿ ಮುಂಬಯಿಗೆ ತಂದು ಅವರ ಆಪ್ತರಿಗೆ ಒಪ್ಪಿಸುವದಾಗಿ ಹೇಳಲಾಯಿತು. ಇದನ್ನು ಕೇಳಿ ದೇಶಪಾಂಡೆಯವರು ಉತ್ತೇಜಿತರಾದರು. ಅರುಣನ ಮನೆಯವರು ಬಡವರು ಮತ್ತು ಅವರು ವಾಸಿಸುವದು ಚಿಕ್ಕ ಊರು, ಎಂದು ತಿಳಿದ ಅವರು ಈಗಲಾದರೂ ಅರುಣನ ನೆನಪಿಗೆ ತನ್ನಿಂದಾದ ಸಹಾಯ ಮಾಡಲೆಂದು ಎದ್ದು ಬಟ್ಟೆಗಳನ್ನು ಧರಿಸಿದರು. ಕಾರಿನಲ್ಲಿ ವಿಮಾನ ಆಫೀಸಿಗೆ ಧಾವಿಸಿ ಅಲ್ಲಿಯ ಅಧಿಕಾರಿಗಳಿಗೆ ಇದ್ದ ಸಂಗತಿಯನ್ನು ವಿವರಿಸಿ ಮುಂಬೈಯಲ್ಲಿ ತಾವೇ ಅತೀ ಹತ್ತಿರದಸಂಬಂಧಿಕರೆಂದರು. ಕಂಪನಿಯವರು ಶವವನ್ನು ಅವರಿಗೆ ಒಪ್ಪಿಸಲು ಸಿದ್ಧರಾದರು. ಕೂಡಲೇ ದೇಶಪಾಂಡೆಯವರು 'ವಿಲ್ಸನ್ ಕಾಲೇಜಿಗೆ ಧಾವಿಸಿ ಅಲ್ಲಿಯ ಹೊಸ ಪ್ರಿನ್ಸಿಪಾಲರನ್ನು ಭೆಟ್ಟಿಯಾದರು. ತಮ್ಮ ಅಪೂರ್ವ ವಿದ್ಯಾರ್ಥಿಯೊಬ್ಬನ ಮೃತದೇಹವನ್ನು ಸಾರ್ವಜನಿಕ ದರ್ಶನಕ್ಕಾಗಿ ಇಡಲು ತಾವು ಸಹಾಯ ಮಾಡುವದಾಗಿ ಹೇಳಿದರಲ್ಲದೇ ಒಂದು ದುಃಖ ಸೂಚಕ ಸಭೆಯನ್ನು ಏರ್ಪಡಿಸಿದರು. ದೇಶಪಾಂಡೆಯವರು ಮುಂದೆ ಪತ್ರಿಕೆಗಳ ಆಫೀಸಿಗೆಲ್ಲ ಓಡಾಡಿ ಈ ವರದಿಗೆ ಪ್ರಚಾರ ಸಿಗುವ ವ್ಯವಸ್ಥೆ ಮಾಡಿದರು. ನಂತರ ಅಂಚೆ ಆಫೀಸಿಗೆ ಹೋಗಿ ಅಲ್ಲಿ ಅರುಣನ ಊರಿಗೆ ಎಕ್ಸಪ್ರೆಸ್ ತಂತಿಯೊಂದನ್ನು ಕಳಿಸಿ ಪರೋಕ್ಷವಾಗಿ ಅರುಣನ ನಿಧನದ ವಾರ್ತೆ ತಿಳಿಸಿ ಮುಂಬೈಗೆ ಬರುವಂತೆ ತಿಳಿಸಿದರು. ಜೊತೆಗೆ ೫೦೦ರೂ.ಗಳ ತಾರ ಮನಿಯಾರ್ಡರ ಮಾಡಲು ಮರೆಯಲಿಲ್ಲ.'

* * *

ಮ್ಯಾಟನಿ ಸಿನೇಮಕ್ಕೆ ಹೋಗಲೆಂದು ಹೆಂಡತಿ ತಯಾರಾಗಿ ಬಂದು, ಮೊದಲೇ ತಯಾರಾಗಿ ತನಗಾಗಿ ಕಾಯುತ್ತ ಕುಳಿತಿದ್ದ ಗಂಡನಿಗೆ 'ಇಂದು ರೇಡಿಯೋ ವಾರ್ತೆ ಕೇಳಿದಿರಾ? ಲಂಡನಿನಿಂದ ನ್ಯೂಯಾರ್ಕಕ್ಕೆ ಹೊರಟ ವಿಮಾನವೊಂದು ಮಧ್ಯ ಆಕಾಶದಲ್ಲಿ ಅಪಘಾತಕ್ಕೀಡಾಯಿತಂತೆ. ಪ್ರವಾಸಿಗರು, ಚಾಲಕರು ಎಲ್ಲ ಸತ್ತರಂತೆ. ಸತ್ತವರಲ್ಲಿ ಭಾರತದ ವಿಜ್ಞಾನಿ ಡಾ.ಎಸ್. ಅರುಣರೂ ಇದ್ದರಂತೆ. ನಿಮ್ಮ ಗೆಳೆಯರೊಬ್ಬ ಅರುಣರು ತುಂಬ ಬ್ರಿಲಿಯಂಟ್ ಇದ್ದರು. ಮೇಧಾವಿ ಎಂದು ನೀವು ಆಗಾಗ ಹೇಳುತ್ತಿರುವಿರಲ್ಲವೇ? ಅದೇ ಅರುಣರಲ್ಲ ತಾನೇ ಇವರು?' ಎಂದಾಗ ವಿಜಯನ ಕಿವಿ ನೆಟ್ಟಗಾದವು ಒಂದು ತಿಂಗಳ ರಜೆಯ ಮೇಲೆ ಅಮೇರಿಕೆಯಿಂದ ಭಾರತಕ್ಕೆ ಬಂದಿದ್ದ ವಿಜಯ.

"ಏನು? ಏನು? ಯಾವಾಗ ಬಂದಿತ್ತು ಸಮಾಚಾರ?" ಎಂದು ಜಿಗಿದು ಕುಳಿತ. "ಸುಮಾರು ಒಂದು ತಾಸಿನ ಹಿಂದಿನ ಸಮಾಚಾರ. ಭಾರತದ ಆಗು ಹೋಗುಗಳಲ್ಲಿ ನಿಮಗೆ ವಿಶೇಷ ಆಸಕ್ತಿಯಿಲ್ಲವಷ್ಟೆ? ಅದಕ್ಕೇ ಹೇಳಲಿಲ್ಲ" ಎಂದು ಸುಮ್ಮನಾದಳು ಪತ್ನಿ.

ವಿಜಯ, ಮುಂದಿನ ವಾರ್ತಾಪ್ರಸಾರಕ್ಕಾಗಿ ಕಾದು ಕುಳಿತ. ಆ ಮೇಲೆ ಬಂದ ಸುದ್ದಿಯಲ್ಲಿ ಡಾ. ಅರುಣರ ಸ್ವಲ್ಪ ಪರಿಚಯ ಕೊಟ್ಟು ಆತನ ದೇಹವನ್ನು ಮುಂಬೈಯಲ್ಲಿ ಅಂತ್ಯದರ್ಶನಕ್ಕಿಡುವರು, ಎಂದಾಗ ವಿಜಯನಿಗೆ ಆತ ತನ್ನ ಸ್ನೇಹಿತ ಅರುಣನೇ ಎಂದು ಮನದಟ್ಟಾಯಿತು. ಎಂತಹ ಮನುಷ್ಯನಿಗೆ ಮರಣ ಬಂದಿತಲ್ಲ ಎಂದು ಮರುಗುತ್ತ ಪತ್ನಿಯತ್ತ ತಿರುಗಿ "ನನಗೆ ಅರುಣನ ಬುದ್ಧಿಮತ್ತೆ, ಸರಳತೆ, ಸಂಯಮ, ಆತ್ಮಾಭಿಮಾನಗಳಿದ್ದರೆ ನೀನು ಪ್ರತಿ ದಿನ ನನ್ನನ್ನು ದೇವರೆಂದೇ ತಿಳಿದು ಪೂಜಿಸುತ್ತಿದ್ದೆ. ಆತನ ಜೀವನ ಒಂದು ತಪಸ್ಸಾಗಿತ್ತು. ಆದರೂ ದೇವರು ನಿರ್ದಯಿ. ಆತನ ತಪಸ್ಸಿನ ಫಲವನ್ನು ಉಣ್ಣಲೂ ಬಿಡಲಿಲ್ಲವಲ್ಲ!" ಎಂದು ಕಣ್ಣೀರು ಹಾಕಿದ. ಮತ್ತೆ ಎದ್ದು "ನಾನು ಅವನ ಅಂತ್ಯದರ್ಶನಕ್ಕೆ ಮುಂಬೈಗೆ ಹೋಗಲಿರುವೆ. ನೀನೂ ಬರುವೆಯಾ?" ಎಂದು ಕೇಳಿದ. ಸ್ವಲ್ಪ ಹೊತ್ತು ಚರ್ಚಿಸಿ ಇಬ್ಬರೂ ಲಗುಬಗೆಯಿಂದ ಸಿದ್ಧರಾಗಿ ವಿಮಾನ ನಿಲ್ದಾಣಕ್ಕೆ ಧಾವಿಸಿದರು. ಕೆಲಹೊತ್ತಿನ ಮೇಲೆ ಅಹಮ್ಮದಾಬಾದ ಮಾರ್ಗವಾಗಿ ಪತಿ-ಪತ್ನಿಯರು ಮುಂಬೈ ತಲುಪಿದರು.

* * *

ಸೊಟ್ಟ ಸೊಟ್ಟ ಅಕ್ಷರಗಳಿಂದ ಸಹಿ ಮಾಡಿ ೫೦೦ ರೂ. ತಾರ ಮನಿಯಾರ್ಡರ ಮತ್ತು ತಂತಿ ಪಡೆದಾಗ ಅರುಣನ ಅಕ್ಕ ಏನೊಂದೂ, ತೋಚದೇ ಗಾಬರಿಯಾದಳು. ಪಕ್ಕದಲ್ಲೆ ವಾಸಿಸುತ್ತಿದ್ದ ವಾಮನ ಮಾಸ್ತರರನ್ನು ಕೂಗಿದಳು. ಮಾಸ್ತರರು ತಂತಿ ಓದಿ ಗಂಭೀರರರಾಗಿ, ಅರುಣನ ತಂತಿಯೆಂದೂ, ಆತ ವಿಮಾನ ಅಪಘಾತಕ್ಕೆ ಸಿಕ್ಕಿದ್ದು ಮುಂಬೈಯಲ್ಲಿರುವನೆಂದೂ ಕೂಡಲೇ ಹೊರಟು ಬರುವಂತೆ ತಿಳಿಸಿ ಹಣ ಕಳಿಸಿದ್ದಾನೆಂದೂ ಹೇಳಿದರು. ನಿಜ ಸಂಗತಿ ಪೋಸ್ಟ ಆಫೀಸಿನವರು ಊರಿಗೆ ಹರಡುವ ತನಕ ಅರುಣನ ಅಕ್ಕ ಮತ್ತು ಭಾವ ಮುಂಬೈಗೆ ಹೊರಟು ನಿಂತಿದ್ದರು.

೧೫

ವಿಲ್ಸನ್ ಕಾಲೇಜಿನ ಗೇಮ್ಸ ಹಾಲಿನಲ್ಲಿ ಅರುಣನ ದೇಹವನ್ನು ಅಂತ್ಯ ದರ್ಶನಕ್ಕಾಗಿ ಇಡಲಾಗಿತ್ತು. ನೂರಾರು ಜನ ಪರಿಚಿತರು ವಿದ್ಯಾರ್ಥಿಗಳು ನೆರೆದರು. ಸಂಜೆಯ ದುಃಖಸೂಚಕ ಸಭೆಗೂ ಸಾಕಷ್ಟು ಜನ ಕೂಡಿತು. ಅರುಣನನ್ನು ನೋಡದವರೂ ಕೂಡ ಭಾಷಣ ಮಾಡಿದರು. ನಡುವೆ ದೇಶಪಾಂಡೆಯವರು ಎದ್ದು ಅರುಣನ ಪರಿಚಯ ತಮಗೆ ಹೇಗೆ ಆಯಿತೆಂದು ವಿವರಿಸಿ ಅವನ ಕಠಿಣ ಜೀವನದ ಬಗ್ಗೆ ವಿವರಿಸಿ ಆತನ ನಿಧನಕ್ಕೆ ತಾವು, ಭಾರತೀಯರೆಲ್ಲ ಹೇಗೆ ಕಾರಣರಾಗಿದ್ದೇವೆ, ಎಂದು ಹೇಳಿದರು. ಅರುಣನು ಮರಳಿ ವಿದೇಶಕ್ಕೆ ಹೋಗಬೇಕಾಯಿತೆಂಬುದನ್ನು ತಿಳಿಸಿದರು.

ಇಂಥ ದೊಡ್ಡ ವಿಜ್ಞಾನಿಯಾಗಬಹುದಾದ ತರುಣ ರತ್ನವನ್ನು ಭಾರತ ಕಳೆದುಕೊಂಡು ಹಾನಿಗೀಡಾದ್ದನ್ನು ಹೇಳಿ ಇನ್ನು ತಾವು ಮಾಡಬೇಕೆಂದಿರುವ ಕಾರ್ಯದ ಬಗ್ಗೆ ಹೇಳಿದರು. ಅರುಣನ ಹೆಸರಿನಿಂದ ಒಂದು ಭೌತವಿಜ್ಞಾನ ಸಂಸ್ಥೆ ಸ್ಥಾಪಿಸಿ ತರುಣ ವಿಜ್ಞಾನಿಗಳಿಗೇ ಅದರಲ್ಲಿ ಕೆಲಸ ಮಾಡುವ ಸೌಲಭ್ಯವೊದಗಿಸುವದು ಮಹತ್ವದ್ದೆಂದರು. ಸಭಿಕರೆಲ್ಲ ತಲೆದೂಗಿ ಚಪ್ಪಾಳೆ ತಟ್ಟಿದರು. ದೇಶಪಾಂಡೆಯವರು ಯಾರು ಯಾರು ಎಷ್ಟು ಹಣ ಕೊಡುವರೆಂದು ಈಗಲೇ ಬಹಿರಂಗಪಡಿಸಬೇಕೆಂದು ಬಿನ್ನವಿಸಿದರು. ಆಗ ಹಲವರು ಮುಖ ಮುಖ ನೋಡಿಕೊಂಡರು. ಇಂತಹ ಸನ್ನಿವೇಶಗಳಿಂದ ಹೇಗೆ ಪಾರಾಗಬೇಕೆಂದು ಬಲ್ಲವರು ಅನೇಕರು ೫-೧೦ ಸಾವಿರಗಳ ವಾಗ್ದಾನ ಮಾಡಿದರು. ಆವೇಶ ಇಳಿದನಂತರ ಇಂಥ ಜನರಿಂದ ಹಣ ಬರದು ಎಂದು ಬಲ್ಲ ದೇಶಪಾಂಡೆಯವರು ಅದಾಗಲೇ ಟೈಪ ಮಾಡಿ ತಂದ ಹಾಳೆಯ ಮೇಲೆ ಹೆಸರು ಮತ್ತು ಹಣದ ವಚನವನ್ನು ಕೊಟ್ಟ ಜನರಿಂದ ಸಹಿಯನ್ನು ತಾವೇ ಪಡೆಯಲಾರಂಭಿಸಿದರು. ದೇಶಪಾಂಡೆಯವರ ಈ ಧೂರ್ತತನ ನೋಡಿ ಅವರೆಲ್ಲ ಬೆಪ್ಪಾದರು. ಸಹಿ ಹಾಕದಿದ್ದರೆ ಉಳಿದ ಸಭಿಕರು ಏನೆಂದಾರು ಎಂಬ ಅಳುಕಿನಿಂದಲೇ ಎಲ್ಲರಿಗೂ ಸಹಿ ಮಾಡುವಂತಾಯಿತು. ಎಲ್ಲ ಮುಗಿದ ನಂತರ ದೇಶಪಾಂಡೆಯವರು ಮೆಲುದನಿಯಲ್ಲಿ "ನನ್ನ ಜೀವಮಾನದ ಗಳಿಕೆ ಸುಮಾರು ಮುಕ್ಕಾಲು ಲಕ್ಷವಿದೆ. ಈ ಎಲ್ಲ ಹಣ ಈ ಸಂಸ್ಥೆಗೆ ಮೀಸಲು" ಎಂದಾಗ ತಮ್ಮ ಕಿವಿ ನಂಬಲು ನೆರೆದವರಿಗೆ ಸಾಧ್ಯವಾಗಲಿಲ್ಲ. ನ್ಯಾಯಾಧೀಶರು ದಾನಶೂರರಿದ್ದಾರೆಂದೂ ಮೆಚ್ಚಿಗೆ ವ್ಯಕ್ತಡಿಸಿದರು. ದೇಶಪಾಂಡೆಯವರು ಮಾತ್ರ ತಮ್ಮಿಂದ ಜರುಗಿದ ಅಪ್ರತ್ಯಕ್ಷ್ಯ ಎರಡು ಕೊಲೆಗಳಿಗೆ ಇದೊಂದು ಪ್ರಕಾರದ ತಪ್ಪುದಂಡವೆಂದುಕೊಂಡರು.

ಇದೆಲ್ಲ ನೋಡುತ್ತ ಸಭೆಯಲ್ಲಿ ಕುಳಿತ ವಿಜಯನಿಗೆ ಆವೇಶ ಬಂದಿರಬೇಕು. ಅಂತೆಯೇ ಎದ್ದು ಒಂದು ತಾಸಿನವರೆಗೆ ತಾನು ಅರುಣನೊಂದಿಗೆ ಕಳೆದ ದಿನಗಳನ್ನು ವಿವರಿಸಿ, ಅರುಣನ ಸಾಧನೆ, ಕಷ್ಟಮಯ ಜೀವನ, ಅಮೇರಿಕೆಯಲ್ಲಿ ಆತ ನಡೆಸಿದ ಆದರ್ಶ ಜೀವನದ ಬಗ್ಗೆ ಹೇಳಿದ. ಅರುಣನ ಸ್ಮೃತಿಗಾಗಿ ತಾನು ಏನೂ ಮಾಡಲು ಸಿದ್ಧನಿದ್ದೇನೆಂದು ತಿಳಿಸಿ-ಸಂಸ್ಥೆಗೆ ಸ್ವತಃ ಸಾವಿರ ರೂಪಾಯಿ ಕೊಡುವದಾಗಿ ಸಾರಿದ. ತಾನು ಅಮೇರಿಕೆಗೆ ತಿರುಗಿ ಹೋದ ಮೇಲೆ ಅಲ್ಲಿ ಅರುಣನ ಪರಿಚಯದವರೊಡನೆ ಸಂಪರ್ಕ ಬೆಳೆಸಿ ಸಂಸ್ಥೆಗೆ ಹೆಚ್ಚಿನ ಧನಸಹಾಯ ಒದಗಿಸುವ ಆಶ್ವಾಸನ ನೀಡಿದ. ಸಭೆಯಲ್ಲಿ ಹಾಜರಿದ್ದ ವಿಮಾ ಕಂಪನಿಯ ಪ್ರತಿನಿಧಿ, ಡಾ. ಅರುಣರು ೨೦ ಸಾವಿರ ರೂ.ಗಳ ವಿಮೆ ಇಳಿಸಿದ್ದನ್ನು ಕೇಳಿ ಅದರ ಹಣ ಬೇಗನೆ ಸಿಗುವಂತೆ ಪ್ರಯತ್ನಿಸುವದಾಗಿ ವಾಗ್ದಾನ ನೀಡಿದ. ಅರುಣನ ಕುಟುಂಬಕ್ಕೆ ದುಃಖಸೂಚಕ ಗೊತ್ತುವಳಿಯೊಡನೆ ಸಭೆ ಮುಕ್ತಾಯವಾಯಿತು. ದೇಶಪಾಂಡೆಯವರು ಇಷ್ಟೊಂದು ರೂಪಾಯಿ ಒಟ್ಟಾದ ಬಗ್ಗೆ-ದೊರಕಿದ ಆಶ್ವಾಸನಗಳ ಬಗ್ಗೆ, ಗೆಲುವಾಗಿದ್ದರು.

ದಿಲ್ಲಿಯಲ್ಲಿ ಲೋಕಸಭೆಯಲ್ಲಿ ಡಾ. ಅರುಣರ ನಿಧನದಿಂದ ದೇಶಕ್ಕಾದ ಹಾನಿಯನ್ನು ಸೂಚಿಸಲು ಎರಡು ನಿಮಿಷಗಳ ತನಕ ಮೌನವನ್ನಾಚರಿಸಲಾಯಿತು. ನಂತರ ಅರುಣರ ನಿಧನದ ಹಿಂದುಮುಂದುಗಳ ಬಗ್ಗೆ ಸಾಕಷ್ಟು ಚರ್ಚೆಯಾಯಿತು. ಬರೇ "ಆಶನಾರ್ಥ" ಕೊಡುವದರಿಂದ Scientists pool ಸಂಸ್ಥೆಯಿಂದ ಕೆಲಸ ನಡೆಯದು! ಎಂದು ತೀರ್ಮಾನಕ್ಕೆ ಬಂದು ಎಂದಿನಂತೆ ಈ ವಿಚಾರವಾಗಿ ಹೆಚ್ಚಿನ ಮಾಹಿತಿ ಕೂಡಹಾಕಲು ಒಂದು ಕಮಿಟಿಯನ್ನು ನೇಮಿಸಲಾಯಿತು. ಪ್ರಧಾನಮಂತ್ರಿಗಳು ಡಾ. ಅರುಣರ ಸ್ಮಾರಕ ನಿಮಿತ್ತ ಕಟ್ಟಬೇಕೆಂದಿರುವ ವಿಜ್ಞಾನ ಕೇಂದ್ರಕ್ಕೆ ೨೦ ಸಾವಿರ ರೂಪಾಯಿ ಕೊಡುವದೆಂದು ಘೋಷಿಸಿದ್ದಲ್ಲದೇ ಜನತೆಗೂ ಉದಾರ ಹೃದಯದಿಂದ ಈ ಸಂಸ್ಥೆಗೆ ಕೊಡುವಂತೆ ಬಿನ್ನವಿಸಿಕೊಂಡರು.

ಅರುಣನ ಊರ ಸಾಲೆಯಲ್ಲಿಯೂ ಸಣ್ಣದೊಂದು ಸಭೆ ಸೇರಿಸಿ ಮೃತರ ಗುಣಗಾನ ಮಾಡಿ ಮುಂಬಯಿ ಸಂಸ್ಥೆಗೆ ನೂರು ರೂಪಾಯಿಗಳನ್ನು ಕಳಿಸಿದರು. ದೇಶದ ಎಲ್ಲ ವರ್ತಮಾನ ಪತ್ರಗಳು ಡಾ. ಅರುಣರ ನಿಧನದಿಂದ ದೇಶಕ್ಕಾದ ಹಾನಿಯ ಬಗ್ಗೆ ಅಗ್ರಲೇಖನಗಳನ್ನು ಬರೆದವಲ್ಲದೇ ಮುಂಬಯಿ ಸಂಸ್ಥೆಗೆ ಉದಾರ ದೇಣಿಗೆ ಕೊಡುವಂತೆ ಹಣ ಸಂಗ್ರಹ ಪ್ರಾರಂಭಿಸಿದವು.

ನಿಧನವಾಗಿ ಎರಡು ದಿನಗಳಾಗಲೇ ಗತಿಸಿದ್ದರಿಂದ ಶವವನ್ನು ಊರಿಗೆ ಒಯ್ಯುವದರಲ್ಲಿ ಯಾವ ಅರ್ಥವೂ ಇಲ್ಲವೆಂದು ದೇಶಪಾಂಡೆಯವರಿಗೆ ಅನಿಸಿದ್ದರಿಂದ ಅಂತ್ಯ ಸಂಸ್ಕಾರವು ಮುಂಬಯಿಯಲ್ಲಿಯೇ ಜರುಗಿತು. ದಹನ ಕಾಲಕ್ಕೆ ದೇಶಪಾಂಡೆಯವರಿಗೆ ತಮ್ಮ ಮಗಳ ಅಂತ್ಯ ಸಂಸ್ಕಾರ ನೆನಪಿಗೆ ಬಂದು ಕಣ್ಣು ತೇವವಾದವು.

ದೇಶದ ನಾಲ್ಕು ಮೂಲೆಗಳಿಂದ ಹಣ ಬರುತ್ತಲೇ ಇತ್ತು. ದೇಶಪಾಂಡೆಯವರ ವರ್ಚಸ್ಸಿನಿಂದ ಚಾಣಾಕ್ಷತನದಿಂದ ಸಾಕಷ್ಟು ಧನ ಸಂಗ್ರಹವಾಗಿತ್ತು. ಕೆಲವೇ ತಿಂಗಳಲ್ಲಿ ಹತ್ತು ಲಕ್ಷದ ನಿಧಿ ಕೂಡಿತು. ಕಟ್ಟಡಕ್ಕಾಗಿ ಒಳ್ಳೆಯ ನಕ್ಷೆ ತಯಾರಾಯಿತು. ದೇಶಪಾಂಡೆಯವರು ಸ್ವತಃ ನಿಂತು ಒಳ್ಳೆಯ ಕಂಟ್ರಾಕ್ಟರನಿಂದ ಒಂದೇ ವರ್ಷದಲ್ಲಿ ಭವ್ಯವಾದ ಕಟ್ಟಡವನ್ನು ನಿಲ್ಲಿಸಿಬಿಟ್ಟರು. ಸಂಸ್ಥೆಗೆ ಬೇಕಾದ ವಿಜ್ಞಾನದ ಉಪಕರಣಗಳು ಅಮೇರಿಕೆಯಿಂದ ಬರುವಂತೆ ವಿಜಯನು ಏರ್ಪಾಡು ಮಾಡಿದ. ಕಟ್ಟಡದ ಉದ್ಘಾಟನೆಯೂ ನಡೆಯಿತು. ಕೂಡಿದ ಪ್ರತಿಷ್ಠಿತ ವ್ಯಕ್ತಿಗಳೆಲ್ಲ ದೇಶಪಾಂಡೆಯವರ ಪರಿಶ್ರಮ ಮತ್ತು ತ್ಯಾಗಗಳನ್ನು ಪ್ರಶಂಸಿಸುತ್ತಿದ್ದಾಗ ಅವರು ಹಿಂದೆ ಹಿಂದಕ್ಕೆ ಓಡಿದರು. "ಈ ತ್ಯಾಗಬುದ್ಧಿಯ ಒಂದಂಶ ಮೊದಲೇ ಬಂದಿದ್ದರೆ ಅರುಣ-ಆಶಾಳ ಈ ಗೋರಿ ನಿಲ್ಲುವ ಪ್ರಸಂಗ ಬರುತ್ತಿತ್ತೆ?" ಎಂದು ಮಿಡುಕಿದರು.





ಡಾ. ಕೃಷ್ಣಾನಂದ ಕಾಮತರು ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅತ್ಯಂತ ಪ್ರಮುಖ ಲೇಖಕರು. ಜೊತೆಗೆ ವಿದೇಶಕ್ಕೆ ತೆರಳಿ ಅಧ್ಯಯನದ ಬಳಿಕ ಭಾರತಕ್ಕೆ ಹಿಂದಿರುಗಿದ ವಿಜ್ಞಾನಿಗಳಲ್ಲಿ ವಿರಳರು. ಭಾರತೀಯ ಪರಿಸರದಲ್ಲಿ ಹೀಗೆ ಹಿಂತಿರುಗಿದ ವಿಜ್ಞಾನದ ಪದವೀಧರನೋರ್ವ, ಅಸಹಾಯಕ, ಅನಾಥಪ್ರಜ್ಞೆ ಅನುಭವಿಸುತ್ತಾನೆಂಬ ಕಟು ವಾಸ್ತವದ ಅನುಭವವನ್ನು 'ಭಗ್ನ ಸ್ವಪ್ನ' ದಲ್ಲಿ ಎತ್ತಿಕೊಳ್ಳುತ್ತಾರೆ. ಒಂದೆಡೆ ಪ್ರತಿಭಾಪಲಾಯನವಾಗುತ್ತದೆ! ಎಂದು ಹೇಳುವ ರಾಜಕಾರಣಿಗಳಾದಿ ಜನ ಮಾಡುವ ಅನ್ಯಾಯ, ನೀಚತನಗಳಿಗೆ ಇಲ್ಲಿ ಸೃಜನಾತ್ಮಕ ರೂಪ ನೀಡುತ್ತಾರೆ. ಕೃಷ್ಣಾನಂದರ ಕಾದಂಬರಿ ಓದುವಾಗ ಅದು ಅವರ ಜೀವನದ ಒಂದು ಭಾಗವಾಗಿರುವಂತೆ ತುಂಬ ಆಪ್ತವಾದ ಅನುಭವವನ್ನು ನೀಡುತ್ತದೆ. ವಿಜ್ಞಾನಿಗಳಿಗೆ, ಬೌದ್ಧಿಕ ಸಾಧನೆ ಮಾಡುವವರಿಗೆ, ಅಮೇರಿಕಾ ಬರಮಾಡಿಕೊಂಡು ಅಭಿವೃದ್ಧಿಯ ಹಾದಿಯಲ್ಲಿ ದಾಪುಗಾಲು ಹಾಕಿ ಮುನ್ನಡೆಯುತ್ತಿದೆ. ಭಾರತದಲ್ಲಿ ವಿಜ್ಞಾನಿಯಾಗಿ ಕಲಿತವಿದ್ಯೆಯನ್ನು ಕ್ರಿಯಾಶೀಲಗೊಳಿಸುವದು, ಸಾಧ್ಯವಿಲ್ಲವೆಂಬ ಕಟುವಾಸ್ತವವನ್ನು ಕಾಮತರ ಕಾದಂಬರಿ ನಮಗೆ ತಿಳಿಸುತ್ತದೆ. ಆದರ್ಶ ಮತ್ತು ವಾಸ್ತವಗಳ ಸೇತುವೆಯಾಗಿ ಪ್ರತಿಭಾಪಲಾಯನಕ್ಕೆ ಕಾರಣವಾದ ಘಟನೆ, ಸನ್ನಿವೇಶಗಳನ್ನು ಸಾಮಾಜಿಕ ನೆಲೆಯಲ್ಲಿ ಶೋಧಿಸುವ 'ಭಗ್ನ ಸ್ವಪ್ನ' ಈ ನಿಟ್ಟಿನಲ್ಲಿ, ನಾವು ಚಿಂತಿಸುವಂತೆ ಮಾಡುತ್ತದೆ.

'ಭಗ್ನ ಸ್ವಪ್ನ' ಕೃಷ್ಣಾನಂದರ ವೈಯಕ್ತಿಕ ಬದುಕಿನ ನೋವನ್ನು ಸೃಜನಶೀಲವಾಗಿಸಿದ ಕಾದಂಬರಿಯಾಗಿದೆ. ಕಾಮತರ ಶೈಲಿ, ನೇರ, ಸರಳ ಮತ್ತು ಸ್ಪಷ್ಟ.

ಡಾ.ಜಿ.ಎಮ್. ಹೆಗಡೆ

